# ಪ್ರಥಮ
# ದೈವ ಗ್ರಂಥ
# ಭಗವದ್ಗೀತೆ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





ಪ್ರಥಮ

# ದೈವ ಗ್ರಂಥ

# ಭಗವದ್ಗೀತೆ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

| | | | |
|---|---|---|---|
| ತ್ರೈತ ಶಕ | : 38 | ಪ್ರಥಮ ಮುದ್ರಣ : ಜುಲೈ–2016 | |
| ಪ್ರತಿಗಳು | : 1000 | **ಬೆಲೆ. 110/–** | |

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ
    ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ
    (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-
    ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು.
    (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ
    (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ಸೃಷ್ಠಿಗೆ ಪೂರ್ವ ಈ ದಿನವಿರುವ ಶೂನ್ಯವಾಗಲಿ, ಗಾಳಿಯಾಗಲಿ, ಅಗ್ನಿ, ನೀರು, ಭೂಮಿಯಾಗಲಿ ಏನೂ ಇಲ್ಲ. ಅದು ಯಾರ ಊಹೆಗೂ, ಯಾರ ಮೇಧಸ್ಸಿಗೂ ತಿಳಿಯದ ಸ್ಥಿತಿ. ಏನೂ ಇಲ್ಲದ ಆ ಸ್ಥಿತಿಯನ್ನು ಯಾರೂ ಹೋಲಿಸಿಕೊಳ್ಳಲಾರರು. ಆ ಸಮಯದಲ್ಲಿರುವುದೆಲ್ಲಾ ದೈವವೇ. ದೈವವನ್ನು ಯಾರಾಗಲಿ ಹೀಗಿದೆಯೆಂದು ಹೇಳಲಾರರು. ಏನೂ ಅಲ್ಲದ ಸ್ಥಿತಿಯನ್ನು ದೇವರೆಂದು ನೀವೇಕೆ ಹೇಳುತ್ತಿದ್ದೀರಾ? ಎಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಸೃಷ್ಠಿಗೆ ಮೊದಲು ದೇವರೆಂದು ಹೇಳುವುದಕ್ಕೆ ನಿಮಗೆ ಒಂದು ಆಧಾರವಾದರೂ ಇದೆಯಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಸೃಷ್ಠಿ ಇಲ್ಲದ ಅಗಮ್ಯಗೋಚರ ಸ್ಥಿತಿಯನ್ನೇ ದೇವರೆಂದು ಹೇಳುವುದಕ್ಕೆ ಸ್ವಲ್ಪ ಆಧಾರವಿದೆ. ಸೃಷ್ಠಿ ನಂತರ ಆಕಾರವಿಲ್ಲದ ದೇವರಿಗೆ ಸೃಷ್ಠಿಗೆ ಪೂರ್ವ ಆಕಾರ ಇತ್ತು. ಯಾರೂ ಊಹಿಸಲಾರದ ಸ್ಥಿತಿಯೇ ದೇವರ ಆಕಾರವಾಗಿ ಇತ್ತು. ಸೃಷ್ಠಿ ನಂತರ ಹೆಸರಿಲ್ಲದ ದೇವರಿಗೆ ಸೃಷ್ಠಿಗೆ ಪೂರ್ವ ತಿಳಿಯದ ಸ್ಥಿತಿಯೇ ಹೆಸರಾಗಿ ಇತ್ತು. ಹಾಗೆಯೇ ಸೃಷ್ಠಿ ನಂತರ ಕೆಲಸವಿಲ್ಲದ ಕ್ರಿಯಾರಹಿತನಿಗೆ ತಿಳಿಯದ ಸ್ಥಿತಿಯಲ್ಲಿ ದೇವರ ಭಾವಗಳು ದೇವರಿಗೆ ಕ್ರಿಯೆಯಂತೆ ಇರುತ್ತಿದ್ದವು. ಸೃಷ್ಠಿ ನಂತರವೂ ಸಹ ದೇವರಿದ್ದಾನೆ. ಆದರೆ ಸೃಷ್ಠಿ ನಂತರ ಇರುವ ವಿಧಾನಕ್ಕೆ ವಿರುದ್ಧವಾಗಿ ಸೃಷ್ಠಿ ಇಲ್ಲದ ಸ್ಥಿತಿಯಲ್ಲಿ ಇರುತ್ತಿದ್ದನು. ಇಲ್ಲಿ ದೇವರನ್ನು ಕುರಿತು ಇರುವ ಆಧಾರ ಸಂಪೂರ್ಣವಾಗಿ ಲಭಿಸುತ್ತಿದೆ. ಅದೇನೆಂದರೆ! ಸೃಷ್ಠಿ ನಂತರ ಇರುವುದಕ್ಕೆ ಭಿನ್ನವಾಗಿ ಸೃಷ್ಠಿ ಪೂರ್ವ ದೇವರಿರುತ್ತಿದ್ದನು. ಈಗ ಯಾವುದಾದರೆ ದೇವರಿಗೆ ಮುಖ್ಯಧರ್ಮವಾಗಿ ಇದೆಯೊ, ಅದಕ್ಕೆ ಪೂರ್ತಿ ವಿರುದ್ಧವಾಗಿ ಅಥವಾ ಭಿನ್ನವಾಗಿ ಸೃಷ್ಠಿಗೆ ಪೂರ್ವ ದೇವರಿರುತ್ತಿದ್ದನು.

ಸೃಷ್ಠಿ ನಂತರ ದೇವರಿಗೆ ಮುಖ್ಯವಾಗಿ ಮೂರು ಧರ್ಮಗಳು ಇವೆ. ಆ ಮೂರನ್ನೂ ಕ್ರಮದಲ್ಲಿ ಸೇರಿಸಿ ಹೇಳಿದರೆ ರೂಪ, ನಾಮ, ಕ್ರಿಯಾ ರಹಿತನೆಂದು ಹೇಳಬಹುದು. ಈಗ ಸೃಷ್ಠಿ ಇರುವಷ್ಟು ಕಾಲ ದೇವರಿಗೆ ರೂಪ ಇಲ್ಲ, ಹೆಸರು ಇಲ್ಲ, ಕೆಲಸವೂ ಇಲ್ಲ. ಆದ್ದರಿಂದ ಈ ಮೂರು ಧರ್ಮಗಳಿಗೆ ವಿಭಿನ್ನವಾಗಿ

ಸೃಷ್ಠಿ ಪೂರ್ವ ದೇವರಿದ್ದಾನೆಂದರೆ, ಆಗ ಆತನಿಗೆ ರೂಪ ಇದೆ, ಹೆಸರು ಇದೆ, ಕೆಲಸ ಇದೆಯೆಂದು ಹೇಳಬಹುದು. ಆದ್ದರಿಂದ ಸೃಷ್ಠಿಗೆ ಮೊದಲು ದೇವರು ರೂಪ, ನಾಮ, ಕ್ರಿಯಾ ಸಹಿತನೆಂದು ಹೇಳಬಹುದು. ಆಗ ಮೂರಕ್ಕೂ ಸಹಿತನಾದರೆ, ಈಗ ಮೂರಕ್ಕೂ ರಹಿತನಾಗಿ ಇದ್ದಾನೆ. ಆಗ ರೂಪ, ನಾಮ ಕ್ರಿಯಾ ಸಹಿತನೆಂದು ಹೇಳುವುದಕ್ಕೂ, ತೋರಿಸುವುದಕ್ಕೂ ಆಧಾರವೇನಾದರೂ ಇದೆಯಾ ಅಂದರೆ! ಇದೆಯೆಂದೇ ಹೇಳಬಹುದು. ಆ ದಿನ ಆತನಿಗೆ (ದೇವರಿಗೆ) ಕ್ರಿಯೆ (ಕೆಲಸ) ಇದೆಯೆಂದು ಹೇಳುವುದಕ್ಕೆ ಈ ದಿನ ನಮ್ಮೆಲ್ಲರಿಗೂ ಕಾಣಿಸುವ ಪ್ರಪಂಚವೇ ಸಾಕ್ಷಿ. ಆ ದಿನ ಇಲ್ಲದ್ದನ್ನು ಸೃಷ್ಠಿಸಿ ಇಡುವುದು ಕೆಲಸವೇ ಅಲ್ಲವೆ! ದೇವರಿಂದ ಸೃಷ್ಠಿಸಲಾಗಿರುವ ಪ್ರಪಂಚವೇ ದೇವರ ಕ್ರಿಯೆಗೆ ಪ್ರತಿ ರೂಪವೆಂದು ಹೇಳಬಹುದು. ಒಂದು ಕೆಲಸ ನಡೆಯುವುದಕ್ಕೆ ಮೊದಲು ಅದಕ್ಕೆ ಸಂಬಂಧಿಸಿದ ಯೋಚನೆ ಬರಬೇಕು. ಒಂದು ಆಲೋಚನೆ ಬಂದ ನಂತರ ಅದರ ಪ್ರಕಾರ ಪಥಕವನ್ನು ಹಾಕಿ, ಪಥಕದ ಪ್ರಕಾರ ಕೆಲಸವನ್ನು ಮಾಡಬೇಕಾಗಿರುತ್ತದೆ. ಒಂದು ಪಥಕ ಇದೆ ಎಂದರೆ ಅದನ್ನು ರಚಿಸುವ ಬುದ್ಧಿ ಇರಬೇಕು. ಬುದ್ಧಿ ಇದ್ದರೆ ಅದನ್ನು ಕ್ರಿಯಾರೂಪ ಮಾಡುವುದಕ್ಕೆ ಆ ವಿಷಯವನ್ನು ಹೊರಗೆ ತರುವ ಮನಸ್ಸು ಸಹ ಇರಬೇಕು. ಸೃಷ್ಠಿ ಪೂರ್ವದಲ್ಲಿರುವ ದೇವರಿಗೆ ಮನಸ್ಸು ಬುದ್ಧಿಯೂ ಸಹ ಇತ್ತು. ಈ ವಿಷಯ ನಮಗೆ ತಿಳಿಯುವುದಕ್ಕೆ ಭಗವದ್ಗೀತೆಯಲ್ಲಿ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾನೆ ನೋಡಿರಿ...

**ಶ್ಲೋ॥ ಮಹರ್ಷಯ ಸ್ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ॥**

ಈ ಶ್ಲೋಕದಲ್ಲಿ ಲೋಕದಲ್ಲಿನ ಪ್ರಜೆಗಳೆಲ್ಲ ನನ್ನೊಂದರ ಮನೋಭಾವದಿಂದ ಹುಟ್ಟಿದ್ದಾರೆಂದು ಹೇಳುವುದು ನಡೆದಿದೆ. ಇದನ್ನನುಸರಿಸಿ ದೇವರಿಗೆ ಮನಸ್ಸು, ಬುದ್ಧಿ ಮೊದಲಾದ ಸೂಕ್ಷ್ಮ ಶರೀರವಿದ್ದಿತೆಂದು, ಅದು ಸೂಕ್ಷ್ಮ ಆದ್ದರಿಂದ ಯಾರಿಗೂ ತಿಳಿಯದೆಂದು ಹೇಳಬಹುದು. ಸೃಷ್ಠಿಗೆ ಪೂರ್ವ

ರೂಪ, ನಾಮ, ಕ್ರಿಯೆಗಳಿರುವ ದೇವರು, ಸೃಷ್ಠಿ ನಂತರ ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿದ್ದಾನೆ. ಸೃಷ್ಠಿಗೆ ಮೊದಲಿರುವ ದೇವರ ಧರ್ಮಗಳು ಸೃಷ್ಠಿ ನಂತರ ಭಿನ್ನವಾಗಿ ಇರುವುದಕ್ಕೆ ದೇವರೇ ನಿರ್ಣಯಿಸಿಕೊಂಡಿದ್ದಾನೆ. ಆದ್ದರಿಂದ ಭಗವದ್ಗೀತೆಯಲ್ಲಿ ತನ್ನನ್ನು (ದೇವರನ್ನು) ಅವ್ಯಕ್ತನೆಂದು ಹೇಳಿಕೊಂಡಿದ್ದಾನೆ. ಎಲ್ಲ ವಿಧಗಳ ಅವ್ಯಕ್ತನಾಗಿ ಇರುವುದಕ್ಕೆ ತನಗೆ ರೂಪ, ನಾಮ, ಕ್ರಿಯೆಗಳು ಇಲ್ಲದಂತೆ ಮಾಡಿಕೊಂಡಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ಯಾರಾದರೂ ದೇವರನ್ನು ರೂಪ, ನಾಮ, ಕ್ರಿಯಾರಹಿತನೆಂದು ಹೇಳಬೇಕಾಗುತ್ತದೆ. ಅದೇ ನಿಜವಾದ ದೇವರ ಧರ್ಮ.

ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬರಬಹುದು. ಅದೇನೆಂದರೆ! ದೇವರು ಸೃಷ್ಠಿಗೆ ಪೂರ್ವ ಸೂಕ್ಷ್ಮವಾಗಿದ್ದು ಆಕಾರ, ಹೆಸರು, ಕೆಲಸ ಹೊಂದಿದ್ದಾನೆಂದು ಹೇಳಿದ್ದೀರ. ದೇವರು ಎಲ್ಲ ವಿಧಗಳಲ್ಲಿ ಸೂಕ್ಷ್ಮವಾಗಿ ಇರುವುದರಿಂದ ಆತನು ಯಾರಿಗೂ ತಿಳಿಯುವುದಕ್ಕೆ ಅವಕಾಶವಿಲ್ಲ. ಸೃಷ್ಠಿಗೆ ಪೂರ್ವದಲ್ಲಿ ಮನುಷ್ಯರೇ ಇಲ್ಲ, ಆದ್ದರಿಂದ ಆತನನ್ನು (ದೇವರನ್ನು) ಯಾರೂ ನೋಡಲಿಲ್ಲ. ಒಂದು ವೇಳೆ ಈಗ ಯಾರಾದರೂ ತಿಳಿಯುವುದಕ್ಕೆ ಆಕಾರ ವಾಗಲಿ, ಹೆಸರಾಗಲಿ, ಕೆಲಸವಾಗಲಿ ಇಲ್ಲ. ಆದ್ದರಿಂದ ಆತನನ್ನು ಯಾರೂ ತಿಳಿಯಲಾರರು. ದೇವರಿಗೆ ರೂಪ ನಾಮ ಕ್ರಿಯೆಗಳಿರುವಾಗ ಮನುಷ್ಯರು ಇಲ್ಲ. ಮನುಷ್ಯರಿರುವಾಗ ದೇವರಿಗೆ ರೂಪನಾಮ ಕ್ರಿಯೆಗಳಿಲ್ಲ. ಆದ್ದರಿಂದ ಯಾವ ಮನುಷ್ಯನೇ ಆಗಲಿ ದೇವರನ್ನು ತಿಳಿಯಲಾರನು. ದೇವರ ವಿಷಯ ಮಾತ್ರ ಯಾವ ಮನುಷ್ಯನಿಗೂ ತಿಳಿದಿಲ್ಲ. ಇದರ ಪ್ರಕಾರ ದೇವರನ್ನು ಕುರಿತಿರುವ ವಿಷಯವಾಗಲಿ, ದೇವರ ಜ್ಞಾನವನ್ನಾಗಲೀ ಯಾವ ಮನುಷ್ಯನೂ ಹೇಳಲಾರನೆಂದು ತಿಳಿಯುತ್ತಿದೆ. ಸಂದರ್ಭಾನುಸಾರ ಹೇಳಿಕೊಂಡರೆ ದೇವರ ವಿಷಯ ದೇವರಿಗೆ ಹೊರತು, ಯಾವ ಮನುಷ್ಯನಿಗೂ ತಿಳಿಯದೆಂದು ಒಂದು ಮೂಲ ಗ್ರಂಥದಲ್ಲಿ ಹೇಳಲಾಗಿದೆ. ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಮೂರನೆಯ ಸೂರಾದಲ್ಲಿ, ಏಳನೇ ಆಯತ್ "ದೇವರ ಜ್ಞಾನ ದೇವರಿಗೆ

ಹೊರತು ಮತ್ಯಾವ ಮನುಷ್ಯನಿಗೂ ತಿಳಿಯದು" ಎಂದು ಇದೆ. ದೇವರು ಸೃಷ್ಠಿ ಪೂರ್ವ ಆಕಾರದಿಂದಿದ್ದರೂ ಸೂಕ್ಷ್ಮವಾಗಿರುವವನೇ, ಈಗ ಆಕಾರ ಇಲ್ಲದಿದ್ದರೂ ಸೂಕ್ಷ್ಮವಾಗಿರುವವನೇ. ಆದ್ದರಿಂದ ಯಾವ ಮನುಷ್ಯನಿಗೂ ದೇವರಾಗಲೀ, ದೇವರ ಪೂರ್ತಿ ಸಮಾಚಾರವಾಗಲೀ ತಿಳಿಯದೆಂದೇ ಹೇಳಬಹುದು. ಹಾಗಿರುವಾಗ ಒಬ್ಬ ಮನುಷ್ಯನಾದ ಶ್ರೀಕೃಷ್ಣನು "ದೇವರಿಗೆ ಮನಸ್ಸು, ಬುದ್ಧಿ ಇದೆಯೆಂದೂ, ಆತನ ಸಂಕಲ್ಪದಿಂದಲೇ ಜಗತ್ತನ್ನು ಸೃಷ್ಠಿಸಿದ್ದಾನೆಂದು" ಹೇಳಿದರೆ ಅದನ್ನು ನಿಜವೆಂದು ನಾವು ಹೇಗೆ ನಂಬಬೇಕು? ಆತನು ಹೇಳಿರುವ ಭಗವದ್ಗೀತೆ ನಿಜವೆಂದು ಹೇಗೆ ವಿಶ್ವಾಸಿಸಬೇಕು? ದೇವರ ಸಮಾಚಾರವಾದ ದೇವರ ಜ್ಞಾನವಾಗಲೀ, ದೇವರ ಧರ್ಮಗಳಾಗಲೀ ದೇವರಿಗೆ ಹೊರತು ಇತರ ಯಾವ ಮನುಷ್ಯನಿಗೂ ತಿಳಿಯದೆಂದು ದೇವರೇ ಹೇಳಿರುವಾಗ, ಮನುಷ್ಯನಾದ ಕೃಷ್ಣನು ಹೇಳಿರುವುದನ್ನು ಏಕೆ ನಂಬಬೇಕು? ಎಂದು ಪ್ರಶ್ನಿಸಬಹುದು.

ಅದಕ್ಕೆ ನಮ್ಮ ಸಮಾಧಾನವೇನೆಂದರೆ! ನೀವು ಕೇಳಿದ ಪ್ರಶ್ನೆ ಬಹಳ ಉನ್ನತವಾದುದು. ಅದು ಎಷ್ಟು ಉನ್ನತವಾದುದೋ ಅದಕ್ಕೆ ಸಮಾಧಾನವೂ ಸಹ ಅಷ್ಟೇ ಉನ್ನತವಾಗಿ ಇದೆ. ದೇವರ ಮಾತೇ ಶಾಸನ. ಆದ್ದರಿಂದ ಆತನ ಮಾತು ಪೂರ್ತಿ ಸತ್ಯ. ಆತನು ಸೃಷ್ಠಿ ಪೂರ್ವ ರೂಪ ನಾಮ ಕ್ರಿಯೆಗಳಿರುವವನೆಂದೂ, ನಂತರ ರೂಪ ನಾಮ ಕ್ರಿಯೆಗಳಿಲ್ಲವೆಂದು ಹೇಳಿದವರೂ ಮನುಷ್ಯರೇ. ದೇವರು ನಾನು ಇಂತಹವನೆಂದು ಯಾರ ಹತ್ತಿರವೂ ಹೇಳಲಿಲ್ಲ. ಆತನನ್ನು ಕುರಿತು ನಮಗೆ ಮೊದಲು ಸಮಾಚಾರವನ್ನು ಕೊಟ್ಟಿರುವುದು ಭಗವದ್ಗೀತೆ. ಆ ಭಗವದ್ಗೀತೆಯನ್ನು ಹೇಳಿರುವವನು ಶ್ರೀಕೃಷ್ಣನು. ಶ್ರೀಕೃಷ್ಣನು ಒಬ್ಬ ಮನುಷ್ಯನಾಗಿರುವುದರಿಂದ ದೇವರ ವಿಷಯ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂಬ ವಾಕ್ಯವನ್ನನುಸರಿಸಿ ಕೃಷ್ಣನ ಮಾತನ್ನು ಏಕೆ ನಂಬಬೇಕು? ಭಗವದ್ಗೀತೆಯಲ್ಲಿ ನಿಜವಾದ ದೇವರ ಜ್ಞಾನವಿದೆಯಾ? ಎಂದು ಅನುಮಾನ ಬಾರದೇ ಇರುವುದಿಲ್ಲ. ಕೃಷ್ಣನು ಮನುಷ್ಯನಾಗಿರುವುದರಿಂದ ಆತನ

ಮಾತುಗಳನ್ನು ನಂಬಬಾರದೆಂದು, ಕೆಲವರು ವಾದಿಸುವುದಕ್ಕೆ ಅವಕಾಶವಿದೆ. ಈ ವಿಷಯವಾಗಿ ನನ್ನನ್ನು ಕೇಳಿದರೆ ನಾನು ಏನು ಹೇಳುತ್ತಿದ್ದೇನೆಂದರೆ! ಕೃಷ್ಣನು ಮನುಷ್ಯನಾದರೆ ಆತನ ಮಾತುಗಳೆಲ್ಲವೂ ಅಸತ್ಯವೇ ಆಗುತ್ತವೆ. ಒಂದು ವೇಳೆ ಕೃಷ್ಣನು ಮನುಷ್ಯನಾಗದೇ ಹೋದರೇ ಆತನ ಮಾತುಗಳನ್ನು ಪೂರ್ತಿಯಾಗಿ ನಂಬಬಹುದು. ಆದರೇ ಪ್ರಪಂಚಕ್ಕೆಲ್ಲ ತಿಳಿದ ವಿಷಯವೇನೆಂದರೆ, ಕೃಷ್ಣನು ಒಬ್ಬ ಮನುಷ್ಯನೆಂದು. ಆತನೂ ಸಹ ಒಬ್ಬ ತಾಯಿಗೆ ಹುಟ್ಟಿರುವ ಮಗನೆಂದೂ, ಎಲ್ಲರಂತೆ ನಿದ್ರೆ, ಎಚ್ಚರ, ಮೈಥುನ (ಮಿಥುನ ಅಥವಾ ಸ್ತ್ರೀ ಸಾಂಗತ್ಯ) ಇರುವ ಮನುಷ್ಯ ಎಂದು ಎಲ್ಲರೂ ಹೇಳಬಲ್ಲರು. ದೇವರ ವಿಷಯ ದೇವರಿಗೆ ಹೊರತು ಯಾವ ಮನುಷ್ಯನಿಗು ಆಥವಾ ಮನುಷ್ಯನಾದವನಿಗೆ ಯಾರಿಗೂ ತಿಳಿಯದೆನ್ನುವ ವಾಕ್ಯವನ್ನನುಸರಿಸಿ, ದೇವರ ವಿಷಯವನ್ನು (ಜ್ಞಾನವನ್ನು) ದೇವರೇ ಹೇಳಬೇಕೆ ಹೊರತು, ಯಾರೂ ಹೇಳಲಾರರೆಂದು ತಿಳಿಯುತ್ತಿದೆ. ಆದರೆ ಇಲ್ಲಿ ಒಂದು ಸಮಸ್ಯೆ ಬಂದಿದೆ. ಅದು ಏನೆಂದರೆ! ದೇವರು ಸ್ವತಹವಾಗಿ ಯಾರ ಹತ್ತಿರವೂ ಮಾತನಾಡುವುದಿಲ್ಲ. ದೇವರು ನೇರವಾಗಿ ಯಾರ ಹತ್ತಿರವೂ ಮಾತನಾಡುವುದಿಲ್ಲ ಎನ್ನುವ ವಿಷಯ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೇಳಲಾಗಿದೆ.

ದೇವರು ಯಾರ ಹತ್ತಿರವೂ ಮಾತನಾಡದೆ, ತನ್ನ ವಿಷಯವು ಹೇಳದಿರುವಾಗ, ಯಾವ ಮನುಷ್ಯನಿಗೂ ದೇವರ ವಿಷಯ ತಿಳಿಯದಿರುವಾಗ, ದೇವರ ವಿಷಯವು ಮನುಷ್ಯರಿಗೆ ತಿಳಿಯುವ ಅವಕಾಶವೇ ಇಲ್ಲದಂತಾಗುತ್ತದೆ. ಆದರೇ ನನ್ನ ವಿಷಯ ನನಗೆ ಹೊರತು ಯಾರಿಗೂ ತಿಳಿಯದೆಂದು ಹೇಳಿದ ದೇವರೇ ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ 7,8ನೇ ಶ್ಲೋಕಗಳಲ್ಲಿ ಯಾವಾಗ ನನ್ನ ವಿಷಯ ಭೂಮಿ ಮೇಲೆ ತಿಳಿಯದಂತಾದೋ, ಆಗ ನಾನು ಬಂದು ನನ್ನ ಜ್ಞಾನವನ್ನು ತಿಳಿಸುತ್ತೇನೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಯಾವ ಯುಗದಲ್ಲಾದರೂ ನನ್ನ ಧರ್ಮಗಳು ಭೂಮಿ ಮೇಲೆ ತಿಳಿಯದಂತೆ ಹೋದರೆ, ಆಗ ಬಂದು ತಿಳಿಸುತ್ತೇನೆಂದು ಎರಡು ಶ್ಲೋಕಗಳ

ರೂಪದಲ್ಲಿ ಹೇಳಲಾಗಿದೆ. ಭೂಮಿ ಮೇಲೆ ಅನೇಕ ಪ್ರಾಂತಗಳಲ್ಲಿ ಮನುಷ್ಯರಿದ್ದಾರೆ. ಒಂದೊಂದು ಪ್ರಾಂತದಲ್ಲಿ ಒಂದೊಂದು ಭಾಷೆ ಇರುವುದು ನಮಗೆ ತಿಳಿದ ವಿಷಯವೇ. ಯಾವ ಭಾಷೆ ತಿಳಿದ ಮನುಷ್ಯರಿಗೆ ಆ ಭಾಷೆಯಲ್ಲೇ ಮಾತನಾಡಿದರೆ ಅವರಿಗೆ ವಿಷಯ ಅರ್ಥವಾಗುತ್ತದೆ. ಒಂದು ಭಾಷೆ ತಿಳಿದವರಿಗೆ ಮತ್ತೊಂದು ಭಾಷೆಯಲ್ಲಿ ಏನು ಹೇಳಿದರೂ ಅವನಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ದೇವರು ಬಂದು ತನ್ನ ವಿಷಯ ಹೀಗೆ ಎಂದು ಹೇಳಬೇಕೆಂದುಕೊಂಡರೂ, ಕೇಳುವವನಿಗೆ ತಿಳಿದ ಭಾಷೆಯಲ್ಲೇ ಹೇಳಬೇಕಾಗಿರುತ್ತದೆ. ಅಷ್ಟೇ ಅಲ್ಲದೆ ಕೇಳುವವನು ಮನುಷ್ಯನಾದ್ದರಿಂದ ಹೇಳುವವನೂ ಸಹ ಮನುಷ್ಯನಾಗಿರಬೇಕು. ಹಾಗಲ್ಲದೆ ದೇವರು ಯಾವುದೋ ರೂಪದಲ್ಲಿ ಬಂದು ಯಾವುದೋ ಭಾಷೆಯಲ್ಲಿ ಹೇಳಿದರೆ, ಮನುಷ್ಯನಿಗೆ ಏನೂ ತಿಳಿಯದಂತಾಗುತ್ತದೆ. ಹೇಳಿರುವ ವಿಷಯ ಆತನಿಗೆ ಸೇರುವುದಿಲ್ಲ. ಆದ್ದರಿಂದ ಹೇಳುವವನು ಮನುಷ್ಯನಾಗಿರಬೇಕು, ಹೇಳುವ ಭಾಷೆಯೂ ಸಹ ಕೇಳುವವನಿಗೆ ತಿಳಿದಿರುವುದಾಗಿ ಇರಬೇಕು.

ಇದೆಲ್ಲವನ್ನೂ ನೋಡಿದರೆ ದೇವರ ಜ್ಞಾನ ದೇವರಿಗೆ ತಿಳಿದರೂ, ಯಾವ ಮನುಷ್ಯ ಹೇಳದೇ ಇದ್ದರೂ, ದೇವರು ದೇವರಾಗಿ ಬಾರದೇ ಮನುಷ್ಯನ ಹಾಗೆ ಮಾರು ವೇಷದಲ್ಲಿ ಬಂದು ಹೇಳಿಹೋಗಬಹುದಲ್ಲವೆ! ಹಾಗೆ ಹೇಳಿದರೆ ದೇವರು ದೇವರಾಗಿ ಯಾರೊಂದಿಗೂ ನೇರವಾಗಿ ಮಾತನಾಡದೆ ಮನುಷ್ಯ ಆಕಾರದಲ್ಲಿ ಮಾತನಾಡಿದಂತಾಗುತ್ತದೆ. ಅಷ್ಟೇ ಅಲ್ಲದೆ ತನ್ನ ವಿಷಯ ಯಾವ ಮನುಷ್ಯ ಹೇಳಲಾರನು ಆದ್ದರಿಂದ ತಾನೇ ಹೇಳಿದಂತಾಗುತ್ತದೆ. ದೇವರು ಮಾರು ವೇಷದಲ್ಲಿ ಮನುಷ್ಯನ ಹಾಗೆ ಬಂದರೆ ಆತನ ಧರ್ಮಕ್ಕೆ ಎಂತಹ ಹಾನಿ ಉಂಟಾಗದಂತೆ ತಾನೇ ಸ್ವತಃ ಹೇಳಿದಂತಾಗುತ್ತದೆ. ತಾನು ತಾನಾಗಿ ಹೇಳುವುದಿಲ್ಲ ಎಂದಿದ್ದಾನಾಗಲೀ, ಮನುಷ್ಯನಂತೆ ಮಾರು ವೇಷದಲ್ಲಿಯೂ ಸಹ ಹೇಳುವುದಿಲ್ಲವೆಂದು ಎಲ್ಲಿಯೂ ಇಲ್ಲ. ಖುರಾನ್ ಗ್ರಂಥದಲ್ಲಿ ಮೂರನೇ ಸುರಾ (ಆಲೀ ಇಮ್ರಾನ್‌ನಲ್ಲಿ) ಏಳನೇ ಆಯತ್‌ನಲ್ಲಿ **"ಶ್ರದ್ಧೆ, ಬುದ್ಧಿ ಜ್ಞಾನ ಇರುವವನು ನನ್ನ ಜ್ಞಾನವನ್ನು ಗ್ರಹಿಸಿಕೊಳ್ಳುತ್ತಾನೆ"** ಎಂದು ಹೇಳಿದ್ದಾನೆ. ಶ್ರದ್ಧೆ

ಇರುವವನು ಗ್ರಹಿಸಿಕೊಳ್ಳುತ್ತಾನೆ ಅಂದಾಗ ದೇವರು ಯಾವುದೋ ಒಂದು ರೂಪದಲ್ಲಿ ತನ್ನ ಜ್ಞಾನವನ್ನು ತಾನೇ ತಿಳಿಸಿದ್ದಾನೆಂದಲ್ಲವೆ ಅರ್ಥ. ದೇವರ ಜ್ಞಾನ ಭೂಮಿಯ ಮೇಲೆ ಮನುಷ್ಯರಿಗೆ ಮೂರು ವಿಧಗಳಾಗಿ ತಿಳಿಯುತ್ತದೆ ಎಂದು ಖುರಾನ್ ಗ್ರಂಥದಲ್ಲಿಯೇ 42ನೇ ಸುರಾ, 51ನೇ ಆಯತ್‌ನಲ್ಲಿ ಇದೆ. ಅದರಲ್ಲಿ ಒಂದು ಶಬ್ಧದಿಂದ, ಹಾಗೂ ತೆರೆ ಹಿಂದಿನಿಂದ ಹೇಳಿಸುವುದು, ಮೂರು ಸ್ವತಃವಾಗಿ ದೇವರ ದೂತನಿಂದ ಹೇಳಿಸುವುದು ಎಂದು ಇದೆ. ಶಬ್ಧ ಆಕಾಶದಿಂದ ಬರುತ್ತಿದೆ, ಆದ್ದರಿಂದ ಜ್ಞಾನ ಆಕಾಶದೊಳಗಿನಿಂದ ಶಬ್ಧ ರೂಪದಲ್ಲಿ ಬಂದು ಸೇರುವುದು ಮೊದಲನೆಯ ವಿಧ. ಮೊದಲನೆಯ ವಿಧದಲ್ಲಿ ಆಕಾಶದಿಂದ ಬರುವ ಶಬ್ಧ ಯಾರಿಂದ ಬಂದಿರುವುದೋ ಯಾರಿಗೂ ತಿಳಿಯದು. ಆದರೂ ನಾವು ಶೂನ್ಯದಲ್ಲಿ ಅಣುಅಣುವಿನಲ್ಲಿ ವ್ಯಾಪಿಸಿರುವ ದೈವಶಕ್ತಿಯಿಂದ ಬಂದಿರುವುದೆಂದು ಹೇಳಬಹುದು. ಮೊದಲನೆಯ ವಿಧ ಯಾರಿಗೂ ಅರ್ಥವಾಗದ ವಿಷಯ. ಎರಡನೆಯದು ತೆರೆ ಹಿಂದಿನಿಂದ ಹೇಳಿಸುವುದು ಎಂದು ಇದೆ. ತೆರೆ ಹಿಂದೆ ಎಂದರೆ ಕಾಣಿಸದೆ ಇರುವವನನ್ನು ತೆರೆ ಹಿಂದೆ ಇರುವಹಾಗೆ ಹೇಳಬಹುದು. ಕಾಣಿಸದಂತೆ ಯಾರು ಮಾತನಾಡಿ ಜ್ಞಾನವನ್ನು ಹೇಳಿದರೂ ಅದು ತೆರೆಹಿಂದಿನಿಂದ ಹೇಳಿದಂತಾಗುತ್ತದೆ. ಒಂದು ಸಮಯದಲ್ಲಿ ಸೂರ್ಯನು ಒಂದು ಗ್ರಹವಾಗಿದ್ದು ಸೂಕ್ಷ್ಮವಾಗಿ ಭೂಮಿ ಮೇಲೆ ಬಂದು ಕಾಣಿಸದೆ ಇತರರಿಂದ ಮಾತನಾಡಿ ಜ್ಞಾನವನ್ನು ಹೇಳುವುದು ನಡೆದಿದೆ. ಸೂರ್ಯನು ಮನುವಿಗೆ ಹೇಳಿರುವುದು ತೆರೆ ಹಿಂದಿನಿಂದಲೇ ಎಂದು ಹೇಳಬಹುದು. ಸೃಷ್ಠ್ಯಾದಿಯಲ್ಲಿ ಜ್ಞಾನ ವಾಣಿಯಿಂದ (ಶಬ್ಧದಿಂದ) ಸೂರ್ಯನಿಗೆ ತಿಳಿದರೆ, ಸೂರ್ಯನು ತನಗೆ ತಿಳಿದ ಜ್ಞಾನವನ್ನು ಮರೆಯಲ್ಲಿದ್ದು ತಾನು ಸ್ವತಃವಾಗಿ ಕಾಣಿಸದೆ ಇತರರ ಶರೀರದಿಂದ ಮನುವಿಗೆ ಹೇಳುವುದು ನಡೆದಿದೆ. ಹೀಗೆ ಎರಡು ವಿಧಗಳಾಗಿ ಪ್ರಪಂಚದೊಳಗೆ ದೇವರ ಜ್ಞಾನ ಪ್ರವೇಶಿಸಿದಾಗ, ನಂತರ ಮೂರನೆ ವಿಧಾನವಾದ ದೂತನಿಂದ ಸಹ ಭೂಮಿ ಮೇಲೆ ಬರುವುದು ನಡೆದಿದೆ. ದೇವರು ಮೂರು ವಿಧಗಳಲ್ಲಿ ತನ್ನ ಜ್ಞಾನವನ್ನು ತಿಳಿಸುತ್ತೇನೆಂದು ಹೇಳಿದರೂ, ಆ ವಿಧಾನಗಳನ್ನು ಇಂದಿಗೂ ಮನುಷ್ಯ ಗುರುತಿಸದೆ ಹೋಗಿದ್ದಾನೆ.

ಮೊದಲನೆಯ ವಿಧಾನವನ್ನು ಕುರಿತು ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಇನ್ನು ಎರಡನೆಯ ವಿಧಾನ ಎಂತಹುದೋ ತಿಳಿಯದೆ ಅದನ್ನೇ ಮೂರನೆಯ ವಿಧಾನವಾಗಿ ಹೋಲಿಸಿಕೊಳ್ಳುತ್ತಿದ್ದಾರೆ. ಇನ್ನು ದೂತನಿಂದ ಹೇಳಿಸುವುದು ಎನ್ನುವ ವಿಧಾನವನ್ನು ಪೂರ್ತಿಯಾಗಿ ತಿಳಿಯದೆ ಎರಡನೆಯದನ್ನೆ ಮೂರನೆಯದಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ.

ವಿವರವಾಗಿ ಹೇಳಿಕೊಂಡರೆ ದೇವರು ಯಾವ ಕೆಲಸ ಮಾಡದವನಾಗಿ ಇದ್ದೂ, ತನ್ನ ಜ್ಞಾನವನ್ನು ಸ್ವತಃವಾಗಿ ತಾನಲ್ಲದೆ ಇತರರಿಂದ ಹೇಳಿಸಿದ ಹಾಗೆ ತಿಳಿಸಿದ್ದಾನೆ. ಒಂದು ವಿಧವಾಗಿ ತಿಳಿಸಿರುವುದು ದೇವರೇ ಆದರೂ, ಈ ಮೂರು ವಿಧಾನಗಳಲ್ಲಿ ದೇವರೇ ಹೇಳಿದ್ದಾನೆನ್ನುವುದಕ್ಕೆ ಸಾಧ್ಯವಿಲ್ಲ. ಆದರೂ ಗಾಢವಾಗಿ ಆಲೋಚಿಸಿದರೆ ದೇವರು ಹೊರತು ಯಾರೂ ತಿಳಿಸುವುದಕ್ಕೆ ಅವಕಾಶವಿಲ್ಲ. ಕುರುಡರಂತೆ ಮಾತನಾಡಿದರೆ ಒಂದು ವಿಧ, ದೃಷ್ಠಿಯಿಂದ ಮಾತನಾಡಿದರೆ ಮತ್ತೊಂದು ವಿಧ. ಇದು ಇಷ್ಟೇ ಎಂದು ಯಾರೂ ನಿರೂಪಿಸಿ ಹೇಳಲಾರರು. ಈ ಮೂರು ವಿಧಾನಗಳು ಮನುಷ್ಯರನ್ನು ಯಾವ ಕಡೆಯಾದರೂ ತೆಗೆದುಕೊಂಡು ಹೋಗಬಹುದು, ಯಾರಿಗೆ ಅರ್ಥವಾಗಿರುವುದು ಅವರಿಗೆ ಸತ್ಯವಾಗಿ ತೋಚುತ್ತದೆ. ಆದ್ದರಿಂದ ಯಾರ ಛಲವನ್ನು ಅವರು ಬಿಡದೆ ಕೆಲವರು ದೇವರು ಬರುವುದಿಲ್ಲವೆಂದರೆ, ಕೆಲವರು ದೇವರು ಬರುತ್ತಾನೆಂದು ಎನ್ನುತ್ತಿದ್ದಾರೆ. ನಮ್ಮ ಮಾತೇ ಸತ್ಯವೆಂದು ಕೆಲವರಂದರೆ ಅಲ್ಲ ನಮ್ಮ ಮಾತೇ ಸತ್ಯವೆಂದು ಮತ್ತೆ ಕೆಲವರನ್ನುತ್ತಿದ್ದಾರೆ. ದೇವರು ತನಗೆ ಇಷ್ಟವಾದವರನ್ನು ತನ್ನ ಕಡೆ ಬರುವಂತೆ ಹಾಗೆ ಮಾಡಿದ್ದಾನೆಂದು ತಿಳಿಯುತ್ತಿದೆ. ಆ ವಿಷಯಕ್ಕೆ ಬಂದರೆ ನಾವೇ ದೇವರಿಗೆ ಇಷ್ಟವಾದವರೆಂದು ಕೆಲವರನ್ನುತ್ತಿದ್ದರೆ, ಮತ್ತೆ ಕೆಲವರು ಎಲ್ಲರಿಗಿಂತ ನಾವೇ ದೇವರಿಗೆ ಹತ್ತಿರವಾಗಿದ್ದೇವೆಂದು ಹೇಳಿ ಕೊಳ್ಳುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಯಾರು ಎಲ್ಲಿ ತಪ್ಪಾಗಿ ತಿಳಿ ಯುತ್ತಿದ್ದಾರೋ ನಿರೂಪಿಸಿ ಹೇಳಬೇಕಾದ ಅವಶ್ಯವಿದೆ. ಅಂತಹ ಪ್ರಯತ್ನವನ್ನು ಸ್ವಲ್ಪ ಪ್ರಯತ್ನಿಸಿ ನೋಡೋಣ.

ದೇವರು ಹೇಳಿದ ಮೂರು ವಿಧಾನಗಳಲ್ಲಿ ಮೊದಲನೆಯದು ಶಬ್ದದಿಂದ ತಿಳಿಸುತ್ತೇನೆ ಎನ್ನುವುದು, ಸೃಷ್ಟ್ಯಾದಿಯಲ್ಲೇ ನಡೆದುಹೋಗಿದೆ. ಆಕಾಶದಲ್ಲಿ ಸೂರ್ಯನಿಗೆ ಶಬ್ಧದಿಂದ ದೇವರ ಜ್ಞಾನ ಸಂಪೂರ್ಣವಾಗಿ ತಿಳಿಯಲಾಗಿದೆ. ಈ ವಿಷಯ ಭಗವದ್ಗೀತೆಯಲ್ಲಿ ಜ್ಞಾನಯೋಗ ಎಂಬ ಅಧ್ಯಾಯದಲ್ಲಿ ಮೊದಲನೆಯ, ಎರಡನೆಯ ಶ್ಲೋಕದಲ್ಲಿಯೇ ಇದೆ ನೋಡಿರಿ.

**ಶ್ಲೋ॥ ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹ ಮವ್ಯಯಮ್।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್ ॥**

**ಶ್ಲೋ॥ ಏವಂ ಪರಂಪರಾ ಪ್ರಾಪ್ತ ಮಿಮಂ ರಾಜರ್ಷಯೋ ವಿದುಃ ।**
**ಸಕಾಲೇ ನೇಹ ಮಹತಾ ಯೋಗೋ ನಷ್ಟಃ ಪರನ್ತಪ! ॥**

**ಭಾವಾರ್ಥ :–** "ನಾನು ಹೇಳುವ ಯೋಗಕ್ಕೆ ಸಂಬಂಧಿಸಿದ ಜ್ಞಾನ ನಾಶವಿಲ್ಲದ್ದು. ಅಂತಹ ಜ್ಞಾನವನ್ನು ಮೊದಲು (ಸೃಷ್ಟ್ಯಾದಿಯಲ್ಲಿ) ನಾನು ಸೂರ್ಯನಿಗೆ ಹೇಳಿದ್ದೇನೆ. ಸೂರ್ಯನು ತನಗೆ ತಿಳಿದ ಜ್ಞಾನವನ್ನು ಭೂಮಿಮೇಲೆ ಮನುವು ಎಂಬ ಮಹರ್ಷಿಗೆ ಹೇಳಿರುವಾಗ, ಮನುವು ಇಕ್ಷ್ವಾಕನೆಂಬ ರಾಜನಿಗೆ ತಿಳಿಸಿದನು. ಈ ವಿಧವಾಗಿ ಒಬ್ಬರಿಗೊಬ್ಬರು ತಿಳಿದುಕೊಳ್ಳುವುದರಿಂದ ರಾಜರು, ಋಷಿಗಳು, ಪ್ರಜೆಗಳು ಎಲ್ಲರೂ ತಿಳಿದುಕೊಂಡಿದ್ದಾರೆ. ಆ ವಿಧವಾಗಿ ಎಲ್ಲರಿಗೂ ತಿಳಿದ ಜ್ಞಾನ ಕಾಲಕ್ರಮದಲ್ಲಿ ಈ ದಿನ ಯಾರಿಗೂ ತಿಳಿಯದಂತಾಗಿದೆ."

ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ ಈ ಎರಡು ಶ್ಲೋಕಗಳಲ್ಲಿ, ದೇವರು ಖುರ್‌ಆನ್ ಗ್ರಂಥದಲ್ಲಿ 42ನೇ ಸುರಾ, 51ನೇ ಆಯತ್‌ನಲ್ಲಿ ನಿಮಗೆ ನನ್ನ ಜ್ಞಾನವನ್ನು ಮೂರು ವಿಧಗಳಾಗಿ ತಿಳಿಸುತ್ತೇನೆ ಎಂದು ಹೇಳಿರುವುದರಲ್ಲಿ ಮೊದಲು ಎರಡು ವಿಧಗಳು ಮೊದಲ ಶ್ಲೋಕದಲ್ಲಿಯೇ ಇವೆ. ಅದರಲ್ಲಿ ಒಂದು ವಹೀಯಿಂದ ಹೇಳಿದ ಮಾತು, ವಹೀ ಎಂದರೆ ಶಬ್ಧ ಸಂದೇಶವೆಂದು ಅರ್ಥ. ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ತಿಳಿದಿರುವುದು ಆಕಾಶದಲ್ಲಿನ ಶಬ್ಧದಿಂದಲೆ. ಸೂರ್ಯನ ಹತ್ತಿರ ಕೂಡ ಆಕಾಶ ಇರುವುದರಿಂದ ಆಕಾಶದಲ್ಲಿನ

ಶಬ್ಧವನ್ನು ಸೂರ್ಯನು ಸುಲಭವಾಗಿ ಕೇಳಿದ್ದಾನೆ. ಸೂರ್ಯನು ಒಂದು ಗ್ರಹ, ಸೂರ್ಯನ ಶರೀರ ಉರಿಯುವ ಅಗ್ನಿ ಗೋಳ. ಗ್ರಹಿಸಿಕೊಳ್ಳುವ ಶಕ್ತಿ ಇರುವುದು ಗ್ರಹ, ಸೂರ್ಯನು ಒಂದು ಗ್ರಹ ಆಗಿರುವುದರಿಂದ ಶಬ್ಧದಿಂದ ಬಂದಿರುವ ಜ್ಞಾನವನ್ನು ಸೂರ್ಯನು ಕೇಳಿದ್ದಾನೆ. ಸೂರ್ಯನು ಗ್ರಹಿಸಿಕೊಂಡಿರುವುದನ್ನು ಭೂಮಿ ಮೇಲಿರುವ ಮನುವು ಎಂಬ ಮಹರ್ಷಿಗೆ ತಿಳಿಸುವುದು ನಡೆದಿದೆ. ಸೂರ್ಯನು ಸೂಕ್ಷ್ಮವಾಗಿ ಬಂದು ತಾನು ಕಾಣಿಸದೆ ಇತರರ ಶರೀರದಿಂದ ಮಾತನಾಡುತ್ತಾ ಜ್ಞಾನವನ್ನು ಮನುವಿಗೆ ತಿಳಿಸಲಾಗಿದೆ. ಸೂರ್ಯನಿಗೆ ಶಬ್ಧದಿಂದ ಜ್ಞಾನ ತಿಳಿಯುವುದೆನ್ನುವ ವಿಧಾನ ದೇವರು ತಿಳಿಸುವ ಮೂರು ವಿಧಾನಗಳಲ್ಲಿ ಮೊದಲನೆಯದಾದಾಗ, ಸೂರ್ಯನು ಮನುವಿಗೆ ಜ್ಞಾನವನ್ನು ಇತರರಿಂದ ಹೇಳುವುದು, ದೇವರು ತಿಳಿಸಿದ ಮೂರು ವಿಧಾನಗಳಲ್ಲಿ ಎರಡನೆಯದಾದ ತೆರೆ ಹಿಂದಿನಿಂದ ತಿಳಿಸುವುದೆಂದು ಗ್ರಹಿಸಬೇಕು. ಈ ವಿಧವಾಗಿ ಎರಡು ವಿಧಾನಗಳು ಜಾರಿಗೆಯಾದಾಗ, ಕೃಷ್ಣನು ಬಂದು ಅರ್ಜುನನಿಗೆ ಪ್ರತ್ಯಕ್ಷವಾಗಿ ಹೇಳುವುದರಿಂದ ದೇವರು ಹೇಳಿದ ಮೂರನೆ ವಿಧಾನವೂ ಸಹ ನೆರವೇರಿತು. ನನ್ನ ದೂತನಿಂದ ಜ್ಞಾನ ತಿಳಿಸುತ್ತೇನೆ ಎನ್ನುವ ಮೂರನೇ ವಿಧಾನ ಕೃಷ್ಣನು ಅರ್ಜುನನಿಗೆ ಹೇಳುವುದರಿಂದ ನೆರವೇರಿತು. ಸೃಷ್ಟ್ಯಾದಿಯಲ್ಲಿ ಮೊದಲನೆಯ ವಿಧಾನ ನಡೆದಿರುವಾಗ, ನಂತರ ಸ್ವಲ್ಪ ಕಾಲಕ್ಕೇ ಎರಡನೆಯ ವಿಧಾನದಿಂದ ಭೂಮಿ ಮೇಲೆ ದೇವರ ಜ್ಞಾನ ತಿಳಿದು ಬಂದಿದೆ. ನಂತರ ನಮಗೆ ತಿಳಿದು ಐದುಸಾವಿರ ವರ್ಷಗಳ ಪೂರ್ವದಲ್ಲಿ ಮೂರನೇ ವಿಧಾನದಿಂದ ಭಗವದ್ಗೀತೆ ಗ್ರಂಥ ಹೊರಗೆ ಬಂದಿದೆ. ಈ ವಿಧವಾಗಿ ಮೂರು ಪದ್ಧತಿಗಳು ಗತದಲ್ಲಿಯೇ ನೆರವೇರಿವೆ ಎಂದು ಹೇಳಬಹುದು.

ಗತಕಾಲದಲ್ಲಿ ಮೂರು ಪದ್ಧತಿಗಳು ನಡೆದುಹೋಗಿವೆಯಲ್ಲ ಎಂದು ಇನ್ನು ನಡೆಯುವುದಿಲ್ಲ ಅನ್ನುವದಕ್ಕೆ ಸಾಧ್ಯವಿಲ್ಲ. ಭವಿಷ್ಯತ್ತಿನಲ್ಲಿಯೂ ಸಹ ನಡೆಯಬಹುದು. ಆದರೆ ಆಕಾಶವಾಣಿ ಹೇಳುವುದು ಒಂದುಬಾರಿಯೇ ಇರುತ್ತದೆಂದುಕೊಳ್ಳುತ್ತೇನೆ. ಏಕೆಂದರೆ ಒಂದುಬಾರಿ ಶೂನ್ಯದಿಂದ ಹೇಳಿದ

ನಂತರ ಅದನ್ನು ಎಷ್ಟು ಬಾರಿಯಾದರೂ ಹೇಳಬಹುದು. ಪ್ರತ್ಯಕ್ಷವಾಗಿ ಕಾಣಿಸುವ ದೂತನಂತಾಗಲೀ, ಅಥವಾ ಪರೋಕ್ಷವಾಗಿ ಕಾಣಿಸದೆ ತೆರೆಮರೆಯಲ್ಲಿ (ಇತರರಿಂದ) ಹೇಳುವ ಗ್ರಹವಾಗಾಗಲೀ, ದೇವರ ಜ್ಞಾನ ಎಷ್ಟುಬಾರಿಯಾದರೂ ಹೇಳಿಕೊಳ್ಳಬಹುದು. ಆದರೆ ಆಕಾಶವಾಣಿಯಿಂದ ಹೇಳುವುದು ಇತರರ ಪ್ರಮೇಯವಿಲ್ಲದಂತೆ ಬರುವುದು, ಆದ್ದರಿಂದ ಅದು ಒಂದುಬಾರಿಯೇ ಹೇಳಲಾಗುವುದು. ನಮಗೆ ತಿಳಿದ ಮಟ್ಟಿಗೆ ಗತದಲ್ಲಿ ಒಂದು ಬಾರಿ ಆಕಾಶವಾಣಿ ಹೇಳಿರುವ ಜ್ಞಾನ ಇಲ್ಲಿಯವರೆಗು ಎರಡನೆಯ ಬಾರಿ ಹೇಳಲಿಲ್ಲ. ಹಾಗೆಯೇ ಸೂರ್ಯಗ್ರಹ ಮೊದಲು ಮನುವಿಗೆ ಹೇಳಿದನಂತರ ಇಲ್ಲಿಯವರೆಗು ಸೂರ್ಯನು ಭೂಮಿ ಮೇಲೆ ಬಂದು ಎಲ್ಲಿಯೂ ಹೇಳಿದಹಾಗೆ ಕಾಣಿಸುತ್ತಿಲ್ಲ. ಆದರೆ ಸೂರ್ಯಗ್ರಹ ತಾನು ತಿಳಿದುಕೊಂಡ ಜ್ಞಾನವನ್ನು ಖಗೋಳದಲ್ಲಿನ ಉಳಿದ ಎಲ್ಲಾ ಗ್ರಹಗಳಿಗೂ ತಿಳಿಸಿದೆ. ಸೂರ್ಯನಿಂದ ಖಗೋಳದಲ್ಲಿನ ಎಷ್ಟೋ ಕೋಟಿ ಗ್ರಹಗಳೂ, ಹಾಗೆಯೇ ಎಷ್ಟೋ ಕೋಟಿ ಭೂತಗಳು, ಉಪಭೂತಗಳು ತಿಳಿದುಕೊಂಡಿವೆ. ಹಾಗೆ ದೇವರ ಜ್ಞಾನ ಖಗೋಳವೆಲ್ಲವೂ ವ್ಯಾಪಿಸಿ ಗ್ರಹಗಳು ಭೂತಗಳೆಲ್ಲರೂ ತಮ್ಮನ್ನು ಸೃಷ್ಠಿಸಿದ ದೇವರನ್ನು ಕುರಿತು ತಿಳಿದುಕೊಂಡಿದ್ದಾರೆ. ಅದೇ ವಿಧಾನದಲ್ಲಿ ಜಿಬ್ರಯೇಲ್ ಎನ್ನುವ ಗ್ರಹವೂ ಸಹ ಎಲ್ಲರನ್ನೂ ಸೃಷ್ಠಿಸಿದ ದೇವರ ಜ್ಞಾನವನ್ನು ತಿಳಿದುಕೊಂಡಿದ್ದಾನೆ. ಸೂರ್ಯನು ಮೊದಲು ವಾಣಿಯಿಂದ ತಾನು ತಿಳಿದುಕೊಂಡ ಜ್ಞಾನವನ್ನು ವಿಶ್ವವ್ಯಾಪ್ತವಾಗಿ ಭೂಮಿಮೇಲೆ ಮನುವಿಗು, ಆಕಾಶದಲ್ಲಿನ ಗ್ರಹಗಳಿಗೂ, ತಿಳಿಸುವುದರಿಂದ ಸೂರ್ಯನು ಆದಿ ಗುರುವೆಂದು ಹೆಸರುಹೊಂದಿದ್ದಾನೆ. ಜ್ಞಾನ ಹೇಳುವುದರಲ್ಲಿ ಮೊದಲನೆಯವನು ಆದ್ದರಿಂದ ಸೂರ್ಯನನ್ನು ಆದಿತ್ಯನೆಂದು ಅಂದಿದ್ದಾರೆ. ಸೂರ್ಯಗ್ರಹ ಭೂಮಿ ಮೇಲೆ ಭಾರತದೇಶದಲ್ಲಿ ಮನುವು ಎನ್ನುವ ವ್ಯಕ್ತಿಗೆ ಜ್ಞಾನವನ್ನು ತಿಳಿಸಿದ ಹಾಗೆ ಉಳಿದ ಗ್ರಹಗಳೂ ಸಹ ದೇವರ ಜ್ಞಾನವನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ ಖಗೋಳದಲ್ಲಿನ ಗ್ರಹಗಳಿಂದ ಪ್ರಾರಂಭಗೊಂಡು ಭೂತಗಳಲ್ಲಿನ ಮೇಘಗಳವರೆಗು ದೇವರ ಜ್ಞಾನ ತಿಳಿದು, ದೇವರ ಮೇಲೆ

ಭಕ್ತಿ ಹೊಂದಿ ಶದ್ಧೆಯಿಂದ ಅವರೆಲ್ಲರೂ ದೇವರ ಪರಿಪಾಲನೆಯಲ್ಲಿ ಭಾಗವಾಗಿ ದೇವರ ಸೇವೆ ಮಾಡುತ್ತಿದ್ದಾರೆ.

ಭೂಮಿಮೇಲೆ ಮನುಷ್ಯರು ಮಾತ್ರ ಮನುವಿನಿಂದ ಪರಂಪರೆಯಾಗಿ ಬಂದಿರುವ ದೈವಜ್ಞಾನವನ್ನು ದ್ವಾಪರ ಯುಗದ ಸಮಯಕ್ಕೆ ಪೂರ್ತಿಯಾಗಿ ಮರೆತುಹೋಗಿ, ದೇವರನ್ನು ಬಿಟ್ಟು ದೇವತೆಗಳ ಭಕ್ತಿಯಲ್ಲಿ ಮುಳುಗಿ, ಯಜ್ಞಯಾಗಾದಿಗಳು, ವ್ರತಕ್ರತುಗಳು, ವೇದಪಾರಾಯಣಗಳು, ತಪಸ್ಸುಗಳಲ್ಲಿ ಮುಳುಗಿಹೋಗಿದ್ದಾರೆ. ಅಂತಹ ಸಂದರ್ಭದಲ್ಲಿ ದೇವರ ಸಮಾಚಾರವನ್ನು ತಂದಿರುವ ದೂತನಂತೆ ಕೃಷ್ಣನು ಅರ್ಜುನನಿಗೆ ದೇವರ ಜ್ಞಾನವನ್ನು ಬೋಧಿಸಿದ್ದಾನೆ. ಹಾಗೆ ಬೋಧಿಸುತ್ತಿರುವಾಗ ಸಮಯಸ್ಫೂರ್ತಿಯಾಗಿ ತಾನು ಹೇಳುವ ಜ್ಞಾನ ಮೊದಲು ಸೃಷ್ಟ್ಯಾದಿಯಲ್ಲಿಯೇ ಸೂರ್ಯನಿಗೆ ತಿಳಿಸಿರುವ ಜ್ಞಾನವೆಂದು ಕೃಷ್ಣನು ಹೇಳಿದ್ದಾನೆ. ಹಾಗೆ ಹೇಳುವುದರಿಂದ ಒಂದೇ ಜ್ಞಾನ ಮೊದಲು ಆಕಾಶವಾಣಿಯಿಂದ ತಿಳಿಯಲಾಗಿ, ಎರಡನೆ ಬಾರಿ ತೆರೆ ಮರೆಯಲ್ಲಿರುವ ಗ್ರಹಗಳಿಂದ ತಿಳಿಯಲಾಗಿ, ಮೂರನೆಯ ಬಾರಿ ಪ್ರತ್ಯಕ್ಷ ದೂತನಿಂದ ತಿಳಿಯಲಾಗಿದೆಯೆಂದು ತಿಳಿದಿದೆ. ಈ ವಿಧವಾಗಿ ದೇವರು ನನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ತಿಳಿಸುತ್ತೇನೆಂದು ಹೇಳಿದ ಮಾತು ನೆರವೇರಿದೆ. ಕೃಷ್ಣನು ಹೇಳಿದ ಜ್ಞಾನ ಸೃಷ್ಟ್ಯಾದಿಯಲ್ಲಿ ಆಕಾಶವಾಣಿ ಯಿಂದ ಸೂರ್ಯನಿಗೆ ಹೇಳಲಾಗಿರುವ ಮೊದಲನೆಯ ಜ್ಞಾನವೆಂದು ತಿಳಿದಿದೆ. ಹಾಗೆ ಸೃಷ್ಟ್ಯಾದಿಯಲ್ಲಿ ಹೇಳಲಾಗಿರುವ ಮೊದಲ ಜ್ಞಾನವನ್ನು ಸೂರ್ಯನಿಂದ ಮತ್ತೊಂದು ಗ್ರಹವಾದ ಜಿಬ್ರಯೇಲ್ ಗ್ರಹ ಕೂಡಾ ತಿಳಿದುಕೊಂಡಿದೆ. ಸೂರ್ಯನು ಭೂಮಿ ಮೇಲೆ ಮನುವು ಎನ್ನುವಾತನಿಗೆ ತನಗೆ ತಿಳಿದ ಜ್ಞಾನವನ್ನು ಬೋಧಿಸಿದಹಾಗೆ, ಜಿಬ್ರಯೇಲ್ ಗ್ರಹವೂ ಸಹ ತನಗೆ ತಿಳಿದ ಜ್ಞಾನವನ್ನು ಭೂಮಿ ಮೇಲೆ ಒಬ್ಬ ಮನುಷ್ಯನಿಗೆ ಬೋಧಿಸುವುದು ನಡೆದಿದೆ. ಜಿಬ್ರಯೇಲ್ ಗ್ರಹ ಯಾವಾಗ ಯಾರಿಗೆ ತನ್ನ ಜ್ಞಾನವನ್ನು ಬೋಧಿಸಿರುವುದು ನಂತರ ಸಂದರ್ಭಾನುಸಾರವಾಗಿ ಹೇಳಬಲ್ಲೆನು.

ಸೂರ್ಯನು ಕೃತಯುಗದಲ್ಲಿ ಮನುವಿಗೆ ತಿಳಿಸಿದ ಜ್ಞಾನ ದ್ವಾಪರ ಯುಗದ ಕೊನೆಯಲ್ಲಿ ಕೃಷ್ಣನು ಅರ್ಜುನನಿಗೆ ಹೇಳುವುದು ನಡೆದಿದೆ. ಹಾಗೆ ದ್ವಾಪರ ಯುಗದಲ್ಲಿ ಹೇಳಿದ ಜ್ಞಾನ ವ್ಯಾಸನಿಂದ ಇಂದಿಗೆ 5000 ವರ್ಷಗಳ ಪೂರ್ವವೇ ಗ್ರಂಥರೂಪವಾಗಿದೆ. ಈ ವಿಧವಾಗಿ ದೇವರ ಜ್ಞಾನ ಮೊಟ್ಟಮೊದಲು ಗ್ರಂಥವಾಗಿ ಹೊರಗೆ ಬಂದಿದೆ. ಹಾಗೆ ಕೃಷ್ಣನು ಹೇಳಿದ ಜ್ಞಾನ ವ್ಯಾಸನಿಂದ ರಚಿಸಲ್ಪಟ್ಟು ಗ್ರಂಥವಾಗಿದೆ. **ಆ ಗ್ರಂಥದ ಹೆಸರೇ ಭಗವದ್ಗೀತೆ.** ಭಗವದ್ಗೀತೆವೊಂದರ ಜ್ಞಾನವನ್ನು ಸೃಷ್ಟ್ಯಾದಿಯಲ್ಲಿಯೇ ಹೇಳಲಾಗಿರುವಜ್ಞಾನ ಆಗಿರುವುದರಿಂದ ಮತ್ತು ಭಗವದ್ಗೀತೆ ಭೂಮಿ ಮೇಲೆ ದೇವರ ಜ್ಞಾನವನ್ನು ಕುರಿತು ಬರೆಯಲಾಗಿರುವ ಮೊದಲ ಗ್ರಂಥವಾಗಿರುವುದರಿಂದ, ಅದನ್ನು **ಪ್ರಥಮ ದೈವ ಗ್ರಂಥವೆಂದು** ಎನ್ನುತ್ತಿದ್ದೇವೆ.

ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ "ಕೃಷ್ಣನು ಹೇಳಿದಾಗ ದೇವರ ಜ್ಞಾನ ಭೂಮಿ ಮೇಲೆ ಯಾರಿಗೂ ತಿಳಿಯದಂತೆ ಹೋಗಿದೆ ಅಲ್ಲವೆ! ಆಗ ಯಾರಿಗೂ ತಿಳಿಯದ ಜ್ಞಾನವನ್ನು ಕೃಷ್ಣನು ಹೇಗೆ ಹೇಳಿದ್ದಾನೆ? ಕೃಷ್ಣನು ಒಬ್ಬ ಮನುಷ್ಯನಾಗಿರುವಾಗ ಆತನಿಗೆ ದೇವರ ಜ್ಞಾನ ಹೇಗೆ ತಿಳಿದಿದೆ ಎಂದು ಪ್ರಶ್ನೆ ಬರುವುದರಲ್ಲಿ ತಪ್ಪಿಲ್ಲ. ಅದಕ್ಕೆ ಉತ್ತರವನ್ನು ಹುಡಿಕಿದರೆ ಹೀಗೆ ಇದೆ. ದೇವರ ಜ್ಞಾನ ದೇವರಿಗೆ ಹೊರತು ಇತರ ಮನುಷ್ಯರಿಗ್ಯಾರಿಗೂ ತಿಳಿಯದೆಂದು ದೇವರು ಒಂದಾನೊಂದು ತನ್ನ ಗ್ರಂಥದಲ್ಲಿ ಹೇಳಿದ ಮಾತು ವಾಸ್ತವವೇ. ಹಾಗಿರುವಾಗ ಮನುಷ್ಯನಾದ ಕೃಷ್ಣನು ದೇವರ ಜ್ಞಾನವನ್ನು ಹೇಗೆ ಹೇಳಬಲ್ಲನೆನ್ನುವ ಪ್ರಶ್ನೆ ಬಾರದೆ ಇರುವುದಿಲ್ಲ. ದೇವರು ತನ್ನ ದೂತನಿಂದ ಜ್ಞಾನವನ್ನು ಹೇಳಿಸುತ್ತೇನೆಂದು ಮೂರು ವಿಧಾನಗಳಲ್ಲಿ ಅದೊಂದು ವಿಧಾನವೆಂದು ಹೇಳಿದರೂ, ಕೃಷ್ಣನು ದೇವರು ಕಳುಹಿಸಿದ ದೂತನೆಂದು ಎಲ್ಲಿಯೂ ನಿರೂಪಿಸಲ್ಪಡಲಿಲ್ಲ. ಒಂದು ವೇಳೆ ಕೃಷ್ಣನು ಎಲ್ಲಾದರೂ ನಾನು ದೇವರ ದೂತನೆಂದು ಹೇಳಿದ್ದಾನಾ? ಇಲ್ಲವೆ ದೇವರು ಕಳುಹಿಸಿದರೆ ಬಂದವನೆಂದು ಹೇಳಿದ್ದಾನಾ? ಹಾಗೂ ಸಹ ಹೇಳಲಿಲ್ಲ. ಹಾಗಿರುವಾಗ

ಸಾಧಾರಣ ಮನುಷ್ಯನಾದ ಕೃಷ್ಣನು ದೇವರ ಜ್ಞಾನವನ್ನು ಹೇಗೆ ಹೇಳಿದ್ದಾನೆ ಎನ್ನುವ ಪ್ರಶ್ನೆ ಉಳಿಯುತ್ತದೆ. ಈ ಪ್ರಶ್ನೆಗೆ ಉತ್ತರವಾಗಿ ಯಾರಾದರೂ ಕೃಷ್ಣನ ಪರವಾಗಿ ವಾದಿಸಿ ಇಲ್ಲ ಕೃಷ್ಣನು ದೇವರು ಕಳುಹಿಸಿದ ದೂತನೇ ಎಂದು ವಾದಿಸಿ, ಆತನು ದೇವರ ದೂತನಾಗಿರುವುದರಿಂದ ದೇವರ ಜ್ಞಾನವನ್ನು ಹೇಳಿದ್ದಾನೆಂದು ಹೇಳಿದರೂ, ಭಗವದ್ಗೀತೆಯಲ್ಲಿ ಕೃಷ್ಣನು ತಾನು ದೇವ ದೂತನೆಂದು ಹೇಳಿದ ದಾಖಲೆ ಇಲ್ಲ. ಅಷ್ಟೇ ಅಲ್ಲದೆ ದೇವರು ಕೃಷ್ಣನಾಗಿ ಬಂದಿರುವವನು ನನ್ನ ದೂತನೆಂದು ಹೇಳಿದ ವಾಕ್ಯವೂ ಸಹ ಇಲ್ಲ. ಆದರೂ ನಾವೂ ಯಾವಕಡೆ ದಾರಿಯಿಲ್ಲದೆ ದೇವರ ಸಮಾಚಾರವನ್ನು ತಂದಿರುವ ದೂತನಂತೆ ಕೃಷ್ಣನನ್ನು ಹೇಳಿದ್ದೇವೆ. ಇತ್ತ ಕೃಷ್ಣನು ತನ್ನನ್ನು ದೂತನೆಂದು ಹೇಳದೇ ಹೋದರೂ, ದೇವರೂ ಸಹ ತನ್ನ ಜ್ಞಾನವಾದ ಭಗವದ್ಗೀತೆಯಲ್ಲಾಗಲೀ ಮತ್ತೆಲ್ಲೇ ಆಗಲಿ ಕೃಷ್ಣನನ್ನು ದೂತನೆಂದು ಹೇಳದೇ ಹೋದರೂ, ನೀವೇಕೆ ಕೃಷ್ಣನನ್ನು ದೂತನಾಗಿ ಹೇಳಿದ್ದೀರೆಂದು ಯಾರಾದರೂ ನನ್ನನ್ನೂ ಪ್ರಶ್ನಿಸಬಹುದು. ಅದಕ್ಕೆ ಉತ್ತರ ಹೇಳಬೇಕಾದ ಜವಾಬ್ದಾರಿ ನನಗಿದೆ. ತಪ್ಪದೇ ಉತ್ತರ ಹೇಳಬಲ್ಲೆನು.

ಭಗವದ್ಗೀತೆಯಲ್ಲಿ ಕೃಷ್ಣನು ಒಂದು ಕಡೆ ದೇವರ ಜ್ಞಾನ ಹೇಳುತ್ತಾ, ಮತ್ತೊಂದು ಕಡೆ ತಾನೇ ದೇವರೆಂದು, ತನ್ನನ್ನು ಮೀರಿದ ದೇವರು ಇನ್ನೊಬ್ಬನಿಲ್ಲವೆಂದು ಪ್ರಕಟಿಸಿಕೊಂಡಿದ್ದಾನೆ. ಭಗವದ್ಗೀತೆಯನ್ನು ಕೃಷ್ಣನು ಹೇಳಿರುವುದು ದೇವರ ಜ್ಞಾನವನ್ನು ಹೇಳುವುದಕ್ಕಾ ಅಥವಾ ತನ್ನನ್ನು ದೇವರೆಂದು ಹೇಳಿಕೊಳ್ಳುವುದಕ್ಕಾ ಎಂಬ ಪ್ರಶ್ನೆಯೂ ಸಹ ಬರಬಹುದು. ಈ ಪ್ರಶ್ನೆಗಳೆಲ್ಲವು ಗಳಿಗೂ ಉತ್ತರವನ್ನು ಹುಡುಕುತ್ತಾ ಹೋದರೆ ಒಂದು ದಾರಿ ಸಿಗುತ್ತಿದೆ. ಆ ದಾರಿಯ ಪ್ರಕಾರ ಆಲೋಚಿಸಿದರೆ ಹೀಗೆ ಇದೆ. ದೇವರು ತನ್ನ ದೂತನಿಂದ ತನ್ನ ಸಮಾಚಾರವನ್ನು ತಿಳಿಸುತ್ತೇನೆಂದು ಹೇಳುವುದು ವಾಸ್ತವವೇ ಆದರೂ, ಆತನು ತನ್ನ ಬಳಿಯಿಂದ ದೂತನನ್ನು ಕಳುಹಿಸುವುದಕ್ಕೆ ಆತನ ಹತ್ತಿರ ದೂತರು ಎಷ್ಟು ಮಂದಿ ಇದ್ದಾರೆಂದು ನಾವು ಆಲೋಚಿಸಬೇಕಾಗಿದೆ. ಹಾಗೆ ಆಲೋಚಿಸಿದರೆ ದೇವರ ಹತ್ತಿರ ದೇವರಲ್ಲದೆ ಯಾರೂ ಇಲ್ಲ. ಇನ್ನೊಂದು ವಿಧವಾಗಿ

ಹೇಳಿದರೆ ದೇವರನ್ನು ನೋಡಿದವನು ಎಲ್ಲಿಯೂ, ಯಾರೂ ಇಲ್ಲ. ಹಾಗಿರುವಾಗ ದೇವರ ಹತ್ತಿರ ಯಾರಾದರೂ ದೂತನಿದ್ದಾನೆಂದರೆ ಅವನು ದೇವರನ್ನು ನೋಡುವನು. ದೇವರನ್ನು ನೋಡಿದವನು ಯಾರೂ ಇಲ್ಲ ಅಂದಾಗ ದೇವರ ಹತ್ತಿರ ಯಾರೂ ಇಲ್ಲವೆಂದೇ ಹೇಳಬಹುದು. ಯಾರಾದರೂ ಜ್ಞಾನವನ್ನು ತಿಳಿದು, ಕರ್ಮವನ್ನು ಇಲ್ಲದಂತೆ ಮಾಡಿಕೊಂಡು ದೇವರ ಹತ್ತಿರಕ್ಕೆ ಹೋಗಿರ ಬಹುದಲ್ಲವೆ! ಎಂದರೆ, ಅಂತಹವನು ದೇವರ ಹತ್ತಿರಕ್ಕೆ ಹೋಗುವುದು ನಿಜವೇಯಾಗಲೀ, ದೇವರ ಹತ್ತಿರಕ್ಕೆ ಹೋದವನು ದೇವರ ಹತ್ತಿರ ಸೇವಕ ನಂತೆಯೋ, ದೂತನಂತೆಯೋ ಪಕ್ಕದಲ್ಲಿರದೇ ದೇವರಲ್ಲಿ ಐಕ್ಯವಾಗಿ ಹೋಗುವನು. ದೇವರ ಹತ್ತಿರಕ್ಕೆ ಹೋಗಿರುವವನ್ಯಾರಾದರೂ ಆತನೊಳಗೆ ಸೇರಿ ಆತನಲ್ಲಿ ಬೆರೆತುಹೋಗುವುದಲ್ಲದೆ ಪಕ್ಕದಲ್ಲಿರುವುದಂತೂ ಇರುವುದಿಲ್ಲ. ಆದ್ದರಿಂದ ದೇವರ ಸಮಾಚಾರವನ್ನು ತೆಗೆದುಕೊಂಡು ಬರುವ ದೂತ ಯಾರೂ ಇಲ್ಲವೆಂದೇ ಹೇಳಬಹುದು. ಹಾಗಿರುವಾಗ ದೇವರು ತನ್ನ ದೂತನಿಂದ ತನ್ನ ಜ್ಞಾನವನ್ನು ತಿಳಿಯುವಹಾಗೆ ಮಾಡುತ್ತೇನೆಂದು ಹೇಳಿದ ಮಾತು ಏನಾ ಗುತ್ತದೆಂದು, ದೇವರ ಮಾತು ಅಸತ್ಯವಾ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ದೇವರ ಮಾತು ಎಂದಿಗೂ ಅಸತ್ಯವಾಗುವುದಿಲ್ಲ. ದೇವರು ಏನು ಹೇಳಿದರೂ ಅವು ತಪ್ಪದೆ ನೆರವೇರುತ್ತವೆ. ಇಲ್ಲಿ ನಾವು ಅರ್ಥ ಮಾಡಿಕೊಳ್ಳುವುದರಲ್ಲಿ ಯಾವುದಾದರೂ ಲೋಪ ಇದೆಯೇನೋ ಎಂದು ನೋಡಿಕೊಳ್ಳಬೇಕಾಗಿದೆ. ಆತನ ಮಾತು ನೆರವೇರುವುದಕ್ಕೆ ಯಾವುದಾದರೂ ನಿಗೂಢ ಭಾವವಿದೆಯೇನೋ ನೋಡಿಕೊಳ್ಳೋಣ. ದೇವರು ಸೃಷ್ಠಿ ಪೂರ್ವ ಇರುವಂತೆ ಅಲ್ಲದೆ ಸೃಷ್ಠಿನಂತರ ರೂಪ, ನಾಮ, ಕ್ರಿಯಾರಹಿತನಾಗಿ ಇದ್ದಾನೆನ್ನುವುದನ್ನು ನಾವು ಮರೆಯಬಾರದು. ದೇವರು ಸ್ವತಃವಾಗಿ ನೇರವಾಗಿ ಯಾರಹತ್ತಿರವೂ ಮಾತನಾಡುವುದಿಲ್ಲ. ಆದ್ದರಿಂದ ತನ್ನ ಜ್ಞಾನವನ್ನು ತನ್ನ ದೂತನಿಂದ ತಿಳಿಸುತ್ತೇನೆಂದಿದ್ದಾನೆ. ದೇವರು ಒಬ್ಬನೇ ಇದ್ದು, ದೂತರು ಯಾರೂ ಇಲ್ಲದಿರುವಾಗ ಆತನು ಆತನಾಗಿ (ದೇವರು ದೇವರಾಗಿ) ಅಲ್ಲದೆ ಮಾರು ವೇಷದಲ್ಲಿ ಬಂದು ಹೇಳುವುದರಿಂದ ತನ್ನ ಜ್ಞಾನ ಪ್ರಜೆಗಳಿಗೆ ತಿಳಿಯುತ್ತಿದೆ.

ದೇವರು ದೇವರಾಗಿ ಅಲ್ಲದೆ ಒಬ್ಬ ಮನುಷ್ಯನಂತೆ ಬರುತ್ತಿದ್ದಾನಾದ್ದರಿಂದ ದೇವರು ಸ್ವತಃವಾಗಿ ಹೇಳಿದಹಾಗೆಯೂ ಸಹ ಅಲ್ಲ. ಇಲ್ಲಿ ಮತ್ತೊಂದು ಮಾತನ್ನು ನೆನಪುಮಾಡಿಕೊಂಡರೆ ಯಾವ ಮನುಷ್ಯ ದೇವರ ಜ್ಞಾನ ಹೇಳಲಾರನು, ಯಾವ ಮನುಷ್ಯನಿಗೂ ದೇವರ ಜ್ಞಾನ ತಿಳಿದಿಲ್ಲ. ಆದ್ದರಿಂದ ಹೇಳಿದವನು ದೇವರೇ ಎಂದು, ಇದನ್ನನುಸರಿಸಿ ದೇವರು ಕೆಲಸಮಾಡಿದಂತೆ ಅಲ್ಲವೆ ಎಂದು ಯಾರಾದರೂ ಕೇಳಿದರೆ, ದೇವರು ಕೆಲಸಮಾಡುವುದಿಲ್ಲ ಎಂದು ಹೇಳುವುದಕ್ಕೆ ಬಂದು ಹೇಳಿರುವವನು ದೇವರು ಅಲ್ಲ ಮನುಷ್ಯನೆಂದು, ಹಾಗೆಂದು ಮನುಷ್ಯನಿಗೆ ದೇವರ ಜ್ಞಾನ ತಿಳಿಯದು ಎನ್ನುವ ಸೂತ್ರ ಇರುವುದರಿಂದ ಬಂದಿರುವವನು ಮನುಷ್ಯನಂತೆ ಇದ್ದರೂ ಆತನು ಎಲ್ಲರಂತೆ ಮನುಷ್ಯನಲ್ಲ, ಹಾಗೆಂದು ದೇವರೂ ಅಲ್ಲ, ಮನುಷ್ಯ ರೂಪದಲ್ಲಿರುವ ಭಗವಂತನೆಂದು ಹೇಳಬಹುದು. ಭಗವಂತ ನೆಂದರೆ ಇತ್ತ ಮನುಷ್ಯನೂ ಅಲ್ಲ ಅತ್ತ ದೇವರೂ ಅಲ್ಲ. ಮನುಷ್ಯನಿಗಿಂತ ಹೆಚ್ಚಿನವನು, ದೇವರಿಗಿಂತ ಕಡಿಮೆಯವನು ಭಗವಂತನು.

ದೇವರು ದೇವರಹಾಗಲ್ಲದೆ ಮನುಷ್ಯನ ಹಾಗೆ ಮಾರುವೇಷದಲ್ಲಿ ಬಂದರೆ ಆತನನ್ನು ಆಗ ಭಗವಂತನು ಅನ್ನಬೇಕು. ಭಗವಂತನು ಸಾಧಾರಣ ಮನುಷ್ಯನ ಹಾಗೆ ಇರುವುದರಿಂದ ಆತನನ್ನು ದೇವರ ಅವತಾರವಾಗಿ ಯಾರೂ ಗುರುತಿಸಲಾರರು. ಭಗವಂತನು ದೇವರಿಗೆ ಬದುಲು ಬಂದವನಾದ್ದರಿಂದ, ಇತರರು ದೇವರೆಂದು ಗುರುತಿಸುವುದಕ್ಕೆ ಅವಕಾಶವಿಲ್ಲದೆ ಮಾನವನಂತೆ ಬಂದು, ಭಗವಂತನೆಂದು ಸಹ ಯಾರಿಗೂ ತಿಳಿಯದಂತೆ ಇರುವವನು ದೇವರೇ ಆಗಿರುವುದರಿಂದ, ದೇವರ ಜ್ಞಾನ ದೇವರಿಗೇ ತಿಳಿದಿದೆ ಎನ್ನುವ ಸೂತ್ರದ ಪ್ರಕಾರ, ದೇವರ ಜ್ಞಾನ ಮನುಷ್ಯನಂತಿರುವ ಭಗವಂತನಿಗೆ ಸಂಪೂರ್ಣವಾಗಿ ತಿಳಿದಿರುತ್ತದೆ. ಆದ್ದರಿಂದ ಭಗವಂತನಾದ ಮನುಷ್ಯ ಸಂಪೂರ್ಣವಾಗಿ ಬೋಧಿಸಬಲ್ಲನು. ಭಗವಂತನಾದ ಮನುಷ್ಯನೇ ದೇವರೆಂದು ನನ್ನ ಮಾತಿಗೆ ಸಾಕ್ಷಿಯಾಗಿ, ಭಗವದ್ಗೀತೆಯನ್ನು ಹೇಳಿದ ಮನುಷ್ಯನಾಗಿ ಕಾಣಿಸುವ ಕೃಷ್ಣನು **"ನಾನೇ ದೇವರು ನನ್ನನ್ನು ಮೀರಿದ ದೇವರು ಇಲ್ಲವೆಂದು"** ಭಗವದ್ಗೀತೆಯಲ್ಲಿ

ಹೇಳುವುದು ನಡೆದಿದೆ. ತನ್ನ ದೂತನಿಂದ ಜ್ಞಾನವನ್ನು ತಿಳಿಸುವೆನೆಂದು ದೇವರು ಒಂದು ಕಡೆ ಹೇಳಿದರೂ, ತನ್ನ ಹತ್ತಿರ ತಾನು ಹೊರತು ಮತ್ತೊಬ್ಬನು ಯಾರೂ ಇಲ್ಲವಾದ್ದರಿಂದ ತಾನೇ ದೂತನಾಗಿ ಬರುತ್ತಿದ್ದಾನೆಂದು ನಾವು ತಿಳಿಯಬೇಕಾಗಿದೆ. ಮನುಷ್ಯರನ್ನು ದಿಗ್ಭ್ರಮೆಗೊಳಿಸಲು ತನ್ನನ್ನು ದೂತನಂತೆ ಹೇಳಿಕೊಂಡ ದೇವರು ದೂತನಾಗಿರುವ ಮನುಷ್ಯನನ್ನು ಯಾರೂ ಗುರುತಿಸದಂತೆ ಮಾಡಿದ್ದಾನೆ. ದೂತ ಅಥವಾ ಭಗವಂತನೆಂದು ಹೇಳಲ್ಪಡುವವನು ಯಾವಾಗ ಭೂಮಿ ಮೇಲೆ ಬರುತ್ತಿದ್ದರೂ, ಬಂದರೂ, ಬಂದುಹೋದರೂ ಸಹ ಯಾರಿಗೂ ತಿಳಿಯದಂತೆ ದೇವರು ಮಾಡಬಲ್ಲನು. ಈತನು ದೇವರೆಂದು ಎಂತಹವನಿಂದಾದರೂ ಭಗವಂತನಾದ ಮನುಷ್ಯ ಗುರುತಿಸಲ್ಪಡದಂತೆ ದೇವರು ತಯಾರಿಸಿಟ್ಟಿದ್ದಾನೆ. ಒಂದು ವೇಳೆ ಯಾರಾದರೂ ನಾನು ಮನುಷ್ಯ ಆಕಾರದಲ್ಲಿರುವ ಭಗವಂತನನ್ನು ಗುರುತಿಸಿದ್ದೇನೆಂದು ಹೇಳುವುದಾದರೆ, ಅಂಥವನಿಂದಲೇ ಈತನು ಭಗವಂತನಲ್ಲ, ಈತನಿಗೆ ಜ್ಞಾನವು ತಿಳಿಯದೆಂದು ಅನ್ನುವಹಾಗೆ ದೇವರು ತನ್ನ ಮಾಯೆಯಿಂದ ಮಾಡಬಲ್ಲನು.

ಮನುಷ್ಯನಂತಿರುವ ದೇವರು ಭಗವಂತನಾಗಿ ಭೂಮಿ ಮೇಲೆಗೆ ಎಷ್ಟೋ ಬಾರಿ ಬಂದಿದ್ದಾನೆ. ಆದರೂ ಆತನನ್ನು ಯಾರೂ ಗುರುತಿಸಿ ಈತನು ಇಂಥವನೆಂದು ಹೇಳಲಾರದೆ ಹೋಗಿದ್ದಾರೆ. ಯಾರಾದರೂ ಅಪರೂಪವಾಗಿ ಗುರ್ತಿಸಿದರೂ ಆತನ ಮಾತನ್ನು ಯಾರೂ ನಂಬಲಾರದೆ ಹೋಗುವುದಲ್ಲದೆ, ಆತನನ್ನು ಹೇಳನವಾಗಿ ಬುದ್ಧಿ ಕಡಿಮೆ ಇರುವವನಾಗಿ ಹೋಲಿಸಿ ಮಾತ ನಾಡುವರು. ಎಲ್ಲಾದರೂ ಯಾರಿಗಾದರೂ ಈತನು ಮನುಷ್ಯ ಆಕಾರದಲ್ಲಿರುವ ಭಗವಂತನೆಂದು ಸ್ವಲ್ಪ ಗುರುತಿಸಿದರೂ ಅವರ ನಂಬಿಕೆ ಅಪನಂಬಿಕೆಯಾಗುವಂತೆ ಮಾಯೆ ಮಾಡಬಲ್ಲದು. ಮನುಷ್ಯರನ್ನು ಮೋಸಮಾಡುವುದಕ್ಕೆ ಮಾಯೆ ಎನ್ನುವ ಗುಣಗಳ ಶಕ್ತಿಯನ್ನು ದೇವರು ಉಪಯೋಗಿಸಿಕೊಂಡು, ಆತನ ಗುಣಗಳಿಂದಲೇ ಆತನು ಭಗವಂತನೆಂದವನನ್ನು ಭಗವಂತನು ಅಲ್ಲವೆನಿಸುತ್ತಾನೆ. ದೇವರು ಭೂಮಿ ಮೇಲೆ ಮೂರು ವಿಧಗಳಲ್ಲಿ ತನ್ನ ಜ್ಞಾನವನ್ನು ತಿಳಿಸಿದಾಗ,

ಮೊದಲನೆಯದು ಶಬ್ಧದಿಂದ ಹೇಳುವುದರಿಂದ, ಹೇಳಿದವರು ಯಾರು ಎಂದು ನೋಡಬೇಕಾದ ಕೆಲಸ ಇಲ್ಲದಂತೆ ಹೋಗಿದೆ. ಇನ್ನು ಎರಡನೇ ವಿಧಾನದಲ್ಲಿ ತೆರೆಮರೆಯಲ್ಲಿದ್ದು ಹೇಳುವುದರಿಂದ ಮನುಷ್ಯರಿಗೆ ದೇವರ ಜ್ಞಾನ ತಿಳಿದರೂ, ಮರೆಯಲ್ಲಿದ್ದು ಹೇಳುವುದು ಗ್ರಹ ಎಂದು ತಿಳಿದುಹೋಗಿದೆ. ಗ್ರಹ ದೇವರಲ್ಲ ಆದ್ದರಿಂದ ಅಲ್ಲಿಯೂ ಸಹ ದೇವರು ತಿಳಿಯುವವನಲ್ಲ. ನಂತರ ಮೂರನೇ ವಿಧಾನದಲ್ಲಿ ಪ್ರತ್ಯಕ್ಷವಾಗಿ ಮಾರುವೇಷದಲ್ಲಿ ಭಗವಂತನಾಗಿರುವ ಮನುಷ್ಯ ಹೇಳಿದಾಗ ಬುದ್ಧಿವಂತನಾದವನು ಭಗವಂತನನ್ನು ಗುರುತಿಸುವುದಕ್ಕೆ ಅವಕಾಶವಿದೆ. ಆದರೂ ಯಾರಿಗೂ ತಿಳಿಯದಂತೆ ದೇವರು ಮಾಡುವನು.

ದೇವರು ಪ್ರಸ್ತುತ ಕಾಲದಲ್ಲಿ ಯಾವ ಕೆಲಸವನ್ನು ಮಾಡದೆ ಇದ್ದರೂ ಎಲ್ಲಾ ಕೆಲಸಗಳು ಮಾಡುವಹಾಗೆ ಮುಖ್ಯವಾಗಿ ಮಾಯೆಯನ್ನು ನೇಮಿಸಿಕೊಂಡಿದ್ದಾನೆ. ನಂತರ ತನ್ನ ಪರಿಪಾಲನೆ ಸಾಗುವುದಕ್ಕೆ ಪಾಲನಾ ವ್ಯವಸ್ಥೆಯನ್ನು ಏರ್ಪಡಿಸಿಕೊಂಡಿದ್ದಾನೆ. ಪಾಲನಾ ವ್ಯವಸ್ಥೆಯಲ್ಲಿ ಗ್ರಹಗಳು ಭೂತಗಳು ಎಷ್ಟೋ ಶ್ರದ್ಧೆಯಿಂದ ಕೆಲಸಮಾಡುತ್ತಿವೆ. ಶರೀರದ ಹೊರಗಿರುವ ತನ್ನ ಪಾಲನಾ ವ್ಯವಸ್ಥೆಯನ್ನು ಉಪಯೋಗಿಸಿಕೊಂಡಾಗಲೀ, ಅಥವಾ ಶರೀರದ ಒಳಗಿರುವ ಗುಣಗಳನ್ನು (ಮಾಯೆಯನ್ನು) ಉಪಯೋಗಿಸಿಕೊಂಡಾಗಲೀ, ತಾನು ದೇವರಾಗಿದ್ದು ಜ್ಞಾನವನ್ನು ತಿಳಿಸುವ ನಿಮಿತ್ತ ಮನುಷ್ಯನಹಾಗೆ ಬಂದಾಗ ತನ್ನನ್ನು ಯಾರೂ ಗುರುತಿಸದ ಹಾಗೆ ಮಾಡಿಕೊಳ್ಳುವನು. ಭೂಮಿ ಮೇಲೆ ಭಗವಂತನಲ್ಲದವರೆಲ್ಲರೂ ಭಗವಾನ್ ಎಂದು ಹೆಸರಿಟ್ಟುಕೊಂಡರೂ, ಅಸಲಾದ ಭಗವಂತನು ಮಾತ್ರ ಆ ಹೆಸರು ಇಟ್ಟುಕೊಳ್ಳುವುದಿಲ್ಲ, ಭಗವಂತನ ಹಾಗೆ ಯಾವ ಮಾತ್ರ ಕಾಣಿಸುವುದಿಲ್ಲ. ನಿಜವಾದ ಭಗವಂತನು ಭೂಮಿ ಮೇಲೆಗೆ ಬಂದು ಮನುಷ್ಯರಿಗೆ ಪ್ರತ್ಯಕ್ಷವಾಗಿ ಜ್ಞಾನವನ್ನು ಹೇಳುವಾಗ ಹೇಳುವ ಜ್ಞಾನವನ್ನನುಸರಿಸಿ, ಜ್ಞಾನವೊಂದರ ಪ್ರತ್ಯೇಕತೆಯನ್ನನುಸರಿಸಿ ಭಗವಂತನನ್ನು ಗುರುತಿಸುವುದಕ್ಕೆ ಅವಕಾಶವಿದ್ದರೂ, ಯಾವಾಗಲೋ ಒಂದು ಬಾರಿ ತಾನು ಹೇಳುವುದು ನಂಬದಂತೆ ಮಾಡುತ್ತಾ, ಕೆಲವರನ್ನು ತನ್ನ ಜ್ಞಾನಕ್ಕೆ ದೂರವಾಗಿರಿಸಿ,

ಪೂರ್ತಿ ವಿಶ್ವಾಸ ಇರುವವರನ್ನು ಮಾತ್ರ ತನ್ನ ಜ್ಞಾನವನ್ನು ವಿಶ್ವಾಸಿಸುವಹಾಗೆ ಮಾಡುತ್ತಾನೆ. ತನ್ನ ಜ್ಞಾನಕ್ಕೆ ಯಾರು ಅರ್ಹರೋ ಅವರಿಗೆ ಮಾತ್ರವೇ ತನ್ನ ಜ್ಞಾನದ ಮೇಲೆ ನಂಬಿಕೆ ಇರುವಂತೆ ಮಾಡಿ, ಅರ್ಹರಾಗದವರನ್ನು ತನ್ನ ಜ್ಞಾನಕ್ಕೆ ದೂರವಾಗಿಡುವನು. ಹೇಳುವುದು ಉನ್ನತವಾದ ಜ್ಞಾನವಾದಾಗ ಕೆಲವರು ನಂಬುವುದು, ಕೆಲವರು ನಂಬದೇ ಹೋಗುವುದು ಹೇಗೆ ನಡೆಯುತ್ತದೆ? ಕೆಲವರಿಗೆ ಮಾತ್ರ ಮಾಯೆ ಹೇಗೆ ಕೆಲಸಮಾಡುವುದು? ಕೆಲವರು ದೂರವಾಗಿ ಹೋಗುವುದಕ್ಕೆ ಮಾಯೆ ಕಾರ್ಯಾಚರಣೆ ಹೇಗಿರುತ್ತದೆ? ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನವಾಗಿ ನನ್ನ ಹತ್ತಿರ ನಡೆದ ಒಂದು ಸಂಘಟನೆಯನ್ನು ವಿವರಿಸುತ್ತೇನೆ ನೋಡಿ. ನಾನು ಎಷ್ಟೋ ಉನ್ನತವಾದ ಜ್ಞಾನ ರಹಸ್ಯಗಳನ್ನು ಹೇಳಿ ಎಲ್ಲರನ್ನೂ ಆಕರ್ಷಿಸಬೇಕೆಂದು ನೋಡಿದರೂ ಕೆಲವರು ಮಾತ್ರ ನನ್ನ ಜ್ಞಾನವನ್ನು ನಂಬದೆ ಹೋಗುವಹಾಗೆ ಮಾಯೆ ಮಾಡಿದೆ. ನಾನು ಇಲ್ಲಿಯವರೆಗು ಎಷ್ಟೋ ಉನ್ನತ ಜ್ಞಾನವನ್ನು ಹೇಳಿದರೂ ನಾನು ಒಂದು ಬಾರಿ ತಪ್ಪಾಗಿಯೋ, ಅದೇಕೆಲಸವಾಗಿಯೋ ಹೇಳಿದ ಜ್ಞಾನವನ್ನು ನೋಡಿ ಅದು ಅಸತ್ಯವೆಂದು ತಿಳಿದ ಕೆಲವರು ನೂರು ಸತ್ಯವಾದ ವಿಷಯಗಳನ್ನು ಸಹ ಬಿಟ್ಟು ಅವೆಲ್ಲವೂ ಹೀಗೇ ಅಸತ್ಯವಾಗಿ ಇರುವವೆನ್ನುವ ಭಾವದಿಂದ ಅವರು ನನ್ನಿಂದ ದೂರವಾಗಿ ಹೋಗುವುದಲ್ಲದೆ ನಾ ಹೇಳುವುದೆಲ್ಲವೂ ಅಸತ್ಯ ಜ್ಞಾನವೆಂದು ಪ್ರಚಾರ ಮಾಡುತ್ತಾ ಉಳಿದವರನ್ನೂ ಸಹ ಜ್ಞಾನಕ್ಕೆ ದೂರಮಾಡಿದ್ದಾರೆ.

ಗತಕಾಲದಲ್ಲಿ ಇಲ್ಲಿವರೆಗೂ ಯಾರೂ ಹೇಳದ ಜ್ಞಾನವನ್ನು ಹೇಳಿ, ನನ್ನ ಜ್ಞಾನ ಮೇಟಿ(ವಿಶೇಷವಾದ) ಜ್ಞಾನವೆನಿಸಿಕೊಳ್ಳುವಹಾಗೆ ಮಾಡಿದ್ದೇನೆ. **ಗರ್ಭಸ್ಥ ಶಿಶುವಿಗೆ ಪ್ರಾಣವಿಲ್ಲ, ಶಿಶು ಹುಟ್ಟಿದ ನಂತರವೇ ಪ್ರಾಣ ಬರುತ್ತದೆನ್ನುವ** ಸಂಚಲನಾತ್ಮಕ ವಿಷಯವನ್ನು ತಿಳಿಸಿದ್ದೇನೆ. ಅಷ್ಟೇ ಅಲ್ಲದೆ ಭೌತಿಕ ಶಾಸ್ತ್ರಜ್ಞರು ಯಾರೂ ಹೇಳದೇ **ಪುರುಷ ವೀರ್ಯ ಕಣವಿಲ್ಲದೆ, ಪುರುಷ ಸಂಪರ್ಕವಿಲ್ಲದೆ ಸ್ತ್ರೀಯರು ಗರ್ಭವನ್ನು ಧರಿಸುವರೆನ್ನುವ** ವಿಷಯವನ್ನೂ ಸಹ ತಿಳಿಸಿದ್ದೇವೆ.

ಇನ್ನೂ **ಮನುಷ್ಯರು ಹೊಂದುವ ಮರಣಗಳು ಮೂರು ವಿಧಗಳೆಂದು** ಮರಣ ರಹಸ್ಯವನ್ನು ತಿಳಿಸಿದ್ದೇವೆ. **ಪುನರ್ಜನ್ಮದಲ್ಲಿ ಕೆಲವರಿಗೆ ಮಾತ್ರ ಏಕೆ ಜ್ಞಾಪಕ ಬರುತ್ತದೋ ಹೇಗೆ ಬರುತ್ತದೋ** ವಿವರವಾಗಿ ಪುನರ್ಜನ್ಮ ರಹಸ್ಯವನ್ನು ಹೇಳಿದ್ದೇವೆ. ಹೀಗೆ ಶರೀರದೊಳಗಿನ ವಿಷಯಗಳನ್ನು ಎಷ್ಟೋ ಹೇಳಿದ ನಂತರ ಸಹ ಅವುಗಳಿಗೆ ಯಾರೂ ಸ್ಪಂದಿಸದೇ ಹೋಗುವುದು ನೋಡಿ, ಇವೆಲ್ಲವೂ ಬಹಳ ದೊಡ್ಡ ರಹಸ್ಯಗಳೆಂದು ಗುರುತಿಸದ ಮನುಷ್ಯರನ್ನು ನೋಡಿ ಒಂದುಬಾರಿ ಅದೇಕೆಲಸವಾಗಿ ಶರೀರದೊಳಗೆ ಸ್ಥೂಲವಾಗಿ ಕಾಣಿಸುವ ಅವಯವಗಳನ್ನು ಎರಡನ್ನು ಜಾಗವನ್ನು ಬದಲಾಯಿಸಿ ಹೇಳುವುದು ನಡೆದಿದೆ. ಗುಣಗಳ ವಿವರವನ್ನು ಹೇಳುತ್ತಾ 1) ಕಾಮ 2) ಕ್ರೋಧ 3) ಲೋಭ 4) ಮೋಹ 5) ಮಧ 6) ಮತ್ಸರ ಎನ್ನುವ ಗುಣಗಳಲ್ಲಿ ಪುರುಷರಿಗೆ 1) ಕಾಮ 3) ಲೋಭ 5) ಮಧ ಎನ್ನುವ ಮೂರು ಬೆಸ ಸಂಖ್ಯೆ ಗುಣಗಳು ಹೆಚ್ಚಾಗಿ ಇರುವವೆಂದೂ, ಹಾಗೇ ಸ್ತ್ರೀಯರಿಗೆ 2) ಕ್ರೋಧ 4) ಮೋಹ 6) ಮತ್ಸರ (ಅಸೂಯೆ) ಅನ್ನುವ ಸರಿಸಂಖ್ಯೆ ಗುಣಗಳು ಹೆಚ್ಚಾಗಿ ಇರುವವೆಂದು ಸತ್ಯವಾದ ಜ್ಞಾನವನ್ನು ಬೋಧಿಸುತ್ತಾ ಅದಕ್ಕೆ ಸಂಬಂಧವಿಲ್ಲದ ಅಸತ್ಯವನ್ನು ಜೋಡಿಸಿ ಹೇಳುವುದು ನಡೆದಿದೆ. ಆ ಅಸತ್ಯವೇನೆಂದರೆ! ಪುರುಷ ಶರೀರದಲ್ಲಿ ಎಡ ಭಾಗದಲ್ಲಿರುವ ಜೀರ್ಣಾಶಯ, ಸ್ತ್ರೀಯರಲ್ಲಿ ಬಲಗಡೆಗೆ ಇರುತ್ತದೆಂದು, ಪುರುಷರಲ್ಲಿ ಬಲಗಡೆಗಿರುವ ಪಿತ್ತಕೋಶ(ಲಿವರ್), ಸ್ತ್ರೀಯರಲ್ಲಿ ಎಡ ಗಡೆಗೆ ಇರುತ್ತದೆಂದು ಹಾಗೆ ಇರುವುದರಿಂದ ಪುರುಷರಲ್ಲಿ ಹೆಚ್ಚಾಗಿ ಕೆಲಸಮಾಡುವ ಗುಣಗಳು ಸ್ತ್ರೀಯರಲ್ಲಿ ಕಡಿಮೆಯಾಗಿ ಕೆಲಸಮಾಡುವವೆಂದು, ಪುರುಷರಲ್ಲಿ ಕಡಿಮೆಯಾಗಿ ಕೆಲಸಮಾಡುವ ಗುಣಗಳು ಸ್ತ್ರೀಯರಲ್ಲಿ ಹೆಚ್ಚಾಗಿ ಕೆಲಸಮಾಡುವ ವೆಂದು ಹೇಳುವುದು ನಡೆದಿದೆ. ಹಾಗೆ ಹೇಳಿದಾಗ ಶರೀರ ಅಂತರ್ಗತ ಅವಯವಗಳ ವಿಷಯಗಳು ತಿಳಿಯದವರು ಹೇಳಿದ ವಿಷಯವನ್ನು ನಂಬುವುದು ನಡೆದಿದೆ. ಶರೀರದಲ್ಲಿ ಅವಯವ ನಿರ್ಮಾಣ ತಿಳಿದವರೆಲ್ಲರಿಗೂ ಹೇಳಿದ ವಿಷಯ ಅಸತ್ಯವೆಂದು ಕೂಡಲೆ ತಿಳಿದುಹೋಯಿತು. ಅಲ್ಲಿ ಹೇಳಿರುವುದು

ಗುಣಗಳ ಪ್ರಭಾವ ಸ್ತ್ರೀ ಪುರುಷರ ಮೇಲೆ ಹೇಗೆ ಇರುವುದೆನ್ನುವ ವಿಷಯ. ಕಾಣಿಸದ ಗುಣಗಳಿಗೂ ಕಾಣಿಸುವ ಅವಯವಗಳಿಗೂ ಯಾವ ಸಂಬಂಧ ಇಲ್ಲದಿದ್ದರೂ ಅನವಶ್ಯಕ ಸಂಬಂಧವನ್ನಿಟ್ಟು ಹೇಳಿದ ಅಸತ್ಯ ವಿಷಯಗಳಿಗೆ ಬಹಳ ಜನರು ಸ್ಪಂದಿಸಿ ಅಸತ್ಯ ಜ್ಞಾನಕ್ಕೆ ದೂರವಾಗಿರಬೇಕೆಂದು ಅಂದಿನಿಂದ ಅವರು ನನ್ನ ಜ್ಞಾನಕ್ಕೆ ದೂರವಾಗಿ ಹೋಗುವುದು ನಡೆದಿದೆ.

ಗತಕಾಲದಲ್ಲಿ ಎಷ್ಟೋ ರಹಸ್ಯ ಜ್ಞಾನ ವಿಷಯಗಳನ್ನು, ಪೂರ್ತಿ ಸತ್ಯ ವಿಷಯಗಳನ್ನು ಹೇಳಿದರೂ, ಅವುಗಳಿಗೆ ಸ್ಪಂದಿಸದೆ ಅವುಗಳನ್ನು ಸರ್ವ ಸಾಧಾರಣ ವಿಷಯಗಳಾಗಿ ಅಂದುಕೊಂಡವರು, ಈಗ ಮಾತ್ರ ಸಂಬಂಧವಿಲ್ಲದ ವಿಷಯವನ್ನು ನೆಪದಂತೆ ಇಟ್ಟುಕೊಂಡು ಜ್ಞಾನಕ್ಕೆ ದೂರವಾಗುವುದು ನಡೆದಿದೆ. ಹಾಗೆಂದು ಹೇಳಿದ ಗುಣಗಳ ವಿಷಯ ಯಾವ ಮಾತ್ರ ಅಸತ್ಯವಾಗದೆ, ಪೂರ್ತಿ ಸತ್ಯವಾಗಿದೆ. ಅಸಲಾದ ಜ್ಞಾನವನ್ನು ಗುರುತಿಸದವರು ಸಂಬಂಧವಿಲ್ಲದ ಹೋಲಿಕೆಯನ್ನು ಹೇಳುತ್ತಾ ಅಸತ್ಯವನ್ನು ಹೇಳಿದರೆ, ಅದು ಪ್ರಾಮುಖ್ಯ ವಲ್ಲದಿದ್ದರೂ, ಪ್ರಾಮುಖ್ಯವಾದ ಗುಣ ಪ್ರಭಾವಗಳ ಜ್ಞಾನವನ್ನು ಬಿಟ್ಟು ಪ್ರಾಮುಖ್ಯವಲ್ಲದ ವಿಷಯದಿಂದ ಜ್ಞಾನಕ್ಕೆ ದೂರವಾಗುವುದು ನೋಡಿದ ನಂತರ ದೇವರ ವಿಷಯದಲ್ಲಿ ಸಹ ಮಾಯೆ ಹೀಗೇ ಮಾಡುವುದೆಂದು ತಿಳಿಯುತ್ತಿದೆ. ನಾನು ಹೇಳಿರುವುದು ಸರಿ ಬೆಸ ಗುಣಗಳನ್ನು, ಸ್ತ್ರೀ ಪುರುಷರ ಮೇಲೆ ಅವುಗಳ ಪ್ರಭಾವ. ಹೇಳಿದ ಜ್ಞಾನ ನೂರಕ್ಕೆ ನೂರು ಪಾಲು ಸತ್ಯವೇ, ಆದರೂ ಸಂಬಂಧವಿಲ್ಲದ ಅದರ ಹೋಲಿಕೆ ಅಸತ್ಯವಾಗಿರುವುದರಿಂದ ಅದನ್ನು ನೋಡಿ ಸತ್ಯವಾದ ಜ್ಞಾನವನ್ನು ಸಹ ಕಳೆದುಕೊಂಡಿದ್ದಾರೆ. ಗರ್ಭಾಶಯವನ್ನು ಕುರಿತು ಸಂಪೂರ್ಣವಾಗಿ ತಿಳಿದವನಿಗೆ ಜೀರ್ಣಾಶಯವನ್ನು ಕುರಿತು ತಿಳಿಯ ದಂತಿರುತ್ತದಾ! ಎಂದು ಸ್ವಲ್ಪವೂ ಆಲೋಚನೆ ಮಾಡಲಿಲ್ಲ. ಮರಣದಲ್ಲಿ ಕಾಣಿಸದ ಮನಸ್ಸಿನೊಂದರ ಸ್ಥಿತಿ ಗತಿಗಳನ್ನು ಹೇಳಿದವನಿಗೆ ಶರೀರದಲ್ಲಿ ಕಾಣಿಸುವ ಅವಯವ ವಿಷಯ ತಿಳಿಯದಂತಿರುತ್ತದಾ ಎಂದು ಸ್ವಲ್ಪವೂ ಅವಿಶ್ವಾಸಿಗಳು ಆಲೋಚಿಸಲಿಲ್ಲ.

ಹೇಳಿದ ತಪ್ಪನ್ನು ಮುಚ್ಚಿಟ್ಟುಕೊಳ್ಳುವುದಕ್ಕೆ ಹೀಗೆ ಬರೆದಿದ್ದಾನೆಂದು ನಾಳೆ ಕೆಲವರು ನನ್ನನ್ನು ಅನ್ನದೆ ಬಿಡುವುದಿಲ್ಲ. ಆದ್ದರಿಂದ ನನಗೆ ಸತ್ಯ ತಿಳಿದಿದೆಯೊ, ಅಸತ್ಯ ತಿಳಿದಿದೆಯೊ ನಿಮಗೇ ಅರ್ಥವಾಗುವಹಾಗೆ ಸ್ತ್ರೀ ಪುರುಷರ ಮೇಲೆ ಗುಣ ಪ್ರಭಾವ ಸತ್ಯವೆನ್ನುವುದಕ್ಕೆ ಸ್ವಲ್ಪ ವಿವರವನ್ನು ಹೇಳುತ್ತಿದ್ದೇನೆ ನೋಡಿರಿ. ಪೂರ್ವದ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಗರ್ಭಿಣಿ ಸ್ತ್ರೀಗೆ ಹುಟ್ಟುವ ಶಿಶುವು ಹೆಣ್ಣು ಶಿಶುವಾ ಗಂಡು ಶಿಶುವಾ ಎಂದು ತಿಳಿಯುವುದಕ್ಕೆ ಜ್ಯೋತಿಷ್ಯ ಸೂತ್ರವನ್ನು ಅನುಸರಿಸಿ ಒಂದು ಪದ್ಯವಿದೆ. ಆ ಪದ್ಯದಲ್ಲಿ ಹೇಳಿದ ಗಣಿತದ ಪ್ರಕಾರ ಲೆಕ್ಕಿಸಿ ಹುಟ್ಟುವ ಶಿಶುವನ್ನು ಕುರಿತು ಹೇಳುತ್ತಿದ್ದರಂತೆ. ಆ ಪದ್ಯ ಹೀಗೆ ಇದೆ ನೋಡಿರಿ.

ತರುಣೀ ನಾಮಾಕ್ಷರಗಳು ಸ್ಥಿರವಾಗಿ
ಏಳರಿಂದ ಹೆಚ್ಚಿಸಿ ಮಿಥಿ ಸೇರಿಸಿ
ನವಭಾಗ ಮಾಡಿದರೆ ಸರಿ ಮಗಳು
ಬೆಸ ಮಗನು ಮಾಡುವುದು ಗೊತ್ತು!

ಈ ಪದ್ಯದಲ್ಲಿನ ಭಾವದ ಪ್ರಕಾರ ನೋಡಿದರೆ ತರುಣಿ ಎಂದರೆ ಗರ್ಭಿಣೀ ಸ್ತ್ರೀ ಎಂದು ಅರ್ಥ. ನಾಮಾಕ್ಷರಗಳನ್ನು ಸ್ಥಿರವಾಗಿ ಏಳರಿಂದ ಹೆಚ್ಚಿಸಿ ಅಂದರೆ ಸ್ತ್ರೀ ವೊಂದರ ಹೆಸರಲ್ಲಿನ ಅಕ್ಷರಗಳನ್ನು ಏಳರಿಂದ ಗುಣಿಸಿ ಎಂದು ಅರ್ಥ. ಗುಣಿಸಿದಾಗ ಬಂದಿರುವ ಸಂಖ್ಯೆಗೆ ಆ ದಿನವೊಂದರ ಮಿಥಿಯನ್ನು ಸೇರಿಸಿ, ಬಂದಿರುವ ಮೊತ್ತವನ್ನು ಒಂಭತ್ತಿನಿಂದ ಭಾಗಿಸಿದಾಗ ಬಂದಿರುವ ಶೇಷ ಸರಿಸಂಖ್ಯೆಯಾದರೆ ಮಗಳು ಹುಟ್ಟುತ್ತದೆಂದು, ಒಂದು ವೇಳೆ ಬಂದಿರುವ ಸಂಖ್ಯೆ ಬೆಸ ಸಂಖ್ಯೆಯಾದರೆ ಮಗ ಹುಟ್ಟುವನೆಂದು ಹೇಳಬಹುದೆಂದು ಪದ್ಯದಲ್ಲಿ ಇದೆ. ಈ ಪದ್ಯವನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೆ ಬಂದಿರುವ ಶೇಷ ಸರಿ ಆದರೆ ಮಗಳು, ಬೆಸ ಆದರೆ ಮಗ ಎಂದು ಹೇಳುವುದು ವಿಶೇಷ. ಈಗ ಅಸಲು ವಿಷಯಕ್ಕೆ ಬಂದು ನೋಡಿದರೆ ನಮ್ಮ ತಲೆಯಲ್ಲಿರುವ ಗುಣಚಕ್ರದಲ್ಲಿನ ಗುಣಗಳು ಒಳ್ಳೆ ಗುಣಗಳು ಆರು,

ಕೆಟ್ಟ ಗುಣಗಳು ಆರು ಇವೆ. ಕೆಟ್ಟ ಗುಣಗಳನ್ನು ಜೀವಿಗೆ ಶತ್ರುಗಳೆಂದು ಭಾವಿಸಿ ಅವು ಆರನ್ನು ಶತ್ರುವರ್ಗವೆಂದು ಹೇಳಿದ್ದಾರೆ. ಅರಿಷಟ್ ವರ್ಗ ಎನ್ನುವ ಹೆಸರಿಂದ ಶತ್ರು ಗುಂಪು ಗುಣಗಳನ್ನು ಕರೆಯುತ್ತಿದ್ದಾರೆ. ಹಾಗೇ ಮಿತ್ರವರ್ಗ ಗುಣಗಳೂ ಸಹ ಆರು ಇವೆ. ಮೊದಲು ಶತ್ರು ವರ್ಗದಲ್ಲಿನ ಗುಣಗಳನ್ನು ತೆಗೆದುಕೊಂಡು ನೋಡಿದರೆ ಆರು ಗುಣಗಳಲ್ಲಿ ಕ್ರಮವಾಗಿ ಮೂರು ಬೆಸ ಸಂಖ್ಯೆ ಹೊಂದಿವೆ, ಮೂರು ಸರಿ ಸಂಖ್ಯೆ ಹೊಂದಿವೆ. ಹಾಗೇ ಒಳ್ಳೆಯ ಗುಣಗಳಾದ ಮಿತ್ರವರ್ಗ ಆರು ಗುಣಗಳಲ್ಲಿ ಕೂಡಾ ಕ್ರಮವಾಗಿ ಮೂರು ಬೆಸ, ಮೂರು ಸರಿಸಂಖ್ಯೆ ಇರುವ ಗುಣಗಳು ಇವೆ. ಇದೆಲ್ಲಾ ಏಕೆ ಹೇಳುತ್ತಿದ್ದೇವೆಂದರೆ! ಜ್ಯೋತಿಷ್ಯಕ್ಕೆ ಸಂಬಂಧಿಸಿದ ಪದ್ಯವನ್ನು ಈಗ ಹೇಳಿಕೊಂಡಿದ್ದೇವಲ್ಲವೆ! ಆ ಪದ್ಯದಲ್ಲಿ ಸಹ ಸರಿ ಬೆಸ ಎನ್ನುವ ಪದಗಳು ಇವೆ. ಈಗ ಗುಣಗಳಲ್ಲಿಯೂ ಸಹ ಸರಿ ಬೆಸ ಗುಣಗಳನ್ನು ಹೇಳಿಕೊಂಡಿದ್ದೇವೆ. ಇನ್ನು ಸ್ತ್ರೀ ಗರ್ಭ ಧರಿಸಿದಾಗ ಗರ್ಭಾಶಯದಲ್ಲಿ ಸ್ತ್ರೀ ಅಂಡದಿಂದ ಪುರುಷನ ಕ್ರೋಮೋಜೋಮ್‌ಗಳು (x,y) ಎನ್ನುವವು ಬೆಸ ಸಂಖ್ಯೆಯೊಂದಿಗೆ ಸೇರಿದರೆ ಪುರುಷನು, ಸರಿ ಸಂಖ್ಯೆಯೊಂದಿಗೆ ಸೇರಿದರೆ ಸ್ತ್ರೀ ಹುಟ್ಟುತ್ತದೆ. ವಿವರವಾಗಿ ಹೇಳಿಕೊಂಡರೆ ಯಕ್ಸ್ (x) ಅನ್ನುವ ಕ್ರೋಮೋಜೋಮ್ ಬೆಸ ಅಂದುಕೊಳ್ಳಿ, ವೈ (y) ಎನ್ನುವುದು ಸರಿ ಸಂಖ್ಯೆ ಅಂದುಕೊಳ್ಳಿ. ಇದರ ಪ್ರಕಾರ ಸ್ತ್ರೀ ಅಂಡದಿಂದ ಬೆಸ ಆದ ಯಕ್ಸ್ (x) ಸೇರಿಕೊಂಡರೆ ಗಂಡು ಶಿಶುವು, ವೈ (y) ಎನ್ನುವ ಸರಿಸಂಖ್ಯೆ ಸೇರಿಕೊಂಡರೆ ಹೆಣ್ಣು ಶಿಶುವು ಗರ್ಭದಲ್ಲಿ ತಯಾರಾಗುತ್ತದೆ. ಈ ಸೂತ್ರವನ್ನನುಸರಿಸಿ ಜ್ಯೋತಿಷ್ಯದಲ್ಲಿ ಪದ್ಯವನ್ನು ತಯಾರು ಮಾಡಿದ್ದಾರೇನೊ ಎನಿಸುತ್ತದೆ.

ಈಗ ಪೂರ್ವದ ಹಿರಿಯರು ಹೇಳಿದ ಜ್ಯೋತಿಷ್ಯದ ಪ್ರಕಾರವಿರುವ ಪದ್ಯವನ್ನು ನೋಡಿದರೆ ಅದರಲ್ಲಿ ಶೇಷ ಸರಿ ಬೆಸವನ್ನು ಅನುಸರಿಸಿ ಹೆಣ್ಣು ಗಂಡು ಎಂದು ಹೇಳುವುದೂ, ಭೌತಿಕಶಾಸ್ತ್ರದ ಪ್ರಕಾರ ಪುರುಷ ವೀರ್ಯದಲ್ಲಿನ ಯಕ್ಸ್, ವೈ (XY) ಕ್ರೋಮೊಜೋಮ್‌ಗಳನ್ನು ಅನುಸರಿಸಿ ಪುರುಷ ಅಥವಾ ಸ್ತ್ರೀ ಶಿಶುವು ಜನನ ನಡೆಯುತ್ತದೆಂದು ಹೇಳುವುದೂ, ಮನುಷ್ಯ ತಲೆಯಲ್ಲಿರುವ

ಗುಣಗಳ ಬೆಸ, ಸರಿ ಸಂಖ್ಯೆಯನ್ನನುಸರಿಸಿ ಸ್ತ್ರೀ ಪುರುಷರಲ್ಲಿ ಭಾವಗಳಿವೆಯೆಂದು ಈಗ ನಾವು ಹೇಳುವುದನ್ನನುಸರಿಸಿ ಎಲ್ಲಾ ಆಧಾರಗಳು ಒಂದು ದಾರಿಯೊಳಗೆ ಬರುತ್ತಿವೆ. ಶರೀರದಲ್ಲಿ ಸ್ಥೂಲವಾಗಿರುವ ಅವಯವಗಳಿಗು ಗುಣಗಳಿಗು ಎಂತಹ ಸಂಬಂಧವಿಲ್ಲ. ಆದ್ದರಿಂದ ಜೀರ್ಣಾಶಯು, ಪಿತ್ತಕೋಶವೊಂದರ ಸ್ಥಾನವನ್ನನುಸರಿಸಿ ಸ್ತ್ರೀ ಪುರುಷರಿಗೆ ಗುಣಭಾವದಲ್ಲಿ ವ್ಯತ್ಯಾಸಗಳಿವೆಯೆಂದು ಒಂದು ಮಾತು ಹೇಳಿದ್ದೇವಾಗಲಿ ಅವುಗಳಿಗೆ ಸರಿ ಬೆಸ ಗುಣಗಳಿಗೆ ಎಂತಹ ಸಂಬಂಧವನ್ನು ನಾವು ತೋರಿಸಲಿಲ್ಲ. ಅವಯವಗಳಿಗು ಗುಣಗಳಿಗು ಸಂಬಂಧವಿಲ್ಲವೆಂದು ನನಗೆ ತಿಳಿದರೂ, ಆತ್ಮ ಅದೇ ಕೆಲಸವಾಗಿ ಹೇಳಿಸಿದೆ. ಹಾಗೆ ಮಾಡುವುದರಿಂದ ಕೆಲವರಿಗೆ ಅಪನಂಬಿಕೆ ಉಂಟಾಗಿದೆ, ತನ್ನ ಜ್ಞಾನದಿಂದ ದೂರ ಮಾಡುವುದೇ ಆತ್ಮ ಉದ್ದೇಶವೆಂದುಕೊಳ್ಳುತ್ತೇನೆ. ಹಾಗೆ ಅಸತ್ಯವನ್ನು ಹೇಳುವುದರಿಂದ ನನ್ನನ್ನು ತಪ್ಪು ಸಮಾಚಾರವನ್ನು ತಿಳಿಸಿದ್ದಾನೆಂದು ಬಹಳ ಜನ ಅಂದುಕೊಳ್ಳುವುದು ನಡೆದಿದೆ. ಆದರೆ ನಾನು ಗತದಲ್ಲಿ ಎರಡು ಮೂರು ತಿಂಗಳ ಕೆಳಗೇ ಒಂದು ಮಾತು ಹೇಳಿದ್ದೇನೆ. ಇಲ್ಲಿ ಹೇಳುವವೆಲ್ಲಾ ನಿಜವೆಂದು ನಂಬಬೇಡಿ ಎಂದು ಹೇಳುವುದು ನಡೆದಿದೆ. ಕೆಲವು ಮಾತುಗಳು ಸುಳ್ಳಾಗಿ ಹೇಳಿರುವವೆಂದು ಸಂಶಯ ಇರುವುದರಿಂದ ಹಾಗೆ ಹೇಳಿದ್ದೇವೆ. ಅಷ್ಟೇ ಅಲ್ಲದೆ ಬಹಳ ಸಾರಿ ನಾನು ಜೀವಿ, ನನಗೆ ಏನು ತಿಳಿಯದು. ಶರೀರದಲ್ಲಿ ಅಧಿಪತಿಯಾದ ಆತ್ಮ ಆಡಿಸಿದಂತೇ ಕದಲುತ್ತೇನೆ, ಹೇಳಿಸಿದಂತೇ ಮಾತನಾಡುತ್ತೇನೆ, ಇಲ್ಲಿ ಬರುವ ಕೀರ್ತಿ ಅಪಕೀರ್ತಿಗಳೆಲ್ಲಾ ಆತ್ಮಕ್ಕೇ ಸೇರುತ್ತವೆಂದು ಸಹ ಹೇಳಿದ್ದೇವೆ.

ಹೇಳುವ ಜ್ಞಾನ ಉನ್ನತವಾದುದು. ಜ್ಞಾನವನ್ನು ಹೇಳುವುದರಲ್ಲಿ ಆತ್ಮ ಅಸತ್ಯವಾಗಿ ಎಂದಿಗೂ ಹೇಳಲಿಲ್ಲ. ಒಂದು ಲೆಕ್ಕದಲ್ಲಿ ಹೇಳಬೇಕೆಂದರೆ ಇಲ್ಲಿ ಆತ್ಮ ತಿಳಿಸುವ ಜ್ಞಾನ ಪ್ರಪಂಚದಲ್ಲಿ ಯಾರೂ ತಿಳಿಸದಿರುವುದೆಂದು ಹೇಳಬಲ್ಲೆನು. ಕಳೆದ ತಿಂಗಳ ಸಮಾವೇಶದಲ್ಲಿಯೂ ಸಹ ಸ್ತ್ರೀ ಪುರುಷರಲ್ಲಿ ಗುಣ ಭಾವಗಳು ಹೆಚ್ಚು ಕಡಿಮೆಗಳಿವೆಯೆಂದು, ಇಂತಹ ಗುಣಗಳೇ ಸ್ತ್ರೀಯರಲ್ಲಿ ಹೆಚ್ಚಾಗಿವೆಯೆಂದು, ಇಂತಹ ಗುಣಗಳೇ ಪುರುಷರಲ್ಲಿ ಹೆಚ್ಚಾಗಿ ಇವೆಯೆಂದು ಹೇಳುವುದು ದೊಡ್ಡ

ಸಂಚಲನಾತ್ಮಕ ಜ್ಞಾನವೇ. ಇಲ್ಲಿಯವರೆಗು ಯಾವ ಋಷಿಗಳು, ಮಹರ್ಷಿಗಳು ಹೇಳದ ವಿಷಯವನ್ನು ಎಲ್ಲಾ ತಿಳಿದ ಆತ್ಮ ಹೊರತು ಯಾರೂ ಹೇಳಲಾರರೆಂದೇ ಹೇಳಬಹುದು. ಗತದಲ್ಲಿ ಮೂರು ಮೂಲ ಗ್ರಂಥಗಳಲ್ಲಿಯೂ ಸಹ ಹೇಳದ ಜ್ಞಾನ ವಿಷಯಗಳನ್ನು ಆತ್ಮ ತಿಳಿಸಿದೆ. ಅಷ್ಟು ದೊಡ್ಡ ರಹಸ್ಯಗಳನ್ನು ಹೇಳಿದ ಆತ್ಮಕ್ಕೆ, ಶರೀರಗಳಿಗೆ ಅಧಿಪತಿಯಾಗಿರುವ ಆತ್ಮಕ್ಕೆ, ಶರೀರದಲ್ಲಿ ಎಲ್ಲಾ ವ್ಯಾಪಿಸಿರುವ ಆತ್ಮಕ್ಕೆ ಶರೀರದಲ್ಲಿನ ಅವಯವಗಳ ವಿಷಯ ತಿಳಿಯದಾ! ತಿಳಿದು ಅಸತ್ಯವಾಗಿ ಹೇಳುತ್ತಿದೆಯೆಂದರೆ ಅದರಲ್ಲಿ ಏನೋ ತಿರಕಾಸು ಇದೆಯೆಂದು ಊಹಿಸಬಹುದು. ನಮ್ಮ ಊಹೆ ಪ್ರಕಾರ ಶ್ರದ್ಧೆಯಿಲ್ಲದವರನ್ನೆಲ್ಲಾ ಆತ್ಮ ಅದೇ ಕೆಲಸವಾಗಿ ಪಕ್ಕಕ್ಕೆ ತಳ್ಳುವುದಕ್ಕೆ ಹಾಗೆ ಮಾಡಿದೆಯೆಂದು ಅರ್ಥವಾಗಿದೆ.

ಮೇಲೆ ಕಾಣಿಸುವುದಕ್ಕೆ ಒಬ್ಬ ವ್ಯಕ್ತಿ ಮಾತನಾಡಿದರೂ ಆತನ ಮೂಲಕ ಮಾತನಾಡುವುದು ಆತ್ಮೇ ಎಂದು ಬಹಳ ಸಾರಿ ನಾನು ಹೇಳಿದ್ದೇನೆ. ಒಬ್ಬ ವ್ಯಕ್ತಿಯಾಗಿ (ಜೀವಿಯಾಗಿ) **"ಗುತ್ತಾ"** ಗ್ರಂಥದಲ್ಲಿ ನನ್ನನ್ನು ಕುರಿತು ನಾನು ಹೇಳಿಕೊಳ್ಳುವುದು ನಡೆದಿದೆ. ನಾನು ಈ ದಿನ ಹೇಳುವ ಜ್ಞಾನ ಎಲ್ಲಿಯೂ ಕಲಿತುಕೊಳ್ಳಲಿಲ್ಲವೆಂದು, ಕಲಿತುಕೊಳ್ಳುವ ಅವಕಾಶ ನನ್ನ ಜೀವನದಲ್ಲಿ ಬರಲಿಲ್ಲವೆಂದು ಹೇಳಿದ್ದೇವೆ. ಅಂತಹ ನಾನು ದೇಶದಲ್ಲಿನ ಗುರುಗಳು, ಸ್ವಾಮೀಜಿಯರು ಮೊದಲಾದವರು ಇಲ್ಲಿಯವರೆಗು ಹೇಳದ ವಿಧದಲ್ಲಿ ಭಗವದ್ಗೀತೆಯುನ್ನು ಹೇಳುವುದು ಮನುಷ್ಯನಾಗಿ ನಾನು ಮಾಡಿದ ಕೆಲಸವಲ್ಲವೆಂದು, ಸ್ವತಃವಾಗಿ ಆತ್ಮವೇ ಹಾಗೆ ಮಾಡಿದೆಯೆಂದು ಬಹಳ ಸಾರಿ ಹೇಳಿದ್ದೇನೆ. ನನ್ನ ಹತ್ತಿರಕ್ಕೆ ಬಂದಿರುವವರು ಭಯಂಕರ ರೋಗಗಳಿಂದ ಹೊರಬಿದ್ದಾಗ ಅವರು ಬಂದು ನನ್ನನ್ನು ಹೊಗಳಿದರೆ ಆಗಲೂ ಸಹ ಅದೇನೋ ನನ್ನಿಂದ ನಡೆಯಲಿಲ್ಲ. ಆತ್ಮನಿಂದ ನಡೆದಿದೆಯೆಂದು ಹೇಳಿದ್ದೇವೆ. ಇಲ್ಲಿಗೆ ಬಂದು ಜ್ಞಾನ ತಿಳಿದುಕೊಂಡವರಿಗೆ ಯಾವ ಔಷಧಿ ಇಲ್ಲದೆ ರೋಗಗಳು ಹೋದವರು ಬಹಳ ಜನರಿದ್ದಾರೆ. ಅವರೆಲ್ಲರಿಗೂ ಆತ್ಮೇ ಕಾರಣವೆಂದೂ, ಏನು ಮಾಡಿದರೂ ಆತ್ಮೇ ಮಾಡುವುದೆಂದು ಹೇಳಿದ್ದೇವೆ. ಅಂತಹ ಆತ್ಮ

ಯಾರನ್ನು ಜ್ಞಾನಕ್ಕೆ ಹತ್ತಿರ ಸೇರಿಸಬೇಕೊ, ಯಾರನ್ನು ಜ್ಞಾನಕ್ಕೆ ದೂರ ಮಾಡಬೇಕೋ ನಿರ್ಣಯಿಸಿಕೊಂಡು ಮಾಡಬಲ್ಲದು. ಪ್ರಪಂಚದಲ್ಲಿ ಇತ್ತ ಜೀವಿಯಾಗಲೀ ಅತ್ತ ದೇವರಾಗಲೀ ಏನೂ ಮಾಡಲಾರರು. ಮಾಡುವುದೆಲ್ಲಾ ಆತ್ಮೇ ಎಂದು, ಎಲ್ಲಾ ಮಾಡುವ ಆತ್ಮ ಇಲ್ಲಿಯವರೆಗು ಎಲ್ಲೂ ಆತ್ಮ ಇಂತಹದೆಂದು ಹೊರಬೀಳಲಿಲ್ಲವೆಂದು ಹೇಳಿರುವುದು ಇಲ್ಲೇ. ಆತ್ಮನನ್ನು ಕುರಿತಿರುವ ಸಮಾಚಾರ ಇಲ್ಲಿಯವರೆಗು ಇಲ್ಲಿ ಹೊರತು ಎಲ್ಲೂ ಹೊರಬೀಳಲಿಲ್ಲವೆಂದು ಕೆಲವರಿಗೆ ತಿಳಿದಿದೆ. ಭೂಮಿ ಮೇಲೆ ಬಹಳ ಜನರಿಗೆ ಆತ್ಮ ಮಾಡುವ ಕೆಲಸಗಳು ತಿಳಿಯದೆ, ಆತ್ಮ ಆಡಿಸುತ್ತಿದೆಯೆಂದು, ಆತ್ಮ ನಡೆಸುತ್ತಿದೆಯೆಂದು, ಆತ್ಮ ಹಾಡಿಸುತ್ತಿದೆಯೆಂದು, ಆತ್ಮ ಮಾತನಾಡಿಸುತ್ತಿದೆ ಯೆಂದು ತಿಳಿಯದೆ ಶರೀರದಲ್ಲಿ ಆತ್ಮ ಎಲ್ಲರಂತೆ ನಟಿಸುತ್ತಿದೆಯೆಂದು ಗ್ರಹಿಸಲಾರದೆ ಹೋಗಿದ್ದಾರೆ. ಆದ್ದರಿಂದ ಕಾಣಿಸುವ ಶರೀರದಿಂದ ನಡೆಯುವ ಕೆಲಸಗಳಿಗೆ ಜೀವಿಯಾದ ನನ್ನನ್ನು ಜವಾಬ್ದಾರನಂತೆ ಮಾಡುತ್ತಿದ್ದಾರೆ. ನಿಜಕ್ಕೆ ನಾನು ಯಾವುದಕ್ಕೂ ಜವಾಬ್ದಾರನಲ್ಲವೆಂದು ನನಗೆ ಚೆನ್ನಾಗಿ ತಿಳಿದಿದೆ. ಆದ್ದರಿಂದ ನನಗೆ ಪಾಪ ಬರುವುದಿಲ್ಲ, ಪುಣ್ಯವೂ ಬರುವುದಿಲ್ಲ.

ಕಳೆದ ಸಮಾವೇಶದಲ್ಲಿ ಗುಣಗಳ ತಾರತಮ್ಯ ಸ್ತ್ರೀ ಪುರುಷರ ಬಗ್ಗೆ ಹೇಗಿದೆಯೋ ಹೇಳುವುದು ದೊಡ್ಡ ರಹಸ್ಯ. ಹೇಳಿದ ಜ್ಞಾನ ದೊಡ್ಡದಾದರೂ ಅದಕ್ಕೆ ಸಂಬಂಧವಿಲ್ಲದ ಅಸತ್ಯವನ್ನು ಹೇಳುವುದರಿಂದ ಕೆಲವರು ಜ್ಞಾನದಲ್ಲಿ ನಷ್ಟ ಹೋಗಿದ್ದಾರೆ. ಕೆಲವರು ಲಾಭಹೊಂದಿದ್ದಾರೆ. ಆತ್ಮದ ಮೇಲೆ ನಂಬಿಕೆ ಇರುವವರು ಲಾಭಹೊಂದಿದ್ದಾರೆ, ನಂಬಿಕೆ ಇಲ್ಲದವರು ನಷ್ಟಹೋಗಿದ್ದಾರೆ. ಈ ವಿಧವಾಗಿ ಆತ್ಮ ಮಾಡುವುದರಲ್ಲಿ ಒಂದು ಉದ್ದೇಶವಿದೆಯೆಂದು ಹೇಳಬಲ್ಲೆನು. ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವಾಗಿ ತಿಳಿಸಿ, ಪ್ರಪಂಚದಲ್ಲಿನ ಎಲ್ಲಾ ಮತಗಳ ಮನುಷ್ಯರನ್ನು ತನ್ನ ಕಡೆ ಆಕರ್ಷಿಸಿಕೊಂಡು, ಎಲ್ಲರನ್ನೂ ಒಂದೇ ದೈವಮಾರ್ಗದಲ್ಲಿ ನಡೆಸಬೇಕೆನ್ನುವ ಭಾವದಿಂದಲೇ ನಾನು ಪಥಕದ ಪ್ರಕಾರ ಜ್ಞಾನವನ್ನು ಬೋಧಿಸುತ್ತಿರುವುದು. ಸೃಷ್ಟ್ಯಾದಿಯಿಂದ ಆತ್ಮವೊಂದರ ಪಾತ್ರ

ಹೊರಬೀಳದಂತೆ ಮಾಡಿಕೊಂಡಿರುವುದೂ ಆತ್ಮೇ, ಈಗ ಇಲ್ಲಿ ಈ ಜ್ಞಾನದಿಂದ ಹೊರಬಿದ್ದು ತನ್ನ ವಿಷಯ ಎಲ್ಲರಿಗೂ ತಿಳಿಯುವಂತೆ ಮಾಡುವುದೂ ಆತ್ಮೇ. ಪ್ರಪಂಚದಲ್ಲಿ ಇಲ್ಲಿಯವರೆಗೂ ತಿಳಿಯದಿರುವುದೂ, ಅಂತ್ಯಸಿಗದಿರುವುದೂ, ಅರ್ಥವಾಗದಿರುವುದೂ ಆತ್ಮೇ. ಆತ್ಮ ಮನುಷ್ಯನನ್ನು ಆಡಿಸುತ್ತಾ ಅವರವರ ಶ್ರದ್ಧೆಯನ್ನನುಸರಿಸಿ ಮನುಷ್ಯನನ್ನು ದೇವರಕಡೆಗಾಗಲೀ, ಮಾಯೆಕಡೆಗಾಗಲೀ ನಡೆಸುತ್ತದೆ. ಇರುವ ವಾಸ್ತವವನ್ನು ಹೇಳಿದರೆ ಆತ್ಮ ಮನುಷ್ಯನನ್ನು ದೈವದಕಡೆಗಾಗಲೀ, ಮಾಯೆಕಡೆಗಾಗಲೀ ನಡೆಸುವುದಕ್ಕೆ ಅವಶ್ಯವನ್ನನುಸರಿಸಿ ಅಸತ್ಯವೂ ಹೇಳುತ್ತಿದೆ, ಹಾಗೇ ಮೋಸವೂ ಮಾಡುತ್ತಿದೆ. ಜ್ಞಾನವಿಲ್ಲದ ಕೆಲವರು ಬಾಬಾಗಳ ಹತ್ತಿರ ಮಹತ್ವಗಳನ್ನು ಕಲ್ಪಿಸಿ, ಪ್ರಜೆಗಳನ್ನು ಮಹತ್ವಗಳಿಗೆ ಆಕರ್ಷಿಸುವಂತೆ ಮಾಡಿ, ಅವರನ್ನು ದೊಡ್ಡದಾಗಿ ನಂಬಿ ಅವರನ್ನೇ ದೇವರಾಗಿ ಲೆಕ್ಕಿಸಿಕೊಂಡು, ಜ್ಞಾನವಿಲ್ಲದ ಜೀವನವನ್ನು ನಡೆಸುವಂತೆ ಆತ್ಮ ಮಾಡುತ್ತಿದೆ. ಮನುಷ್ಯನ ಶ್ರದ್ಧೆಯನ್ನನುಸರಿಸಿ ಬಾಬಾರನ್ನು ನಿಜ ದೈವವಾಗಿ ಭಾವಿಸುವಂತೆ ಮಾಡುತ್ತಿದೆ. ಹಾಗೇ ಕೆಲವರನ್ನು ಬಾಬಾರವರ ಕಡೆ ಹೋಗದಂತೆ ಮಾಡಿ ಸ್ವಚ್ಛವಾದ ದೈವಜ್ಞಾನದ ಕಡೆ ಹೋಗುವಂತೆ ಮಾಡುತ್ತಿದೆ. ಕೆಲವರನ್ನು ಯಾವ ಕಡೆ ಇಲ್ಲದೆ ಕೇವಲ ಪ್ರಪಂಚ ವಿಷಯಗಳಲ್ಲೇ ಮುಳುಗಿರುವಂತೆ ಮಾಡುತ್ತಿದೆ. ಎಲ್ಲದಕ್ಕೂ ಆಧಾರವಾದ ಆತ್ಮ ಎಲ್ಲರ ಶರೀರಗಳಲ್ಲಿದ್ದು, ಎಲ್ಲಾ ಶರೀರಗಳನ್ನು ನಡೆಸುತ್ತಾ, ಎಲ್ಲಾ ಶರೀರಗಳಿಗೂ ಯಜಮಾನನಂತೆ ಇದ್ದು, ಏನೂ ತಿಳಿಯದ ಸಾಧಾರಣ ಮನುಷ್ಯನಿಂದ ಉನ್ನತವಾದ ಜ್ಞಾನವನ್ನು ಹೇಳಿಸುತ್ತಿದೆ. ಹಾಗೇ ಏನೂ ತಿಳಿಯದ ಸಾಧಾರಣ ಮನುಷ್ಯನಿಂದ ಅವನಿಗೆ ತಿಳಿಯದಿದ್ದರೂ, ಆತನಿಂದ ಅನೇಕ ಅದ್ಭುತ ಮಹತ್ವಗಳನ್ನು ಮಾಡಿಸಿ, ಆತನನ್ನೇ ದೊಡ್ಡವನಂತೆ ಕಾಣಿಸುವ ದೇವರಂತೆ ಲೆಕ್ಕಿಸುವ ಹಾಗೆ ಮಾಡುತ್ತಿದೆ. ಹಾಗೆ ಆತ್ಮ ಅದೇ ಕೆಲಸವಾಗಿ ಮಾಡುವುದು ಏಕೆ ಎಂದು ಪ್ರಶ್ನೆ ಬಂದರೆ, ಮನುಷ್ಯರಲ್ಲಿನ ಭಾವವನ್ನನುಸರಿಸಿ ಆತ್ಮ ಹಾಗೆ ಮಾಡುತ್ತಿದೆಯೆಂದು ಹೇಳಬಹುದು.

ದೇವರ ಮೇಲೆ ಶ್ರದ್ಧೆ ಭಕ್ತಿಯಿರುವ ಮನುಷ್ಯರಿಗೆ ಆತ್ಮ ಅಸಲಾದ ಜ್ಞಾನವನ್ನು ತಿಳಿಸುತ್ತಿದೆ. ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ

22ನೇ ಶ್ಲೋಕದ ಪ್ರಕಾರ ಎಲ್ಲಾ ವಿಧಗಳ ಯೋಗಮಾರ್ಗದಲ್ಲಿ ಆತಂಕವಿಲ್ಲದೇ ಮಾಡುತ್ತಿದೆ.

**ಶ್ಲೋ॥ ಅನನ್ಯಾಶ್ಚಿನ್ತ ಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

**ಭಾವಾರ್ಥ :–** "ಇತರೆ ದೇವತೆಗಳ ಧ್ಯಾಸ ಇಲ್ಲದೆ ಯಾವಾಗಲೂ ಸೃಷ್ಠಿಕರ್ತನಾದ ಪರಮಾತ್ಮ ಮೇಲೆ ಭಕ್ತಿಯಿದ್ದು ಪುರುಷೋತ್ತಮನಾದ ದೇವರನ್ನೇ ಧ್ಯಾನಿಸುತ್ತಾ ಉಪಾಸಿಸುವವನ ಯೋಗವೊಂದರ ಕ್ಷೇಮವನ್ನು ನಾನೇ ವಹಿಸುತ್ತಿರ್ದ್ದೇನೆ."

ಈ ಶ್ಲೋಕದಲ್ಲಿನ ಭಾವವನ್ನು ಬಹಳಜನ ತಪ್ಪಾಗಿ ಅರ್ಥಮಾಡಿ ಕೊಂಡು, ಅನ್ಯಚಿಂತೆ ಇಲ್ಲದೇ ದೇವರ ಧ್ಯಾಸ ಹೊಂದಿದ ಅವನೊಂದರ ಕ್ಷೇಮವನ್ನೂ, ಯೋಗವನ್ನೂ ನಾನೇ ನೋಡಿಕೊಳ್ಳುತ್ತೇನೆಂದು ಹೇಳಿದಹಾಗೆ ಭಾವಿಸಿಕೊಂಡಿದ್ದಾರೆ. ಆದರೇ ಮನುಷ್ಯ ತನ್ನ ಭಕ್ತನಾದಷ್ಟು ಮಾತ್ರಕ್ಕೆ ಅವನ ಕ್ಷೇಮವನ್ನು ಮತ್ತು ಯೋಗವನ್ನು ದೇವರು ನೋಡಿಕೊಳ್ಳುತ್ತಾನೆಂದು ಅಂದುಕೊಳ್ಳುವುದು ಪೂರ್ತಿ ತಪ್ಪು. ಭಕ್ತನಾದ ಅವನ ಯೋಗವೊಂದರ ಕ್ಷೇಮವನ್ನು ನೋಡುತ್ತೇನೆಂದು ದೇವರು ಹೇಳಿದ್ದಾನಾಗಲೀ, ಅವನೊಂದರ ಕ್ಷೇಮವನ್ನು ನೋಡುತ್ತೇನೆಂದು ಎಲ್ಲೂ ಹೇಳಲಿಲ್ಲ. ತನ್ನನ್ನೇ ಆರಾಧಿಸುವ ಯೋಗಿವೊಂದರ ಯೋಗ ಆತಂಕವಿಲ್ಲದೆ ನೋಡುತ್ತೇನೆನ್ನುವ ಉದ್ದೇಶದಿಂದ ಯೋಗವೊಂದರ ಕ್ಷೇಮ ಅಂದಿದ್ದಾನಾಗಲೀ ಕ್ಷೇಮ, ಯೋಗ ಎಂದು ಬೇರ್ಪಡಿಸಿ ಹೇಳಲಿಲ್ಲ. ದೇವರ ಮೇಲೆ ಭಕ್ತಿ ಶ್ರದ್ಧೆಗಳಿರುವವನು ಆಚರಿಸುವ ಯೋಗಕ್ಕೆ ಆತಂಕವಾಗುವ ಯಾವುದನ್ನಾದರೂ ಆತ್ಮ ತೊಲಗಿಸುತ್ತದೆ. ಅಂತಹ ಪ್ರಯತ್ನದಲ್ಲಿ ಯೋಗಿ ಯೋಗಕ್ಕೆ ಆತಂಕವಾಗಿ ಆತನಿಗೆ ರೋಗಬಂದರೆ, ಆ ರೋಗವನ್ನು ಆತ್ಮೇ ಇಲ್ಲದಂತೆ ಮಾಡುತ್ತದೆ. ಒಂದು ವೇಳೆ ಮೊದಲೇ ದೀರ್ಘಕಾಲ ರೋಗದಿಂದಿರುವವನು ದೇವರ ಜ್ಞಾನವನ್ನು ತಿಳಿದು ಯೋಗ ಆಚರಿಸುವುದಕ್ಕೆ ಆರಂಭಿಸಿದಂತಾದರೆ, ನಿಜವಾದ ದೇವರ ಮೇಲೆ ಧ್ಯಾಸ ಹೊಂದಿ ಇದ್ದಂತಾದರೆ,

ಆತನಲ್ಲಿ ಮೊದಲು ಬಹಳ ಕಾಲದಿಂದಿರುವ ರೋಗವಾದರೂ ಇಲ್ಲದೇ ಹೋಗುತ್ತದೆ. ಕ್ಯಾನ್ಸರ್ ಅಥವಾ ಔಷಧಿ ಇಲ್ಲದ ಎಯಿಡ್ಸ್ ವ್ಯಾಧಿಗಳಾದರೂ ಔಷಧಿಗಳ ಪ್ರಮೇಯವಿಲ್ಲದೆ ಆತ್ಮ ಆಜ್ಞೆಯಿಂದ ಶರೀರದಿಂದ ಇಲ್ಲದೇ ಹೋಗುತ್ತವೆ. ಇಂತಹ ಅಸಂಭವವಾದ ಎಷ್ಟೋ ಕೆಲಸಗಳನ್ನು ಆತ್ಮ ಮಾಡುತ್ತಾ ದೇವರ ಜ್ಞಾನಕ್ಕೆ ಬೆಲೆಯನ್ನು ಕೊಡುತ್ತದೆ. ಈ ವಿಧವಾಗಿ ಜ್ಞಾನವೊಂದರ ಬೆಲೆಯನ್ನು ತೋರಿಸುತ್ತಾ ಮನುಷ್ಯನನ್ನು ದೇವರ ಕಡೆ ಆತ್ಮ ನಡೆಸುತ್ತಿದೆ.

ಹೀಗೆ ದೇವರ ಕಡೆ ಮನುಷ್ಯನನ್ನು ನಡೆಸುವ ಆತ್ಮ, ಅಸಲಾದ ದೇವರ ಮೇಲೆ ನಂಬಿಕೆ ಇಲ್ಲದೆ ದೇವರ್ಯಾರೋ ತಿಳಿಯದೆ, ಅನ್ಯದೇವತೆಗಳ ಮೇಲೆ ಧ್ಯಾಸವಿರುವ ಮನುಷ್ಯರನ್ನು ಅಜ್ಞಾನ ಮಾರ್ಗದ ಕಡೆ ನಡೆಸುವುದಕ್ಕೆ, ದೇವರ ಜ್ಞಾನ ತಿಳಿಯದ ಮನುಷ್ಯನಿಗೆ ಮಹತ್ವಗಳನ್ನು ಕಲ್ಪಿಸಿ, ಆತನಿಂದ ಪ್ರಜೆಗಳ ಕ್ಷೇಮಗಳಿಗು ಸುಖಗಳಿಗು ಬೇಕಾದ ಲಾಭಗಳು ಒದಗಿಸುತ್ತದೆ. ತಕ್ಕ ವಿಧವಾಗಿ ಒಬ್ಬ ಮನುಷ್ಯನನ್ನು ಮಹತ್ವಗಳಿರುವ ಮನುಷ್ಯನಾಗಿ ತೋರಿಸಿ, ಆತನೇ ದೇವರೆನ್ನುವಹಾಗೆ ಮಾಡಿಸಿ ಆತನ ಹಿಂದೇ ಆತನ ಧ್ಯಾಸದಲ್ಲೇ ಇದ್ದೂ, ಆತನಗಿಂತ ಮಿಗಿಲಾದ ದೇವರು ಇಲ್ಲೆನ್ನುವಹಾಗೆ ಆತ್ಮ ಮಾಡುತ್ತದೆ. ಮನುಷ್ಯನನ್ನು ಸ್ವಾಮೀಜೀಯಾಗಿ, ಬಾಬಾಗಳಾಗಿ ಅವತಾರವೆತ್ತಿಸಿ ಆತನಿಗೆ ತಿಳಿಯದೇ ಆತನ ಮಹತ್ವಗಳು ಎಲ್ಲರಿಗೂ ತಿಳಿಯುವಹಾಗೆ ಮಾಡಿ, ಆತನನ್ನು ಪ್ರಜೆಗಳಲ್ಲಿ ಮಹಿಮೆಗಳಿರುವವನಾಗಿ ಪ್ರಚಾರ ಮಾಡಿಸಿ, ಆತನನ್ನೇ ಅನುಸರಿಸು ವಂತೆ ಆತ್ಮ ಮಾಡುತ್ತದೆ. ಅಂತಹವರಿಗೆ ದೇವರ ಜ್ಞಾನ ರುಚಿಸುವುದಿಲ್ಲ. ಆದ್ದರಿಂದ ಅವರು ದೇವರ ಜ್ಞಾನವನ್ನು ಅನುಸರಿಸದೆ ಮಹಿಮೆಗಳಿರುವ ಮನುಷ್ಯನ ಹಿಂದೇ ಹೋಗುವರು. ಹೊರಗೆ ಕಾಣಿಸುವ ಮಹತ್ವಗಳು ಎರಡು ವಿಧಗಳಾದರೂ, ಒಂದು ದೇವರ ಜ್ಞಾನದಿಂದ ಇರುವ ಕರ್ಮ ಹೋಗುವುದು. ಎರಡನೆಯದು ಯಾವಮಾತ್ರ ಜ್ಞಾನವಿಲ್ಲದಿದ್ದರೂ, ಆತ್ಮ ಮನುಷ್ಯನಿಂದ ಮಹತ್ವವನ್ನು ತೋರಿಸಿ ಆತನಹಿಂದೆ ಹೋಗುವಂತೆ ಮಾಡುವುದೂ ಇದೆ. ದೇವರ ಜ್ಞಾನದಿಂದ ಕರ್ಮಗಳು ಸುಟ್ಟುಹೋಗುವುದು ಮಹತ್ವವಾದರೂ,

ಅದು ದೇವರ ಜ್ಞಾನವಿರುವವನಿಗೆ ಮಾತ್ರವೇ ನಡೆಯುತ್ತದೆ. ಜ್ಞಾನಮಾರ್ಗದಲ್ಲಿರುವವನಿಗೆ ಕರ್ಮಗಳು ಸುಟ್ಟುಹೋಗುವುದು ಜ್ಞಾನದಲ್ಲಿರುವ ಪದ್ಧತಿ. ಹಾಗೆ ನಡೆಯುವುದರಿಂದ ದೇವರು ಯೋಗವೊಂದರ ಕ್ಷೇಮವನ್ನು ನೋಡುವುದಕ್ಕೇ ತನ್ನ ಜ್ಞಾನದಿಂದ ಹಾಗೆ ಮಾಡಿಸಿದ್ದಾನೆಂದು ತಿಳಿಯುತ್ತಿದೆ. ಅದು ಜ್ಞಾನಮಾರ್ಗದಲ್ಲಿ ಇರುವವನಿಗೇ ನಡೆಯುತ್ತದೆ. ಆದ್ದರಿಂದ ಅದನ್ನು ಒಳ್ಳೆಯ ಪದ್ಧತಿಯಂತೆ ಗುರುತಿಸಬಹುದು. ಆದರೇ ಯಾವ ಜ್ಞಾನವಿಲ್ಲದ ಕಡೆ ಮಹತ್ವ ನಡೆಯುತ್ತಿದೆಯೆಂದರೆ, ಮನುಷ್ಯನನ್ನು ಮಾಯೆ ಮಾರ್ಗದಲ್ಲಿ ಕಳುಹಿಸುವುದಕ್ಕೆ ಆತ್ಮನೇ ಆ ವಿಧವಾಗಿ ಮಾಡುತ್ತಿದೆಯೆಂದೂ, ಅಷ್ಟೇ ಹೊರತು ಅದು ಜ್ಞಾನ ಮಾರ್ಗವಲ್ಲವೆಂದು ಅರ್ಥವಾಗುತ್ತಿದೆ.

ಅಸಲು ವಿಷಯಕ್ಕೆ ಬಂದರೆ ಗುಣ ಭಾವಗಳು ಸ್ತ್ರೀ ಪುರುಷರಲ್ಲಿ ಹೆಚ್ಚು ಕಡಿಮೆ ಪ್ರಭಾವಗಳು ಹೊಂದಿವೆಯೆಂದು ಹೇಳುವುದೇ ದೊಡ್ಡ ರಹಸ್ಯ. ಶರೀರದಲ್ಲಿ ರಹಸ್ಯವಾಗಿರುವುದನ್ನು ಕುರಿತು ಈಗ ವಿವರವಾಗಿ ತಿಳಿದುಕೊಳ್ಳೋಣ. ನಮ್ಮ ಶರೀರದಲ್ಲಿ ತಲೆಯಲ್ಲಿ ಇರುವ ಗುಣಚಕ್ರದಲ್ಲಿ ಮೂರು ಭಾಗಗಳು ಇವೆ. ಅದರಲ್ಲಿ ಪ್ರತಿ ಭಾಗದಲ್ಲಿಯೂ ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳು ಇವೆ. ಮೊದಲು ಕೆಟ್ಟ ಗುಣಗಳನ್ನು ಗಮನಿಸಿದರೆ ವರಸೆ ಕ್ರಮದಲ್ಲಿ ಹೀಗೆ ಇವೆ. ಒಂದು ಕಾಮ (ಆಸೆ), ಎರಡು ಕ್ರೋಧ (ಕೋಪ), ಮೂರು ಲೋಭ (ಜಿಪುಣತನ), ನಾಲ್ಕು ಮೋಹ (ನನ್ನದು ಎನ್ನುವುದು), ಐದು ಮದ (ಗರ್ವ), ಆರು ಮತ್ಸರ (ಅಸೂಯೆ). ಇವೆಲ್ಲವೂ ಕೆಟ್ಟ ಗುಣಗಳಾದಾಗ ಇವುಗಳಿಗೆ ವಿರುದ್ಧವಾಗಿ ಆರು ಒಳ್ಳೆಯ ಗುಣಗಳು ಸಹ ಹೀಗೆ ಇವೆ ನೋಡಿ. ಒಂದು ದಾನ, ಎರಡು ದಯೆ, ಮೂರು ಔದಾರ್ಯ, ನಾಲ್ಕು ವೈರಾಗ್ಯ, ಐದು ವಿನಯ, ಆರು ಪ್ರೇಮ ಇವೆಲ್ಲವೂ ಮೊದಲು ಹೇಳಿದ ಕೆಟ್ಟ ಗುಣಗಳಿಗೆ ವಿರುದ್ಧವಾಗಿ ತಯಾರಾದ ಒಳ್ಳೆಯ ಗುಣಗಳೆಂದು ಹೇಳಬಹುದು. ಮೊದಲು ಹೇಳಿದ ಕೆಟ್ಟ ಗುಣಗಳು ಬೆಸ ಸಂಖ್ಯೆಯಲ್ಲಿ ಮೂರು, ಸರಿ ಸಂಖ್ಯೆಯಲ್ಲಿ ಮೂರು ಇವೆ. ಹಾಗೇ ಒಳ್ಳೆಯ ಗುಣಗಳು ಬೆಸ ಸಂಖ್ಯೆಯಲ್ಲಿ ಮೂರು,

ಸರಿಸಂಖ್ಯೆಯಲ್ಲಿ ಮೂರು, ಕೆಟ್ಟ ಗುಣಗಳನ್ನು ಅನುಸರಿಸಿ ಅವುಗಳಿಗೆ ವಿರುದ್ಧವಾಗಿ ಇವೆ. ಮೊದಲು ಕೆಟ್ಟ ಗುಣಗಳನ್ನು ಸರಿ ಬೆಸವಾಗಿ ಬಿಡಿಸಿ ನೋಡುವುದಾದರೆ ಹೀಗೆ ಇವೆ. ಬೆಸ ಸಂಖ್ಯೆ ಆದ 1,3,5 ಗುಣಗಳು ಕಾಮ, ಲೋಭ, ಮದ ಎನ್ನುವ ಮೂರು ಗುಣಗಳು ಇವೆ. ನಂತರ ಸರಿಸಂಖ್ಯೆಯಲ್ಲಿರುವವುಗಳನ್ನು ಗಮನಿಸಿದರೆ ಹೀಗೆ ಇವೆ. 2,4,6 ಸಂಖ್ಯೆಗಳ ಗುಣಗಳು ವರಸೆಕ್ರಮದಲ್ಲಿ ಕ್ರೋಧ, ಮೋಹ, ಮತ್ಸರ ಎನ್ನುವವು ಇವೆ.

| | | | |
|---|---|---|---|
| **ಕೆಟ್ಟ** | 1) ಕಾಮ | 3) ಲೋಭ | 5) ಮದ |
| **ಗುಣಗಳು** | 2) ಕ್ರೋಧ | 4) ಮೋಹ | 6) ಮತ್ಸರ |

*****

| | | | |
|---|---|---|---|
| **ಒಳ್ಳೆಯ** | 1) ದಾನ | 3) ಔದಾರ್ಯ | 5) ವಿನಯ |
| **ಗುಣಗಳು** | 2) ದಯ | 4) ವೈರಾಗ್ಯ | 6) ಪ್ರೇಮ |

ಭೌತಿಕಶಾಸ್ತ್ರದ ಪ್ರಕಾರ ಬೆಸ ಕ್ರೋಮೋಜೋಮ್‌ಗಳಿಂದ ಗಂಡು ಶಿಶುವು, ಸರಿ ಕ್ರೋಮೋಜೋಮ್‌ಗಳಿಂದ ಹೆಣ್ಣು ಶಿಶುವು ತಯಾರಾಗುವುದೆಂದು ಹೇಳಿದಂತೆ, ಹಾಗೇ ಜ್ಯೋತಿಷ್ಯಶಾಸ್ತ್ರದ ಪ್ರಕಾರ ಶೇಷ ಬೆಸ ಸಂಖ್ಯೆ ಬಂದರೆ ಗಂಡು ಶಿಶುವು ಜನ್ಮಿಸುವುದೆಂದು, ಸರಿ ಸಂಖ್ಯೆ ಬಂದಂತಾದರೆ ಹೆಣ್ಣು ಶಿಶುವು ಜನ್ಮಿಸುವುದೆಂದು ಹೇಳಿದಹಾಗೆ, ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಬೆಸಸಂಖ್ಯೆಯಿರುವ ಗುಣಗಳ ಪ್ರಭಾವ ಪುರುಷರಿಗೆ ಹೆಚ್ಚಾಗಿ ಇರುವುದೆಂದೂ, ಹಾಗೇ ಸರಿ ಸಂಖ್ಯೆ ಗುಣಗಳ ಪ್ರಭಾವ ಸ್ತ್ರೀಯರಿಗೆ ಹೆಚ್ಚಾಗಿ ಇರುವುದೆಂದು ಹೇಳಬಹುದು. ಈ ಲೆಕ್ಕ ಪ್ರಕಾರ ಪುರುಷರಿಗೆ ಮೂರು ಕೆಟ್ಟ ಗುಣಗಳು, ಮೂರು ಒಳ್ಳೆಯ ಗುಣಗಳ ಪ್ರಭಾವಗಳು ಇವೆಯೆಂದು, ಹಾಗೇ ಸ್ತ್ರೀಯರಿಗೂ ಮೂರು ಕೆಟ್ಟ ಗುಣಗಳು, ಮೂರು ಒಳ್ಳೆಯ ಗುಣಗಳ ಪ್ರಭಾವ ಇದೆಯೆಂದು ಹೇಳುತ್ತಿದ್ದೇವೆ. ಅವುಗಳನ್ನು ಕೆಳಗೆ ಗಮನಿಸಿದರೆ ಹೀಗೆ ಇವೆ.

**ಪುರುಷರಿಗೆ ಹೆಚ್ಚಿನ ಪ್ರಭಾವವಿರುವ ಕೆಟ್ಟ ಒಳ್ಳೆಯ ಗುಣಗಳು**

1) ಕಾಮ 3) ಲೋಭ 5)ಮದ

1) ದಾನ 3) ಔದಾರ್ಯ 5) ವಿನಯ

**ಸ್ತ್ರೀಯರಿಗೆ ಹೆಚ್ಚಿನ ಪ್ರಭಾವವಿರುವ ಕೆಟ್ಟ ಒಳ್ಳೆಯ ಗುಣಗಳು**

2) ಕ್ರೋಧ 4) ಮೋಹ 6) ಮತ್ಸರ

2) ದಯ 4) ವೈರಾಗ್ಯ 6) ಪ್ರೇಮ

ಸ್ತ್ರೀ ಪುರುಷರಿಬ್ಬರಲ್ಲಿ ಒಳ್ಳೆಯ ಕೆಟ್ಟ ಎನ್ನುವ ಹನ್ನೆರಡು ಗುಣಗಳು ಸಹಜವಾಗಿ ಇದ್ದರೂ, ಅವುಗಳಲ್ಲಿ ಸರಿ ಸಂಖ್ಯೆಯಾಗಿರುವ ಮೂರು ಒಳ್ಳೆಯ ಗುಣಗಳು, ಮೂರು ಕೆಟ್ಟ ಗುಣಗಳು ಹೆಚ್ಚಿನ ಪ್ರಮಾಣದಲ್ಲಿ ಸ್ತ್ರೀಯರಲ್ಲಿ ಕೆಲಸಮಾಡುತ್ತಿರುವಾಗ, ಬೆಸ ಸಂಖ್ಯೆಯಾಗಿರುವ ಒಳ್ಳೆಯ ಕೆಟ್ಟ ಆರು ಗುಣಗಳು ಪುರುಷರಲ್ಲಿ ಹೆಚ್ಚಿನ ಕೆಲಸ ಮಾಡುವುದೆಂದು ತಿಳಿದುಹೋಗಿದೆ. ಸ್ತ್ರೀಯರಲ್ಲಿ ಅಸೂಯೆ ಗುಣ ಹೆಚ್ಚಾಗಿ ಇರುವುದೆಂದು ಬಹಳ ಜನರಿಗೆ ಅನುಭವಪೂರ್ವಕವಾಗಿ ತಿಳಿದಿದೆ. ಹಾಗೇ ಮೋಹ ಗುಣವೂ ಸಹ ಪುರುಷರಿಗಿಂತ ಹೆಚ್ಚಾಗಿರುವುದು. ನನ್ನವರು, ನನ್ನದು ಎನ್ನುವ ಭಾವ ಹೆಚ್ಚಾಗಿ ಹೆಂಗಸರಲ್ಲಿ ಕಾಣಿಸುತ್ತದೆ. ತವರು ಮನೆಯವರ ಮೇಲೆ ತೋರಿಸುವ ಮೋಹಭಾವ, ಗಂಡನಮನೆಯವರ ಮೇಲೆ ಇರುವುದಿಲ್ಲ. ನನ್ನದು ಎನ್ನುವ ಮೋಹ ಭಾವ ಸ್ತ್ರೀಯರಲ್ಲೇ ಹೆಚ್ಚಾಗಿ ಇದೆಯೆಂದು ತಿಳಿಯುತ್ತಿದೆ. ಹಾಗೇ ಕೋಪ ಗಂಡಸರಿಗಿಂತ ಹೆಂಗಸರಲ್ಲೇ ಹೆಚ್ಚಾಗಿದೆಯೆಂದು ತಿಳಿಯುತ್ತಿದೆ. ಆದ್ದರಿಂದ ಕೆಲವರು ಕವಿಗಳು ತಮ್ಮ ಬರವಣಿಗೆಯಲ್ಲಿ ಬಾಲ ತುಳಿದ ನಾಗರಹಾವು ಬುಸ್ಸೆಂದು ಎದ್ದಹಾಗೆ ಹೆಂಗಸರಲ್ಲಿ ಕೋಪವಿರುತ್ತದೆಂದು ವರ್ಣಿಸಿದ್ದಾರೆ. ಕೋಪ, ಮೋಹ, ಅಸೂಯೆ ಎನ್ನುವ ಮೂರು ಗುಣಗಳು ಪಾಪವನ್ನು ತಂದಿಡುತ್ತದೆ. ಆದ್ದರಿಂದ ಆ ಮೂರು ಗುಣಗಳನ್ನು ಕೆಟ್ಟ ಗುಣಗಳೆನ್ನುತ್ತಿದ್ದೇವೆ. ಸ್ತ್ರೀಯರಲ್ಲಿ ಮೂರು ಕೆಟ್ಟ

ಗುಣಗಳ ಪ್ರಭಾವವೇ ಅಲ್ಲದೆ ಮೂರು ಒಳ್ಳೆಯ ಗುಣಗಳ ಪ್ರಭಾವವೂ ಸಹ ಇದೆ. ಪುರುಷರಿಗಿಂತ ಸ್ತ್ರೀಯರಲ್ಲಿ ದಯಾ ಗುಣ ಹೆಚ್ಚಾಗಿರುತ್ತದೆ. ಹಾಗೆ ಪ್ರೇಮ ಗುಣವೂ ಸಹ ಹೆಚ್ಚಾಗಿರುತ್ತದೆ. ಹಾಗೇ ಮೋಹಗುಣಕ್ಕೆ ವಿರುದ್ಧವಾದ ವೈರಾಗ್ಯ ಗುಣ ಕೂಡಾ ಸ್ತ್ರೀಯರಲ್ಲಿ ಹೆಚ್ಚಾಗಿರುತ್ತದೆ. ಸ್ತ್ರೀಯರಿಗೆ ಪುರುಷರಿಗಿಂತ ಕೋಪ, ಅಸೂಯೆ, ಮೋಹ ಹೆಚ್ಚಾಗಿದ್ದರೂ, ಅವುಗಳಿಗೆ ಪೂರ್ತಿ ವಿರುದ್ಧವಾದ ದಯೆ, ಪ್ರೇಮ, ವೈರಾಗ್ಯ ಕೂಡಾ ಹೆಚ್ಚಾಗಿಯೇ ಇವೆಯೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ.

ಅದೇ ವಿಧವಾಗಿ ಪುರುಷರಲ್ಲಿ ಕಾಮ, ಲೋಭ, ಮದ ಅನ್ನುವ ಮೂರು ಗುಣಗಳು ಹೆಚ್ಚಾಗಿ ಇರುತ್ತವೆ. ಹಾಗೇ ಆ ಮೂರು ಗುಣಗಳಿಗು ವಿರುದ್ಧ ಗುಣಗಳಾದ ದಾನ, ಔದಾರ್ಯ, ವಿನಯ ಅನ್ನುವ ಒಳ್ಳೆಯ ಗುಣಗಳು ಸಹ ಇರುತ್ತವೆ. ಮಾನವಜಾತಿಯಲ್ಲಿ ಒಂದೊಂದು ಗುಣಭಾಗದಲ್ಲಿ ಹನ್ನೆರಡು ಗುಣಗಳಿರುವಾಗ ಅವುಗಳಲ್ಲಿ ಆರು ಸ್ತ್ರೀಯರಲ್ಲಿ ಹೆಚ್ಚು ಪ್ರಭಾವ ತೋರಿಸುವವುಗಳಾಗಿ ಇರುವಾಗ, ಉಳಿದ ಆರು ಪುರುಷರಲ್ಲಿ ಹೆಚ್ಚಿನ ಪ್ರಭಾವವನ್ನು ತೋರಿಸುತ್ತಿವೆ. ಈ ದಿನ ಬಹಳ ಜನರಿಗೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆನ್ನುವ ಆರು ಗುಣಗಳೇ ತಿಳಿದಿವೆ. ಉಳಿದ ಆರು ಒಳ್ಳೆ ಗುಣಗಳ ವಿಷಯ ತಿಳಿಯದೆಂದೇ ಹೇಳಬಹುದು. ಇಲ್ಲಿ ಆರು ಕೆಟ್ಟ ಗುಣಗಳನ್ನು ಹೇಳುವುದೇ ಅಲ್ಲದೆ, ಅವುಗಳಿಗೆ ಪೂರ್ತಿ ವಿರುದ್ಧವಾಗಿರುವ ಆರು ಒಳ್ಳೆಯ ಗುಣಗಳನ್ನು ಸಹ ಹೇಳುವುದು ನಡೆದಿದೆ. ಮನುಷ್ಯನಲ್ಲಿರುವ ಗುಣಗಳೇ ಮಾಯೆ ಎಂದು ಹೇಳಲಾಗುತ್ತಿದೆಯೆಂದು ಭಗವದ್ಗೀತೆಯಲ್ಲಿ ತಿಳಿಸುತ್ತಾ ವಿಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ 14ನೇ ಶ್ಲೋಕದಲ್ಲಿ *"ಗುಣಮಯೀ ಮಮ ಮಾಯಾ ದುರತ್ಯಯಾ"* ಎಂದು ಹೇಳುವುದು ನಡೆದಿದೆ. ಮಾಯೆ ಅನ್ನುವ ಗುಣಗಳನ್ನು ಜಯಿಸುವುದು ದುಸ್ಸಾಧ್ಯವಾದ ಕೆಲಸ ಎಂದು ಇದರ ಭಾವ. ಮಾಯೆ ಎನ್ನುವ ಗುಣಗಳಿಂದಲೇ ಪಾಪಪುಣ್ಯವೆನ್ನುವ ಕರ್ಮವನ್ನು ಮನುಷ್ಯ ಸಂಪಾದಿಸಿಕೊಂಡು, ಕರ್ಮ

ಕಾರಣದಿಂದ ಜನ್ಮಿಸುತ್ತಾ ಬರುವುದು ನಡೆಯುತ್ತಿದೆ. ಜನ್ಮ ರಾಹಿತ್ಯ ಮಾಡಿಕೊಂಡು ಮೋಕ್ಷವನ್ನು ಹೊಂದಬೇಕೆಂದರೆ ಗುಣಗಳ ವಿಷಯ ಪೂರ್ತಿ ವಿವರವಾಗಿ ತಿಳಿಯಬೇಕಾಗಿದೆ. ಆದ್ದರಿಂದ ಮನುಷ್ಯರಿಗಿರುವ ಹನ್ನೆರಡು ಗುಣಗಳನ್ನು ತಿಳಿಸುತ್ತಾ, ಅವುಗಳಲ್ಲಿ ಸ್ತ್ರೀ ಪುರುಷರಲ್ಲಿ ಹೆಚ್ಚು ಕಡಿಮೆ ಪ್ರಭಾವ ತೋರಿಸುವವುಗಳನ್ನು ಸಹ ಬಿಡಿಸಿ ಹೇಳುವುದು ನಡೆದಿದೆ. ಗುಣಗಳ ರಹಸ್ಯವೆಲ್ಲವೂ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ದೇವರ ಮಾರುವೇಷವಾದ ಕೃಷ್ಣ ಭಗವಾನನು ಹೇಳುವುದು ನಡೆದಿದೆ. ಮೊದಲಿನಿಂದ ಸರ್ವ ಮಾನವರಿಗೂ ಸಂಬಂಧಿಸಿದ ಜ್ಞಾನ ಭಗವದ್ಗೀತೆಯಲ್ಲಿ ಇರುವುದರಿಂದ ಭಗವದ್ಗೀತೆ ಪ್ರತಿ ಮನುಷ್ಯನಿಗೂ ಅವಶ್ಯವಾದ ಗ್ರಂಥ. ಒಂದು ಹಿಂದೂ ಸಮಾಜಕ್ಕೇ ಭಗವದ್ಗೀತೆ ಎಂದು ಉಳಿದ ಮತಗಳವರು ಅಂದುಕೊಳ್ಳಬಾರದು. ಸರ್ವಮಾನವರಿಗೂ ಸಂಬಂಧಿಸಿದ ಜ್ಞಾನ ಗೀತೆಯಲ್ಲಿ ಇರುವುದರಿಂದ, ಗೀತೆಯಲ್ಲಿನ ಜ್ಞಾನ ಸೂತ್ರಗಳೇ ಉಳಿದ ಬೈಬಿಲ್, ಖುರ್‌ಆನ್ ಗ್ರಂಥಗಳಲ್ಲಿ ಇರುವುದರಿಂದ ಎಲ್ಲಾ ಮತಗಳವರಿಗೂ ಭಗವದ್ಗೀತೆ ಅವಶ್ಯವೆಂದು, ಗೀತೆ ಎಲ್ಲದಕ್ಕೂ ಮೂಲ ಗ್ರಂಥವಾದ ಪ್ರಥಮ ದೈವ ಗ್ರಂಥವೆಂದೂ ತಿಳಿಯಬೇಕು.

ಹೆಂಗಸರಲ್ಲಿ ಸರಿಗುಣಗಳೂ, ಗಂಡಸರಲ್ಲಿ ಬೆಸ ಗುಣಗಳು ಹೆಚ್ಚಾಗಿ ಕೆಲಸ ಮಾಡುವುದರಿಂದ ಅವರಲ್ಲಿ ಹೀಗಿದೆಯೆಂದು ಸಮಾಜಕ್ಕೆ ತಿಳಿಸುವ ನಿಮಿತ್ತ ಸ್ತ್ರೀ ಪುರುಷರಲ್ಲಿ ಒಂದು ಆಚರಣೆ ಯೋಗ್ಯವಾದ ನಿಯಮವನ್ನು ಪೂರ್ವದ ಹಿರಿಯರು ಏರ್ಪಡಿಸಿದ್ದಾರೆ. ಇಂದೂ ಸಮಾಜ ಎಂದರೆ ಜ್ಞಾನ ಸಮಾಜವೆಂದು ಅರ್ಥವಲ್ಲವೆ! ಪೂರ್ವ ಹಿರಿಯರೆಲ್ಲರೂ ಜ್ಞಾನಿಗಳೇ ಆಗಿರುವುದರಿಂದ ಮುಂಬರುವ ಕಾಲದಲ್ಲಿನ ಚಿಕ್ಕವರೆಲ್ಲರೂ ಸ್ತ್ರೀ, ಪುರುಷರಲ್ಲಿನ ಗುಣಗಳ ಪ್ರಭಾವಗಳು ತಿಳಿದುಕೊಳ್ಳುವಹಾಗೆ ಹೊರಗಡೆ ಗುರುತಿಗಾಗಿ ಸ್ತ್ರೀಯನ್ನು ಪುರುಷನಿಗೆ ಎಡಗಡೆಗೆ ನಿಲ್ಲಿಸುತ್ತಿದ್ದರು. ಇಂದೂ ಸಮಾಜದಲ್ಲಿ ಈ ದಿನಕ್ಕೂ ಮದುವೆಯಲ್ಲಾಗಲೀ, ಹಬ್ಬಗಳಲ್ಲಾಗಲೀ ಗಂಡ ಹೆಂಡತಿ ಇಬ್ಬರೂ ಒಂದು ಕಡೆ ನಿಂತಿರುವಾಗ, ಹೆಂಡತಿ ಗಂಡನಿಗೆ ಎಡಗಡೆ ನಿಲ್ಲುವಹಾಗೆ ಮಾಡಿದ್ದಾರೆ.

ಹಾಗೆ ಮಾಡುವುದರಿಂದ ಏನೋ ಅರ್ಥವಿದೆಯೆಂದು ಅದನ್ನು ಕುರಿತು ಕೇಳುವುದಕ್ಕೆ ಅವಕಾಶವಿರುತ್ತದೆಂದು ಹಿರಿಯರು ಹಾಗೆ ಮಾಡಿದ್ದಾರೆ. ಇತರ ಮತಗಳಲ್ಲಿ ಈ ಜ್ಞಾನ ತಿಳಿಯದು, ಈ ಆಚರಣೆ ಇಲ್ಲ. ಇಂಥದ್ದೇ ಪೂರ್ವ ವೈದ್ಯರು ಕೈ ಹತ್ತಿರ ನಾಡಿಯನ್ನು ಪರೀಕ್ಷಿಸುವಾಗ ಪುರುಷರಿಗೆ ಬಲಗೈ ನಾಡಿಯನ್ನು, ಸ್ತ್ರೀಯರಿಗೆ ಎಡಗೈ ನಾಡಿಯನ್ನು ಪರೀಕ್ಷಿಸಿ ನೋಡುತ್ತಿದ್ದರು. ಈ ವಿಧವಾಗಿ ವೈದ್ಯವಿಧಾನದಲ್ಲಿ ಸಹ ಹೆಂಗಸರಿಗೆ ಎಡಗಡೆಗೇ ನಾಡಿ ನೋಡುವುದರಲ್ಲಿಯೂ ಸಹ ಒಳಗಿನ ಗುಣಗಳನ್ನನುಸರಿಸಿಯೇ ಎಂದು ತಿಳಿಯುತ್ತಿದೆ. ಈ ದಿನ ಬಹಳ ಜನರಿಗೆ ನಾಡಿ ನೋಡುವುದರಲ್ಲಿ ಸ್ತ್ರೀಯರಿಗೂ ಎಡಗಡೆಯೇ ಏಕೆ ನೋಡಬೇಕು ಎನ್ನುವ ವಿಷಯ ತಿಳಿಯದು. ಪೂರ್ವದಲ್ಲಿ ಗುಣಗಳ ಪ್ರಭಾವಗಳು ಸ್ತ್ರೀಯರಲ್ಲಿ ಪುರುಷರಲ್ಲಿ ಹೆಚ್ಚು ಕಡಿಮೆಯಾಗಿವೆಯೆಂದು ತಿಳಿದ ಜ್ಞಾನಿಗಳು ಆ ವಿಷಯಗಳನ್ನು ಹೊರಗೆ ತಿಳಿಸುವ ನಿಮಿತ್ತ ಹಾಗೆ ಮಾಡುವ ಆಚರಣೆ ಇಟ್ಟಿದ್ದಾರೆ.

ಈ ದಿನ ಸಮಾಜದಲ್ಲಿ ಹಿಂದೂಗಳೆಲ್ಲರೂ ಕೈ ಬರವಣಿಗೆ ಬರೆಯುವಾಗ ಬಲಗಡೆ ಪ್ರಾರಂಭಮಾಡಿ ಎಡಕಡೆಗೆ ಬರೆಯುವುದು ಸಹಜವಾಗಿರುವ ಕೆಲಸ. ಗುಣಗಳ ವಿಷಯಕ್ಕೆ ಬಂದರೆ ಗುಣಗಳನ್ನು ವರಸೆ ಕ್ರಮದಲ್ಲಿ ಬರೆಯುವುದು ನಡೆಯುತ್ತಿದೆ. ಹಾಗೆ ಬರೆದುಕೊಂಡಾಗ ಮೊದಲು ಕಾಮವೆನ್ನುವ ಗುಣದಿಂದ ಪ್ರಾರಂಭಮಾಡಿ ಮತ್ಸರವರೆಗು ಕೆಟ್ಟ ಗುಣಗಳನ್ನು ಬರೆಯುತ್ತೇವೆ. ನಂತರ ಒಳ್ಳೆಯ ಗುಣಗಳನ್ನು ಬರೆಯುತ್ತಾ ದಾನದಿಂದ ಪ್ರಾರಂಭಮಾಡಿ ಪ್ರೇಮದ ವರೆಗು ಬರೆಯುವುದು ನಡೆಯುತ್ತಿದೆ. ಹಾಗೆ ಬರೆದಾಗ ಪ್ರತಿ ಬೆಸ ಗುಣಕ್ಕೂ ಎಡಗಡೆ ಸರಿ ಸಂಖ್ಯೆ ಗುಣ ಬರುತ್ತದೆ. ತಲೆಯಲ್ಲಿ ಗುಣಗಳ ವರಸೆಯಲ್ಲಿ ಬೆಸಕ್ಕೆ ಎಡಗಡೆಗೆ ಇರುವ ಸರಿ ಗುಣಗಳೇ ಸ್ತ್ರೀಯರಲ್ಲಿ ಹೆಚ್ಚಿನ ಪ್ರಭಾವ ತೋರಿಸುತ್ತಿವೆಯೆಂದು ತಿಳಿಯುವುದಕ್ಕೆ ಹಾಗೆ ಸರಿಸಂಖ್ಯೆ ಬೆಸಕ್ಕೆ ಎಡಗಡೆಗೆ ಬರವಣಿಗೆಯಲ್ಲಿ ಹೊಂದುವಂತಿದೆಯೆಂದು ತಿಳಿಯಬೇಕು. ಈ ವಿಧಾನ ಅರ್ಥವಾಗುವುದಕ್ಕೆ ಕೆಳಗೆ ನೋಡಿರಿ.

| 1 | 2 | 3 | 4 | 5 | 6 |
|---|---|---|---|---|---|
| **ಕಾಮ** | **ಕ್ರೋಧ** | **ಲೋಭ** | **ಮೋಹ** | **ಮದ** | **ಮತ್ಸರ** |
| ಬಲ ಎಡ | ಬಲ ಎಡ | ಬಲ ಎಡ | ಬಲ ಎಡ | ಬಲ ಎಡ | ಬಲ ಎಡ |
| **ಪುರುಷ** | **ಸ್ತ್ರೀ** | **ಪುರುಷ** | **ಸ್ತ್ರೀ** | **ಪುರುಷ** | **ಸ್ತ್ರೀ** |

*****

| 1 | 2 | 3 | 4 | 5 | 6 |
|---|---|---|---|---|---|
| **ದಾನ** | **ದಯ** | **ಔದಾರ್ಯ** | **ವೈರಾಗ್ಯ** | **ವಿನಯ** | **ಪ್ರೇಮ** |
| ಬಲ ಎಡ | ಬಲ ಎಡ | ಬಲ ಎಡ | ಬಲ ಎಡ | ಬಲ ಎಡ | ಬಲ ಎಡ |
| **ಪುರುಷ** | **ಸ್ತ್ರೀ** | **ಪುರುಷ** | **ಸ್ತ್ರೀ** | **ಪುರುಷ** | **ಸ್ತ್ರೀ** |

ನಮ್ಮ ತಲೆಯಲ್ಲಿರುವ ಗುಣ ಪ್ರಭಾವಗಳು ಸ್ತ್ರೀ ಪುರುಷರಲ್ಲಿ ಬೇರೆ ಬೇರೆಯಾಗಿ ಇವೆಯೆಂದು ತಿಳಿಯುವುದಕ್ಕೆ ಮಲಗುವಾಗಾಗಲಿ, ಹಬ್ಬಗಳಲ್ಲಾಗಲೀ, ಮದುವೆಯಲ್ಲಾಗಲೀ ಸ್ತ್ರೀಯನ್ನು ಪುರುಷನಿಗೆ ಎಡಗಡೆ ಇರಿಸುವುದು ನಡೆಯುತ್ತಿದೆಯೆಂದು ತಿಳಿಯಬೇಕು.

ಈ ವಿಧಾನವೆಲ್ಲವೂ ಶಾಸ್ತ್ರಬದ್ಧವಾದದ್ದು. ಭಾತಿಕ ಶಾಸ್ತ್ರವನ್ನು, ಜ್ಯೋತಿಷ್ಯಶಾಸ್ತ್ರವನ್ನು, ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಹೇಳಿದ ವಿಧಾನವೆಂದು ತಿಳಿಯಬೇಕು. ಈ ವಿಷಯವೆಲ್ಲವೂ ಯಾರೂ ಇಲ್ಲಿಯವರೆಗು ಎಲ್ಲಿಯೂ ಹೇಳಲಿಲ್ಲ. ಅಂತಹ ರಹಸ್ಯ ವಿಷಯವನ್ನು ಆತ್ಮ ತಿಳಿಸಿದಾಗ ಇಲ್ಲಿ ಬರೆಯುವುದು ನಡೆದಿದೆ. ಯಾರೋ ಸ್ವಾಮೀಜೀಗಳು ಹೇಳಿದ್ದಾರೆಂದಾಗಲೀ, ಯಾರೋ ಗುರುವು ಹೇಳಿದ್ದಾರೆಂದಾಗಲೀ ಈ ವಿಷಯವನ್ನು ಹೇಳಲಿಲ್ಲ. ನೇರವಾಗಿ ಆತ್ಮವೇ ಹೇಳಿದೆಯೆಂದು ಹೇಳುತ್ತಿದ್ದೇವೆ. ಯಾರಿಗೂ ತಿಳಿಯದ ಆತ್ಮ, ಯಾರಿಗೂ

ಹೇಳದ ಆತ್ಮ ನಿನಗೊಬ್ಬನಿಗೇ ಹೇಳಿದೆಯಾ ಎಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ಉತ್ತರವೇನೆಂದರೆ! ಆತ್ಮ ಎನ್ನುವುದು ಇಲ್ಲಿಯವರೆಗು ಯಾರಿಗೂ ತಿಳಿಯದಿದ್ದರೂ ಸೃಷ್ಠಿ ಆದಿಯಲ್ಲೇ ದೇವರು ಆತ್ಮವನ್ನು ಕುರಿತು ಶಬ್ದರೂಪದಲ್ಲಿ ಬಂದಿರುವ ತನ್ನ ಜ್ಞಾನದಲ್ಲಿ ತಿಳಿಸಿದ್ದಾನೆ. ಆತ್ಮ ನಿನಗೊಬ್ಬನಿಗೇ ಹೇಳಿದೆಯಾ ಎನ್ನುವ ಪ್ರಶ್ನೆಗೆ ಹೇಳುವುದೇನೆಂದರೆ, ಆತ್ಮವನ್ನು ಕೇಳಿದರೆ ಯಾರಿಗಾದರೂ ಉತ್ತರ ಹೇಳಬಲ್ಲದು. ಕೇಳುವವನಿಗೆ ಎಲ್ಲಾ ಆತ್ಮ ಹೇಳುವ ವಿಷಯಗಳೇ ಇವೆಯೆಂದು ತಿಳಿಯುತ್ತದೆ. ಪ್ರತಿಯೊಂದನ್ನು ಆತ್ಮೇ ತಿಳಿಸುತ್ತಿದೆಯೆನ್ನುವುದಕ್ಕೆ ನಿರೂಪಣೆಯಾಗಿ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 15ನೇ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ ನೋಡಿರಿ.

**ಶ್ಲೋ॥ ಸರ್ವಸ್ಯ ಚಾಹಂ ಹೃದಿ ಸನ್ನಿ ವಿಷ್ಟೋ ಮತ್ತಃ ಸ್ಮೃತಿರ್ಜ್ಞಾನ ಮಪೋಹನಂಚ।**
**ವೇದೈಶ್ಚ ಸರ್ವೈರಹ ಮೇವ ವೇದ್ಯೋ ವೇದಾನ್ತಕೃ ದ್ವೇದವಿ ದೇವಚಾಹಮ್ ॥**

**ಭಾವಾರ್ಥ:–** "ನಾನು ಸರ್ವ ಜೀವರಾಶಿಗಳ ಹೃದಯ ಪೀಠವಾದ ತಲೆಯಲ್ಲಿದ್ದೇನೆ. ನನ್ನಿಂದಲೇ ಸರ್ವ ಜೀವರಾಶಿಗಳಿಗು ಸ್ಮೃತಿ, ಜ್ಞಾನ, ಊಹೆ ಉಂಟಾಗುತ್ತಿವೆ! ಈ ಶ್ಲೋಕದಲ್ಲಿ ಮೊದಲನೆಯ ಚರಣದಲ್ಲಿಯೇ ನಾನು ಎಲ್ಲರ ತಲೆಯಲ್ಲಿ ಇದ್ದೇನೆಂದು, ಎಲ್ಲರಿಗೂ ನಾನೇ ಸ್ಮೃತಿ, ಜ್ಞಾನ, ಊಹೆ ಬರುವಂತೆ ಮಾಡುತ್ತಿದ್ದೇನೆಂದು ಆತ್ಮ ತಿಳಿಸಿದೆ. ಅದೇ ವಿಧವಾಗಿ ಎಲ್ಲರನ್ನು ಆಜ್ಞಾಪಿಸುತ್ತಾ, ಬೋಧಿಸುತ್ತಾ, ನಡೆಸುತ್ತಾ, ಮಾತನಾಡಿಸುತ್ತಾ ಎಲ್ಲವನ್ನು ಮಾಡುತ್ತಿದೆ. ಇದೇ ವಿಷಯವನ್ನೇ ಹೇಳುತ್ತಾ ಅಂತಿಮ ದೈವ ಗ್ರಂಥವೆಂದು ಹೆಸರುಹೊಂದಿದ ಖುರ್‌ಆನ್ ಗ್ರಂಥದಲ್ಲಿ 50ನೇ ಸುರಾದಲ್ಲಿ 21ನೇ ಆಯತ್‌ನಲ್ಲಿ "ಪ್ರತಿ ಜೀವಿ ಒಬ್ಬ ಓಡಿಸುವ ಆತ್ಮನೊಂದಿಗೂ, ಸಾಕ್ಷಿಯಾಗಿರುವ ಪರಮಾತ್ಮ ನೊಂದಿಗೂ" ಇದ್ದಾನೆಂದು ಹೇಳಲಾಗಿದೆ. ಎಲ್ಲ ವಿಧಗಳ ಒಬ್ಬ ಮನುಷ್ಯನನ್ನು ನಡೆಸುತ್ತಿರುವ ಆತ್ಮನನ್ನು ಓಡಿಸುವವನನ್ನಾಗಿ ಹೇಳುವುದು ನಡೆದಿದೆ. ಈ ವಿಧವಾಗಿ ಪ್ರಥಮ ದೈವ ಗ್ರಂಥ ಭಗವದ್ಗೀತೆಯಾಗಲಿ, ಮಧ್ಯೆ ದೈವ ಗ್ರಂಥ

ಬೈಬಿಲ್ ಆಗಲಿ, ಅಂತಿಮ ದೈವ ಗ್ರಂಥ ಖುರ್‍ಆನ್ ಗ್ರಂಥವಾಗಲಿ ಆತ್ಮನನ್ನು ಕುರಿತು ಹೇಳುತ್ತಿವೆ. ಆತ್ಮ ಎಲ್ಲ ವಿಧಗಳ ಎಲ್ಲ ಜೀವರಾಶಿಗಳನ್ನು ನಡೆಸುತ್ತಿದೆಯೆಂದು ಮೂರು ದೈವ ಗ್ರಂಥಗಳಲ್ಲಿಯೂ ಇರುವಾಗ, ನೀವು ತಿಳಿದುಕೊಳ್ಳುವುದಾದರೆ ಆತ್ಮ ನಿಮಗೆ ಸಮಾಧಾನ ಕೊಡಬಲ್ಲದು. ಇಲ್ಲಿಯವರೆಗು ನಿನ್ನನ್ನು ನನ್ನನ್ನು ಎಲ್ಲರನ್ನೂ ನಡೆಸುವ ಆತ್ಮ ಒಂದಿದೆಯೆಂದು ಹಿಂದೂಗಳಿಗೇ ತಿಳಿಯದಿರುವುದರಿಂದ, ಇತರ ಮತಸ್ಥರ ದೃಷ್ಠಿ ದೇವರ ಮೇಲೆ ಹೊರತು, ದೇವರು ಹೇಳಿದ ಆತ್ಮದ ಮೇಲೆ ಇಲ್ಲವಾದ್ದರಿಂದ ಆತ್ಮ ಯಾರಿಗೂ ತಿಳಿಯದಂತೆ ಹೋಗಿದೆ. ಎಲ್ಲರೂ ಆತ್ಮ ಮಾಡುವ ಕೆಲಸಗಳೆಲ್ಲವನ್ನೂ ನಾವೇ ಮಾಡುತ್ತಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಆದ್ದರಿಂದ ನಾವು ಆತ್ಮ ವಿಷಯವನ್ನು ಕುರಿತು ಹೇಳಿದರೆ ಎಲ್ಲರಿಗೂ ಹೊಸದಾಗಿ ಇರುವುದರಿಂದ ಆತ್ಮ ನಿನಗೊಬ್ಬನಿಗೇ ಹೇಳಿದೆಯಾ ಎಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವೇರ್ಪಟ್ಟಿದೆ. ಪ್ರತಿ ಕ್ಷಣ ಆತ್ಮ ಹೇಳುವುದೇ ಅಲ್ಲದೆ, ಎಲ್ಲರನ್ನೂ ಆತ್ಮೇವೇ ನಡೆಸುತ್ತಿದೆಯೆಂದು ಮರೆಯಬಾರದು.

ಸೃಷ್ಠ್ಯಾದಿಯಲ್ಲಿ ದೇವರು ಕಳಿಸಿರುವ ವಾಣಿ (ಶಬ್ಧ) ಯಲ್ಲಿ ಜಗತ್ತಿಗೆ ಸರಿಹೋಗುವ ಜ್ಞಾನವನ್ನು, ಜೀವರಾಶಿಗಳಿಗೆ ಮತ್ತೆ ಮತ್ತೆ ಹೇಳದೆ ಒಂದೇಬಾರಿ ಸಂಪೂರ್ಣವಾದ ಜ್ಞಾನವನ್ನು ತಿಳಿಸಿದ್ದಾನೆ. ಅದರಲ್ಲಿ ಪ್ರಕೃತಿ ವಿಷಯ ಒಂದು ಭಾಗವಾದಾಗ, ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳ ವಿಷಯ ಒಂದು ಭಾಗವಾಗಿ ತಿಳಿಸುವುದು ನಡೆದಿದೆ. ಸೃಷ್ಠಿ ಯಾವಾಗ ಹುಟ್ಟಿದೆಯೋ ಖಚಿತವಾಗಿ ಯಾರಿಗೂ ತಿಳಿಯದು. ಹಾಗೇ ಸೃಷ್ಠಿ ಆದಿಯಲ್ಲಿ ದೇವರು ಸೂರ್ಯನಿಗೆ ಹೇಳಿರುವ ಜ್ಞಾನವನ್ನೂ ಸಹ ಎಲ್ಲರೂ ಮರೆತುಹೋಗುವುದು ನಡೆದಿದೆ. ಮರೆತುಹೋದ ದೇವರ ಜ್ಞಾನವನ್ನು ದೇವರೆ ಸ್ವತಃವಾಗಿ ಮಾರುವೇಷದಲ್ಲಿ ಬಂದು ದೇವರಂತಲ್ಲದೆ, ಹಾಗೆಂದು ಮನುಷ್ಯನಂತೆ ಅಲ್ಲದೆ, ಇತ್ತ ದೇವರಿಗೂ ಅತ್ತ ಮನುಷ್ಯನಿಗೂ ತಪ್ಪಿದ ಮಧ್ಯಸ್ಥಿತಿಯಲ್ಲಿರುವ ಭಗವಂತನಾಗಿ ಬಂದು ಎಷ್ಟೋ ಬಾರಿ ಹೇಳುವುದು ನಡೆದಿದೆ. ದೇವರು ಭಗವಂತನಾಗಿ

ಯಾವಾಗ ಬಂದು ಹೇಳಿದರೂ ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನವನ್ನೇ ಹೇಳುವನು. ಸೃಷ್ಠಿ ಎಲ್ಲವೂ ತ್ರೈತ ಸಿದ್ಧಾಂತದಿಂದ (ಮೂರು ಸೂತ್ರಗಳಿಂದ) ತುಂಬಿ ಕೊಂಡಿರುವುದರಿಂದ ದೇವರು ಜೀವಿಯು ಆತ್ಮ (ಪರಮಾತ್ಮ, ಜೀವಾತ್ಮ, ಆತ್ಮ) ಎನ್ನುವ ಭಾಗಗಳಾಗಿ ಸೃಷ್ಠಿ ಎಲ್ಲವೂ ಇದೆ. ತ್ರೈತ ಸಿದ್ಧಾಂತದ ಮೇಲೆ ಆಧಾರಪಟ್ಟು ಸೃಷ್ಠಿಯಲ್ಲಿನ ಮನುಷ್ಯರಿಗೆ ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸುತ್ತೇನೆಂದು, ತಾನು ಯಾರೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವು ದಿಲ್ಲ ವೆಂದು ದೇವರು ಹೇಳುವುದು ನಡೆದಿದೆ. ದೇವರು ನೇರವಾಗಿ ಯಾರೊಂದಿಗೂ ಮಾತನಾಡದೆ ತನ್ನ ಜ್ಞಾನವನ್ನು ಹೇಗೆ ತಿಳಿಸುವನೆನ್ನುವ ಪ್ರಶ್ನೆಗೆ ಉತ್ತರವಾಗಿ, ಒಂದು ಆಕಾಶದಲ್ಲಿನ ಶಬ್ದದಿಂದ, ಎರಡು ತೆರೆ ಹಿಂದೆ ಕಾಣಿಸದೆ ಇರುವವ ರೊಂದಿಗೆ, ಮೂರು ತನ್ನ ದೂತನಂತೆ ಬಂದಿರುವವ ನೊಂದಿಗೆ ಜ್ಞಾನವನ್ನು ತಿಳಿಸುತ್ತೇನೆಂದು ಹೇಳುವುದು ನಡೆದಿದೆ. ದೇವರು ಅಷ್ಟು ವಿವರವಾಗಿ ಮೂರು ವಿಧಗಳೆಂದು ಹೇಳಿದರೂ, ಹೇಳಿದಂತೇ ಮೂರು ವಿಧಗಳಲ್ಲಿ ಬೋಧಿಸಿದರೂ, ಮನುಷ್ಯ ಮಾತ್ರ ಇಲ್ಲಿಯವರೆಗು ಆ ವಿಧಾನಗಳೇನೊ ಅರ್ಥ ಮಾಡಿಕೊಳ್ಳದೆ ಹೋಗಿದ್ದಾನೆ.

ಆಕಾಶವಾಣಿ ಹೇಳಿರುವುದು ಸೃಷ್ಟ್ಯಾದಿಯಲ್ಲಿ ಒಂದೇಬಾರಿ ನಡೆದಿದೆ. ಮೊದಲು ದೇವರಿಂದ ಜ್ಞಾನ ಹೊರಗೆ ಬರುವುದಕ್ಕೆ ದೇವರು ಆಕಾಶದಲ್ಲಿನ ಶಬ್ದದಿಂದ ಹೇಳಿಸಿದ್ದಾನೆ. ಅಲ್ಲಿ ಶೂನ್ಯದಿಂದ ಶಬ್ದ ಬಂದಿದೆ ಹೊರತು, ಅದನ್ನು ಹೇಳಿದವರು ಯಾರೆಂದು ಹೇಳಲಾರೆವು. ಅದು ಆದಿಯಲ್ಲೇ ದೇವರು ಹೇಳಿಸಿದ ಜ್ಞಾನವೆಂದು ಹೇಳಬಲ್ಲೆವು. ವಾಸ್ತವವಾಗಿ ಮೂರು ವಿಧಾನಗಳಲ್ಲಿನ ಮೊದಲನೆಯದಾದ ಶಬ್ದದಿಂದ ಬಂದಿರುವುದು ಯಾರಿಂದ ಬಂದಿರುವುದೆಂದು ಆಲೋಚಿಸಿದರೆ ಅದನ್ನು ದೇವರೇ ಹೇಳಿದ್ದಾನೆಂದು ಅನ್ನುವುದಕ್ಕೆ ಆಧಾರವಿಲ್ಲ. ಅಲ್ಲಿ ನಡೆದ ವಿಧಾನ ಏನು? ಎಂದು ಯೋಚಿಸಿದರೆ ಸ್ವಲ್ಪ ಸಮಾಚಾರ ಆತ್ಮ ತಿಳಿಸುತ್ತಿದೆ. ಅದೇನೆಂದರೆ! ದೇವರ ಜ್ಞಾನವನ್ನು ಮನುಷ್ಯರಿಗೆ ತಿಳಿಸುವುದಕ್ಕೆ ಅಥವಾ ಬೋಧಿಸುವುದಕ್ಕೆ ಒಂದು ಭೂತಗಳು, ಎರಡು ಗ್ರಹಗಳು, ಮೂರು

ಮನುಷ್ಯನಂತಿರುವ ಭಗವಂತನು ಉಪಯೋಗಪಡುತ್ತಿದ್ದಾರೆ. ಭೂತಗಳಲ್ಲಿಯೂ, ಗ್ರಹಗಳಲ್ಲಿಯೂ ಮನುಷ್ಯರ ಶರೀರಗಳಲ್ಲಿ ಇರುವಂತೆ ಆತ್ಮ ಇದೆ. ಮನುಷ್ಯನಿಂದ ಎಲ್ಲ ಕೆಲಸಗಳನ್ನು ಆತ್ಮ ಮಾಡಿಸಿದ ಹಾಗೆ, ಎಲ್ಲ ಮಾತುಗಳನ್ನು ಮಾತನಾಡಿಸಿದ ಹಾಗೆ ಭೂತಗಳಿಂದ, ಗ್ರಹಗಳಿಂದ ಆತ್ಮ ಮಾಡಿಸಬಲ್ಲದು, ಮಾತನಾಡಿಸಬಲ್ಲದು. ಗ್ರಹಗಳಲ್ಲಾಗಲೀ, ಭೂತಗಳಲ್ಲಾಗಲೀ ತ್ರೈತಸಿದ್ಧಾಂತ ಅಡಗಿದೆ. ಆದ್ದರಿಂದ ಭೂತಗಳಲ್ಲಿಯೂ, ಮಹಾಭೂತಗಳಲ್ಲಿಯೂ, ಗ್ರಹಗಳಲ್ಲಿಯೂ, ಮಹಾಗ್ರಹ ಗಳಲ್ಲಿಯೂ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಿರುತ್ತವೆ. ಸೃಷ್ಟ್ಯಾದಿಯಲ್ಲಿ ಮಹಾ ಭೂತವಾದವಾದ ಆಕಾಶದಲ್ಲಿನ ಆತ್ಮದಿಂದ ಜ್ಞಾನ ಹೇಳಲಾಗಿದೆ. ಹಾಗೇ ಎರಡನೇ ವಿಧಾನವಾದ ತೆರೆಮರೆಯಿಂದ ಹೇಳಿಸುವುದರಲ್ಲಿ ಮಹಾಗ್ರಹವಾದ ಸೂರ್ಯಗ್ರಹದಲ್ಲಿನ ಆತ್ಮ ಹೇಳಿದೆ. ಆಕಾಶ ಭೂತದಿಂದ ಹೇಳಿದಾಗಾಗಲಿ, ಖಗೋಳದಲ್ಲಿನ ಮಹಾಗ್ರಹವಾದ ಸೂರ್ಯನು ಹೇಳಿದಾ ಗಾಗಲೀ ಅವರಲ್ಲಿನ ಆತ್ಮವೇ ಜ್ಞಾನವನ್ನು ಹೇಳಿದಾಗ! ಮನುಷ್ಯ ಆಕಾರದಲ್ಲಿರುವ ಭಗವಂತನ ಶರೀರದಿಂದ ಕೂಡ ಆತ್ಮೇ ಹೇಳಿದೆ. ಆದರೆ ಮನುಷ್ಯ ಆಕಾರವಿರುವ ಭಗವಂತನ ಶರೀರದಿಂದ ಹೇಳಿರುವುದು ಆತ್ಮೇ ಆದರೂ ಭೂತಗಳ ಆತ್ಮಕ್ಕೂ, ಗ್ರಹಗಳ ಆತ್ಮಕ್ಕೂ ಭಿನ್ನವಾಗಿ ಭಗವಂತನ ಶರೀರದಲ್ಲಿನ ಆತ್ಮ ಇರುತ್ತದೆ. ತ್ರೈತ ಸಿದ್ಧಾಂತ ಭಗವಂತನ ಶರೀರದಲ್ಲಿದೆಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಭಗವಂತನು ಮನುಷ್ಯರಿಗಿಂತ, ಭೂತಗಳಿಗಿಂತ, ಗ್ರಹಗಳಿಗಿಂತ ಭಿನ್ನವಾಗಿರುವನು. ಹಾಗೆ ಏಕಿದೆಯೆಂದರೆ ಭಗವಂತನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಅನ್ನುವ ಮೂರು ಆತ್ಮಗಳಿರುವುದಿಲ್ಲ.

ಭಗವಂತನ ಶರೀರದಲ್ಲಿ ಕರ್ಮ ಇರುವುದಿಲ್ಲ. ಆದ್ದರಿಂದ ಜೀವಾತ್ಮ ಆತ್ಮಗಳಿರುವುದಿಲ್ಲ. ಆದರೇ ಒಬ್ಬ ಪರಮಾತ್ಮ ಮಾತ್ರ ಭಗವಂತನ ಶರೀರ ದಲ್ಲಿದ್ದರೂ ಅದು ಸಾಕ್ಷಿಯಾಗಿದ್ದು ಏನೂ ಮಾಡದೆ ಇರುತ್ತದೆ. ಆದರೆ ಪರಮಾತ್ಮನಿಂದ ಅವಶ್ಯವನ್ನನುಸರಿಸಿ ಆತ್ಮ ಹೊರಗೆ ಬಂದು ಮಾತನಾಡಬೇ ಕಾಗಿರುವುದು ಮಾತನಾಡಿ ಪುನಃ ಪರಮಾತ್ಮನಲ್ಲೇ ಅಡಗಿಹೋಗುತ್ತಿರುತ್ತದೆ.

ಹಾಗೆ ಬಂದಿರುವ ಆತ್ಮ ಅವಶ್ಯವನ್ನನುಸರಿಸಿ ಜೀವಿಯಾಗಿ, ಅವಶ್ಯವನ್ನನುಸರಿಸಿ ದೇವರಾಗಿಯೂ ಸಹ ನಟಿಸುತ್ತದೆ. ಆದರೆ ಭಗವಂತನ ಶರೀರದಲ್ಲಿನ ವಿಧಾನ ಯಾರಿಗೂ ತಿಳಿಯದು. ಸರ್ವ ಸಾಧಾರಣ ಮನುಷ್ಯನಲ್ಲಿರುವಂತೆ ಇರುತ್ತದೆ. ಭಗವಂತನ ಶರೀರದಲ್ಲಿ ಮೂರು ಆತ್ಮಗಳು ಏಕೆ ಇಲ್ಲವೆಂದು ಪ್ರಶ್ನಿಸಿಕೊಂಡು ನೋಡಿದರೆ, ಸೃಷ್ಟ್ಯಾದಿಯಲ್ಲಿ ಹೇಳದ ಜ್ಞಾನವೇನಾದರೂ ಇದ್ದರೆ ಆಗಾಗ ದೇವರಿಂದ ಹೊರಗೆ ಬರುವಂತೆ ಮಾಡುವುದಕ್ಕೆ ಭಗವಂತನ ಶರೀರದಲ್ಲಿ ಪರಮಾತ್ಮ ಮಾತ್ರವಿರುತ್ತದೆ. ಭಗವಂತನ ಶರೀರದಿಂದ ಆತ್ಮ ಹೇಳಿದ ಮಾತುಗಳಲ್ಲಿ ಸೃಷ್ಟ್ಯಾದಿಯಲ್ಲಿ ಹೇಳದೇ ಬಿಟ್ಟಿರುವ ಜ್ಞಾನವು ಸಹ ಇರುತ್ತದೆ. ದೇವರ ಜ್ಞಾನ ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯದು. ಆದ್ದರಿಂದ ಭಗವಂತನ ಶರೀರದಲ್ಲಿರುವ ದೇವರಿಂದ ಆತ್ಮ ಹೊರಗೆ ಬರುವುದರಿಂದ ಹೊಸ ಜ್ಞಾನವನ್ನು ಆಗಿಂದಾಗ್ಗೇ ಬೋಧಿಸಬಲ್ಲದು. ಇದೆಲ್ಲವನ್ನೂ ಗಮನಿಸಿದರೆ, ಭಗವಂತನ ಶರೀರ ಭೂಮಿ ಮೇಲೆ ಸಕಲ ಜೀವರಾಶಿಗಳಲ್ಲಿ ಪ್ರತ್ಯೇಕತೆ ಹೊಂದಿದೆಯೆಂದು ಹೇಳಬಹುದು. ಸೃಷ್ಟ್ಯಾದಿಯಲ್ಲಿ ಯಾವ ಚಿಕ್ಕ ವಿಷಯವನ್ನಾಗಲೀ ಆಕಾಶದಿಂದ ಹೇಳಿಸದೆ ಬಿಟ್ಟುಹಾಕಿದ್ದರೆ, ಅದನ್ನು ದೇವರು ಭಗವಂತನಾಗಿ ಬಂದಾಗ ಬಿಡದೆ ಹೇಳುತ್ತಾನೆ.

ಗತದಲ್ಲಿ ಭೂಮಿಮೇಲೆಗೆ ಭಗವಂತನು ಬಂದು ಹೋದ ಸಂಘಟನೆಗಳು ಇವೆ. ಇಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾದ ವಿಷಯವೇನೆಂದರೆ! ದೇವರು ಭಗವಂತನಾಗಿ ಬೇರೆಬೇರೆ ಸಮಯಗಳಲ್ಲಿ ಮೂರುಬಾರಿ ಭೂಮಿಮೇಲೆಗೆ ಬಂದು ಹೋದರೆ, ಒಂದುಬಾರಿ ಬಂದಂತಾಗುತ್ತದೆ. ತ್ರೈತ ಸಿದ್ಧಾಂತವನ್ನು ದೇವರು ಭಗವಂತನ ಜನ್ಮಗಳಲ್ಲಿಯೂ ಸಹ ಹೊಂದಿಸಿ ಮೂರು ಬಾರಿ ಬಂದು ಜ್ಞಾನವನ್ನು ಹೇಳಿ ಹೋಗುವಂತೆ ಮಾಡಿದ್ದಾನೆ. ಆದರೇ ಆ ವಿಷಯ ಯಾರಿಗೂ ತಿಳಿಯಬಾರದು. ಆತನು ಯಾರಿಗೂ ತಿಳಿಯದಂತೆ ಬಂದು ಹೋಗುವುದನ್ನು ದೈವ ರಹಸ್ಯ ಎಂದು ಅನ್ನಬಹುದು. ದೇವರು ಭೂಮಿ ಮೇಲೆಗೆ ಮನುಷ್ಯ ಆಕಾರವಿರುವ ಭಗವಂತನಾಗಿ ಬಂದು ಹೋಗುವುದನ್ನು

ಯಾರಾದರೂ ತಿಳಿಯುವುದಾದರೆ, ಅವರಿಗೆ ಜ್ಞಾನ ತಿಳಿಯದಿದ್ದರೂ, ಅವರು ಯೋಗವನ್ನು ಮಾಡದಿದ್ದರೂ ಜನ್ಮ ರಾಹಿತ್ಯವಾದ ಮೋಕ್ಷವನ್ನು ಹೊಂದಬಲ್ಲರು. ಎಷ್ಟೋ ಜ್ಞಾನ ತಿಳಿದರೂ ದೊರಕದ ಮೋಕ್ಷ ಅಷ್ಟು ಸುಲಭವಾಗಿ ಸಿಗಬಾರದು. ಆದ್ದರಿಂದ ಮನುಷ್ಯನಹಾಗೆ ಬರುವ ದೇವರ ಅವತಾರ ಅಂದರೆ ಭಗವಂತನ ಜನ್ಮವನ್ನು ಯಾರೂ ತಿಳಿಯಲಾರರು. ತಿಳಿಯುವುದಕ್ಕೆ ಅವಕಾಶವಿಲ್ಲದಂತೆ ದೇವರು ಮಾಡುವನು. ಆದ್ದರಿಂದ ಬಹಳ ಜನರಿಗೆ ದೇವರು ಭೂಮಿ ಮೇಲೆಗೆ ಬರುವುದಿಲ್ಲ ಎನ್ನುವ ಉದ್ದೇಶವನ್ನು ಅವರಲ್ಲಿ ಸ್ಥಿರಸ್ಥಾಯಿಯಾಗಿ ಇಟ್ಟಿದ್ದಾನೆ. ಅದರ ಪ್ರಕಾರ ಕೆಲವು ಮತದವರು ದೇವರು ಹುಟ್ಟುವುದಿಲ್ಲವೆಂದೇ ವಾದಿಸುತ್ತಿರುವರು. ದೇವರು ಮನುಷ್ಯನಂತೆ ಹುಟ್ಟಿ ಬಂದರೂ ಆತನು ಇತ್ತ ಮನುಷ್ಯನಲ್ಲ, ಅತ್ತ ದೇವರೂ ಅಲ್ಲ ಎರಡಕ್ಕೂ ಅಂದರೆ ಎರಡೂ ಅಲ್ಲದ ಭಗವಂತನೆಂದು ಅವರಿಗೆ ತಿಳಿಯದು. ಎಲ್ಲಿ ನೋಡಿದರೂ ದೇವರ ಅವತಾರವಾದ ಭಗವಂತನನ್ನು ಗುರುತಿಸುವುದು ಯಾರಿಗೂ ಸಾಧ್ಯವಾಗುವುದಿಲ್ಲವೆಂದೇ ಹೇಳಬಹುದು.

ಗುರುತಿಸುವುದಕ್ಕೆ ಕಷ್ಟವಾದ ದೇವರ ಅವತರಣವನ್ನು ತಿಳಿಯಲಾರದ ಪ್ರಜೆಗಳೆಲ್ಲರೂ, ದೇವರು ಮನುಷ್ಯನಂತೆ ಕಾಣಿಸುವ ಭಗವಂತನಾಗಿ ಬಂದು ಹೋದರೂ, ಆತನು ಬಂದು ಹೋಗಿದ್ದಾನೆನ್ನುವ ವಿಷಯವೂ ಸಹ ತಿಳಿಯದ ಸ್ಥಿತಿಯಲ್ಲಿದ್ದಾರೆ. ದೇವರು ಮನುಷ್ಯನಂತೆ ಬಂದು ದೇವರೇ ಮಾರು ವೇಷದಲ್ಲಿ ಗುರುತಿಸದಹಾಗೆ ಮನುಷ್ಯರ ಮಧ್ಯದಲ್ಲಿದ್ದು, ದೇವರ ಸಮಾಚಾರವನ್ನು (ಜ್ಞಾನವನ್ನು) ದೇವರೇ ಸ್ವತಃವಾಗಿ ಹೇಳಿಹೋದರೂ, ಆ ಜ್ಞಾನವನ್ನು ನೋಡಿಯೂ ಸಹ ಇದು ಸಾಧಾರಣ ಮನುಷ್ಯರು ಹೇಳುವ ಜ್ಞಾನವಲ್ಲವೆಂದು ತಿಳಿಯಲಾರದೆ, ಭಗವಂತನನ್ನು ಸಹ ಸಾಮಾನ್ಯ ಮನುಷ್ಯರೊಂದಿಗೆ ಸೇರಿ ಸಿಕೊಳ್ಳುತ್ತಿದ್ದಾರೆ. ಯಾರಿಗೂ ತಿಳಿಯದ ದೇವರ ಸಮಾಚಾರವನ್ನು ತಿಳಿಸಿದವನೇ ನಿಜವಾದ ದೂತನೆಂದು ತಿಳಿಯದೇ ಹೋಗಿರುವುದರಿಂದ, ದೇವರು ತನ್ನ ಜ್ಞಾನವನ್ನು ಭೂಮಿಮೇಲೆ ಮನುಷ್ಯರಿಗೆ ತಿಳಿಸುವ ಮೂರು ವಿಧಾನಗಳಲ್ಲಿ, ಮೂರನೆ ವಿಧಾನವಾದ ದೂತನಿಂದ ಜ್ಞಾನವನ್ನು ತಿಳಿಸುತ್ತೇನೆ ಎನ್ನುವ

ವಿಧಾನವನ್ನು ಪೂರ್ತಿ ತಿಳಿಯದಂತೆ ಹೋಗಿದ್ದಾರೆ. ಮೂರು ವಿಧಾನಗಳಲ್ಲಿ ಎರಡನೆಯದಾದ ತೆರೆ ಮರೆಯಲ್ಲಿ ತಿಳಿಸುತ್ತೇನೆ ಎನ್ನುವ ಪದ್ಧತಿ ಪ್ರಕಾರ ತೆರೆಮರೆಯಲ್ಲಿ ಹೇಗೆ ತಿಳಿಸುತ್ತಾನೋ ತಿಳಿಯದವರಾಗಿ, ತೆರೆ ಮರೆಯಲ್ಲಿ ಕಾಣಿಸದೆ ಹೇಳಿದಾಗ ಹಾಗೆ ಹೇಳಿದವನನ್ನು ದೇವರು ಕಳುಹಿಸಿದ ದೂತನೆಂದು ಅಂದುಕೊಳ್ಳುವುದು ನಡೆದಿದೆ. ಮೂರನೇ ವಿಧಾನವನ್ನು ಎರಡನೆಯ ವಿಧಾನವಾಗಿ ಮನುಷ್ಯರು ಅಂದುಕೊಳ್ಳುವುದು ನಡೆದಿದೆ. ಇನ್ನು ಮೊದಲನೆಯ ವಿಧಾನವಾದ ಆಕಾಶವಾಣಿಯಿಂದ ಹೇಳಲ್ಪಡುವುದು ಹೇಗೋ ಸಹ ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಒಂದು ಬಾರಿ ಸೃಷ್ಟ್ಯಾದಿಯಲ್ಲಿಯೇ ದೇವರು ಆಕಾಶದಿಂದ ಸೂರ್ಯನಿಗೆ ತನ್ನ ಜ್ಞಾನವನ್ನು ಹೇಳಿಸಿದರೂ, ಅದೇ ಜ್ಞಾನವನ್ನು ಸೂರ್ಯನು ತನ್ನ ಸಾಟಿ ಗ್ರಹಗಳಿಗೆ, ಭೂಮಿ ಮೇಲಿರುವ ಪ್ರಜೆಗಳಿಗೆ ತಿಳಿಸಿದರೂ, ದೇವರು ಹೇಳಿದಹಾಗೆ ಎರಡು ವಿಧಾನಗಳು ನಡೆದುಹೋಗಿವೆಯೆಂದು ತಿಳಿಯದೇಹೋಗಿದ್ದಾರೆ. ಸೃಷ್ಟ್ಯಾದಿಯಲ್ಲಿ ಮೊದಲನೆಯ ವಿಧಾನ ನಡೆದಾಗ, ಆಗಲೇ ಸ್ವಲ್ಪ ಕಾಲಕ್ಕೆ ಸೂರ್ಯನು ಎರಡನೆಯ ವಿಧಾನದ ಪ್ರಕಾರ ಭೂಮಿ ಮೇಲೆ ಮನುಷ್ಯರಿಗೆ ಜ್ಞಾನವನ್ನು ತಿಳಿಸಿದ್ದಾನೆಂದು ಗುರುಸತಿಸಲಾರದೆ ಹೋಗಿದ್ದಾರೆ.

ಗತದಲ್ಲಿ ನಡೆದುಹೋದ ಮೊದಲನೆಯದಾದ ವಹೀಯಿಂದ (ವಾಣಿಯಿಂದ) ತಿಳಿದಿರುವುದನ್ನು, ಸೂರ್ಯನು ತೆರೆಮರೆಯಲ್ಲಿ ಹೇಳಿದ ಎರಡನೆಯದನ್ನು ಗುರುತಿಸಲಾರದೆ ಹೋಗಿದ್ದಾರೆ. ಇಂದಿಗೂ ಆ ಎರಡು ವಿಧಾನಗಳು ತಿಳಿಯದೆ ಹೋಗಿರುವುದರಿಂದ, ಪ್ರತ್ಯಕ್ಷವಾಗಿ ದೂತನಂತೆ ಹೇಳಿರುವುದನ್ನು ಎರಡನೆಯದಾಗಿ ಲೆಕ್ಕಿಸಿಕೊಳ್ಳುವುದು ನಡೆದಿದೆ. ಅದರಿಂದ ಮೂರನೇ ವಿಧಾನ ಪೂರ್ತಿ ತಿಳಿಯದೆ ಹೋಗಿದೆ. ತೆರೆಮರೆಯಲ್ಲಿ ಹೇಳುವವನು ಕಾಣಿಸದೆ ಬೋಧಿಸಿದರೂ, ಹೇಳುವವನು ನಾನು ಇಂತಹ ಸೂರ್ಯನೆಂದು ಹೇಳಿದಾಗ, ಸೂರ್ಯನನ್ನು ದೇವರ ದೂತನಾಗಿ ಲೆಕ್ಕಿಸಿಕೊಂಡು ಮೂರನೇ ವಿಧಾನವನ್ನು ಎರಡನೆಯದಾಗಿ ಹೋಲಿಸಿಕೊಂಡು ತಪ್ಪಾಗಿ ತಿಳಿಯುವುದು

ನಡೆದಿದೆ. ಆ ತಪ್ಪನ್ನು ಇಂದಿಗೂ ತಿಳಿದುಕೊಳ್ಳುವ ಸ್ಥಿತಿಯಲ್ಲಿ ಮನುಷ್ಯರು ಇಲ್ಲ. ಪೂರ್ವ ಇಂದೂ ಸಮಾಜವಾಗಿರುವ ಮನುಷ್ಯರೆಲ್ಲರೂ ಈ ದಿನ ಸ್ವಲ್ಪ ಅಜ್ಞಾನದಿಂದ ತಮ್ಮದು ಹಿಂದೂಮತ ಎಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಈದಿನ ಹಿಂದೂ ಮತದ ಮೇಲೆ ಪ್ರೇಮವಿದ್ದು, ತಮ್ಮ ಮತ ಕ್ಷೀಣಿಸಿ ಹೋಗುತ್ತಿದೆಯೆನ್ನುವ ಬಾಧೆಯನ್ನು ವ್ಯಕ್ತ ಮಾಡುವವರೆಲ್ಲರಿಗೂ, ವಾಸ್ತವವಾಗಿ ಈ ದಿನ ಹಿಂದೂ ಮತ ಎನ್ನುವ ಇಂದೂ ಸಮಾಜವೊಂದರ ಪೂರ್ವ ಚರಿತ್ರೆ ಅವರಿಗೆ ಯಾವಮಾತ್ರ ತಿಳಿಯದು. ಪೂರ್ವ ಚರಿತ್ರೆ ತಿಳಿದ ಜ್ಞಾನಿಗಳು ಭೂಮಿ ಮೇಲೆ ಅಲ್ಲಲ್ಲಿ ಇರಬಹುದು.

ಇಂದೂ ಎಂದರೆ ಜ್ಞಾನಿ ಎಂದು ಅರ್ಥ. ಇಂದೂಗಳು ಎಂದರೆ ಜ್ಞಾನಿಗಳು ಎಂದು ಅರ್ಥ. ಪೂರ್ವದಲ್ಲಿ ಯಾವ ಮತವೂ ಇಲ್ಲದ, ಯಾವ ಮತವೂ ಬಾರದ ದಿನ ದೇಶದಲ್ಲಿರುವವರೆಲ್ಲರೂ ಜ್ಞಾನಿಗಳಾಗಿ ಇರುವುದರಿಂದ ಭಾರತದೇಶಕ್ಕೆ ಇಂದೂ ದೇಶವೆಂದು ಬಿರುದು ಇದೆ. ಇಂದೂ ದೇಶವೆನ್ನುವ ಬಿರುದು ಕೃತಯುಗದಲ್ಲೇ ಬಂದಿದೆ. ಕಲಿಯುಗದಲ್ಲಿ ಎರಡುಸಾವಿರ ವರ್ಷಗಳ ಪೂರ್ವದವರೆಗು ಈ ದೇಶವನ್ನು ಇಂದೂ ದೇಶ ಎನ್ನುತ್ತಿದ್ದರು. ಹೆಸರಿಗೆ ತಕ್ಕ ಹಾಗೇ ದೈವಜ್ಞಾನವೂ ಸಹ ಹೊಂದಿ ಇಂದೂದೇಶ ಆಧ್ಯಾತ್ಮಿಕ ಶಕ್ತಿಯಿರುವ ದೇಶವೆಂದು ಇತರ ದೇಶದವರೆಂದುಕೊಳ್ಳುವಹಾಗೆ ಮಾಡಿದೆ. ಈ ಮಧ್ಯೆ ಕಾಲದಲ್ಲಿ ಇಂದೂದೇಶ ಸ್ವಲ್ಪ ಬದಲಾವಣೆಯೊಂದಿಗೆ ಹಿಂದೂದೇಶವಾಗಿ ಕರೆಯಲಾಗುತ್ತಿದೆ. ನಾವು ಈ ದಿನ ಜ್ಞಾನವನ್ನು ಬೋಧಿಸುತ್ತಾ ನಾವು ಪೂರ್ವದಲ್ಲಿ ಇಂದೂಗಳಾಗಿ ಇರುತ್ತಿದ್ದೆವು, ಅಂತಹ ಜ್ಞಾನ ತಿಳಿದು ನಿಜವಾದ ಜ್ಞಾನಿಗಳು (ಇಂದೂಗಳು) ಆಗಬೇಕೆಂದು ಹೇಳಿದರೇ, ಚರಿತ್ರೆ ತಿಳಿಯದ ಈದಿನ ಹಿಂದುಗಳು ನಾವು ಯಾವುದೋ ಹೊಸ ಮತವನ್ನು ಕುರಿತು ಹೇಳುತ್ತಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ನಾವು ಏನು ಹೇಳುತ್ತಿದ್ದೇವೆಂದು ಅರ್ಥಮಾಡಿಕೊಳ್ಳದ ಸ್ಥಿತಿಯಲ್ಲಿ ಈಗಿನ ಹಿಂದೂಗಳಿರುವುದು ವಿಷಾದಕರ. ನಾವು ಹೇಳುವ ಇಂದೂ ಎನ್ನುವ ಪದ ಸತ್ಯ ಎಂದು ಸಾಕ್ಷಿ ಕೊಡುವಹಾಗೆ

ಒಂದು ಕಾಲದಲ್ಲಿ ಈ ದೇಶಕ್ಕೆ ಪ್ರಧಾನಿ ಆದ ಜವಹರ್‌ಲಾಲ್ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಗೆ **"ನಮ್ಮದು ಇಂದೂದೇಶವೇ"** ಎಂದು ಹೇಳಿ ಬರೆದ ಪತ್ರ ಇದೆ ನಂತರ ಪುಟದಲ್ಲಿ ನೋಡಿ.

ಈದಿನ ಕೆಲವರು ದೈವಜ್ಞಾನವನ್ನು ತಿಳಿದವರು ಸಹ ತಾವು ನಿಜವಾದ ಇಂದೂಗಳೆಂದು ತಿಳಿಯದೆಹೋಗಿದ್ದಾರೆ. ಅರ್ಥದಿಂದ ಕೂಡಿಕೊಂಡ ಇಂದೂವೆನ್ನುವ ಮಾತನ್ನೇ ತಿಳಿಯದೆ ಹೋಗಿರುವುದಲ್ಲದೆ, ಅದಕ್ಕಿಂತ ಮುಖ್ಯವಾದ ಜ್ಞಾನವನ್ನೇ ಮರೆತು ಹೋಗಿ, ದೇವರು ಭೂಮಿ ಮೇಲೆ ಮೂರು ವಿಧಗಳ ಜ್ಞಾನವನ್ನು ಬೋಧಿಸಿದ ವಿಷಯವನ್ನು ಪೂರ್ತಿಯಾಗಿ ತಿಳಿಯದಂತೆ ಹೋಗಿದ್ದಾರೆ. ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ ಮೊದಲನೆಯ ಶ್ಲೋಕದಲ್ಲಿಯೇ ಸೃಷ್ಟ್ಯಾದಿಯಲ್ಲಿ ಆಕಾಶವಾಣಿಯಿಂದ ಸೂರ್ಯನಿಗೆ ಜ್ಞಾನವನ್ನು ಹೇಳಿದ ಮೊದಲನೆಯ ವಿಧಾನವನ್ನೂ, ಹಾಗೇ ಸೂರ್ಯನು ಮನುವಿಗೆ ಹೇಳಿದ ಎರಡನೇ ವಿಧಾನವನ್ನು ತಿಳಿಸಿದ್ದಾನೆ. ನಂತರ ಮೂರನೇ ಶ್ಲೋಕದಲ್ಲಿ ಮೂರನೇ ವಿಧಾನವಾದದ್ದಾಗಿ ತಾನು ಅರ್ಜುನನಿಗೆ ತಿಳಿಸಿದಹಾಗೆ ಹೇಳಿದ್ದಾನೆ. ಖುರ್‌ಆನ್ ಗ್ರಂಥದಲ್ಲಿ 42ನೇ ಸುರಾ 51ನೇ ಆಯತ್‌ನಲ್ಲಿ ಹೇಳಿದ ವಿಷಯ ಮೊದಲೇ ಗೀತೆಯಲ್ಲಿ ಜ್ಞಾನಯೋಗದಲ್ಲಿ ಒಂದನೇ ಶ್ಲೋಕದಲ್ಲಿಯೂ ನಂತರ ಮೂರನೇ ಶ್ಲೋಕದಲ್ಲಿಯೂ ಇದೆ. ಆದರೂ ದೇವರು ಹೇಳಿದ ಮೂರು ವಿಧಾನಗಳು ಅಂತಿಮ ದೈವ ಗ್ರಂಥ ಖುರ್‌ಆನ್‌ನಲ್ಲಿ ಪ್ರತ್ಯೇಕವಾದ ಆಯತ್‌ಆಗಿ (ವಾಕ್ಯವಾಗಿ) ಹೇಳಿದಾಗ, ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಅದೇ ವಿಷಯವನ್ನೇ ಜ್ಞಾನಯೋಗದಲ್ಲಿ ಮೊದಲನೆಯ ಶ್ಲೋಕದಲ್ಲಿಯೂ ಮೂರನೇ ಶ್ಲೋಕದಲ್ಲಿಯೂ ಹೇಳುವುದು ನಡೆದಿದೆ. ಅಂತಿಮ ದೈವ ಗ್ರಂಥದಲ್ಲಿ ಹೇಳಿದರೂ, ಅದೇನೋ ಆ ಆಯತ್ ವೊಂದರ ಭಾವದಲ್ಲಿನ ಮೂರು ವಿಧಾನಗಳೇನೋ, ಆ ಗ್ರಂಥವನ್ನು ಓದಿದವರಿಗೆ ಅರ್ಥವಾಗಲಿಲ್ಲ. ಅವರು ಅರ್ಥ ಮಾಡಿಕೊಳ್ಳುವ ಪ್ರಯತ್ನವೂ ಸಹ ಮಾಡಲಿಲ್ಲ. ಅಂತಿಮ ದೈವ ಗ್ರಂಥವೆಂದು ಹೆಸರು ಹೊಂದಿದ ಖುರ್‌ಆನ್‌ನಲ್ಲಿ ಅಲ್ಲಲ್ಲಿ

**ಪ್ರಮುಖರ ಲೇಖ**



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

ಎಷ್ಟೋ ದೊಡ್ಡ ಜ್ಞಾನವಿರುವಾಗ, ಅವುಗಳೆಲ್ಲವನ್ನು ಎಷ್ಟು ಮಾತ್ರ ಅರ್ಥ ಮಾಡಿಕೊಳ್ಳದೇ, ಕೇವಲ ಅಲ್ಲಾಹ್‌ನ್ನು (ದೇವರನ್ನು) ವಿಶ್ವಾಸಿಸುವುದು, ನಮಾಜ್ ಎನ್ನುವ ಹೆಸರಿಂದ ಪ್ರಾರ್ಥನೆಗಳು ಮಾಡುವುದು ಕ್ರಮ ತಪ್ಪದೆ ಮಾಡುತ್ತಿದ್ದಾರೆ. ಗ್ರಂಥದಲ್ಲಿ ಹೇಳಿದ ಜ್ಞಾನವನ್ನು ತಿಳಿಯದೇ ದೇವರನ್ನು ಆರಾಧಿಸಿದರೆ ಗಮ್ಯ ತಿಳಿಯದ ಪ್ರಯಾಣದಂತೆ ಇರುತ್ತದೆ. ಒಂದುವೇಳೆ ದೇವರುಕೊಟ್ಟಿರುವ ಗ್ರಂಥದಲ್ಲಿನ ಜ್ಞಾನವನ್ನು ಸಂಪೂರ್ಣವಾಗಿ ತಿಳಿದು, ಗ್ರಂಥದಲ್ಲಿ ಹೇಳಿದಹಾಗೆ ದೇವರನ್ನು ಆರಾಧಿಸಿದರೆ ಅದು ಗಮ್ಯ ತಿಳಿದ ಪ್ರಯಾಣದಂತೆ ಇರುತ್ತದೆ. ದೇವರು ತನ್ನ ಜ್ಞಾನವನ್ನು ಭೂಮಿ ಮೇಲೆ ಮೂರು ವಿಧಗಳಲ್ಲಿ ಬೋಧಿಸುತ್ತೇನೆಂದು, ತಾನು ನೇರವಾಗಿ (ಪ್ರತ್ಯಕ್ಷವಾಗಿ) ಯಾರೊಂದಿಗೂ ಮಾತನಾಡುವುದಿಲ್ಲವೆಂದು ಖುರ್‌ಆನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಪ್ರತ್ಯೇಕವಾಗಿ ಹೇಳಿದ್ದಾನೆ. ದೇವರು ಅಷ್ಟು ಹೇಳಿದರೆ ಈ ದಿನ ಮುಸ್ಲೀಮ್ ಸಮಾಜಕ್ಕೆ ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಎನ್ನುವ ವಿಷಯವೊಂದು ಅರ್ಥವಾಗಿದೆ. ಅಷ್ಟೇ ಹೊರತು ಅಲ್ಲೇ ಹೇಳಿದ ಮೂರು ವಿಧಾನಗಳಲ್ಲಿ ಸಕ್ರಮವಾಗಿ ಒಂದು ವಿಧಾನವೂ ಸಹ ಅರ್ಥವಾಗಲಿಲ್ಲವೆಂದು ಹೇಳಬಹುದು.

ಹಿಂದುಗಳ (ಇಂದೂಗಳ) ವಿಷಯಕ್ಕೆ ಬಂದರೆ ಪ್ರತ್ಯಕ್ಷವಾಗಿ ಭಗವಂತನು ಹೇಳಿದ ಭಗವದ್ಗೀತೆಯೇ ಅರ್ಥವಾಗದ ಸ್ಥಿತಿಯಲ್ಲಿ ಉಳಿದುಹೋಗಿದ್ದಾರೆ. ಮುಸ್ಲೀಮ್‌ರಿಗು ಅವರ ಗ್ರಂಥ ಖುರ್‌ಆನ್ ಎನ್ನುವ ನಂಬಿಕೆಯಿಂದ ನಮ್ಮ ಗ್ರಂಥ ಖುರ್‌ಆನ್ ಎಂದು ಹೇಳುತ್ತಿದ್ದಾರೆ. ಹಿಂದೂಗಳಿಗೆ ತಮಗೆ ದೇವರು ಕೊಟ್ಟ ಗ್ರಂಥಯಾವುದೋ ಸಹ ತಿಳಿಯದ ಸ್ಥಿತಿಯಲ್ಲಿದ್ದು ತಮ್ಮ ಗ್ರಂಥ ಭಗವದ್ಗೀತೆಯೆಂದು ಹೇಳದೇ ಹೋಗುತ್ತಿದ್ದಾರೆ. ಬಹಳ ಜನ ಹಿಂದುಗಳು ತಮ್ಮ ಗ್ರಂಥಗಳು ವೇದಗಳೆಂದು ಹೇಳುತ್ತಿದ್ದಾರೆ. ದೇವರು ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನ, ಸೂರ್ಯನಿಂದ ಮನುವಿಗೆ ಹೇಳಿದ ಜ್ಞಾನ, ಮೊಟ್ಟಮೊದಲು ಗ್ರಂಥರೂಪವಾದ ದೈವಜ್ಞಾನ ಭಗವದ್ಗೀತೆಯೆಂದು ತಿಳಿಯದ ಸ್ಥಿತಿಯಲ್ಲಿದ್ದಾರೆ.

ಭಗವದ್ಗೀತೆ ತಮ್ಮ ಗ್ರಂಥವೆಂದು ತಿಳಿಯದವರು, ಭಗವದ್ಗೀತೆಯನ್ನು ಇಲ್ಲಿಯವರೆಗು ನೋಡದವರು, ಭಗವದ್ಗೀತೆಯಲ್ಲಿ ಹೇಳಿದ ಜ್ಞಾನ ತಿಳಿಯದ ಸ್ಥಿತಿಯಲ್ಲಿರುವವರಿಗೆ ದೇವರು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಬೋಧಿಸುವನೆನ್ನುವ ವಿಷಯ ಹೇಗೆ ತಿಳಿಯುತ್ತದೆ. ಆದ್ದರಿಂದ ದೇವರು ಹೇಳಿದ ಮೂರು ವಿಧಾನಗಳಲ್ಲಿ ಕನಿಷ್ಟ ಒಂದು ವಿಧಾನವೂ ಸಹ ತಿಳಿಯದಂತೆ ಹೋಗಿದೆ. ಅಸಲಾದ ಅಲ್ಲಾಹ್‌ನ್ನು (ದೇವರನ್ನು) ಹೊರತು ನಾವು ಯಾರನ್ನೂ ಆರಾಧಿಸಲಿಲ್ಲ ಎನ್ನುವ ಮುಸ್ಲಿಮ್‌ರಿಗಾಗಲೀ, ಪೂರ್ವ ಜ್ಞಾನ ಮಾರ್ಗದಲ್ಲಿ ಘನಚರಿತ್ರೆ ಇದ್ದು ಈ ದಿನ ದೇವರ್ಯಾರೋ ತಮ್ಮ ಗ್ರಂಥ ಯಾವುದೊ ತಿಳಿಯದ ಸ್ಥಿತಿಯಲ್ಲಿರುವ ಹಿಂದೂಗಳಿಗಾಗಲೀ, ದೇವರ ಜ್ಞಾನ ಭೂಮಿ ಮೇಲೆ ಹೇಗೆ ತಿಳಿಯುತ್ತದೊ, ಅದನ್ನು ಕುರಿತು ದೇವರು ಏನು ಹೇಳಿದ್ದಾನೊ ತಿಳಿಯದಂತೆ ಹೋಗಿದೆ.

ಭೂಮಿಮೇಲೆ ಅನೇಕ ದೇಶಗಳು, ಆ ದೇಶಗಳಲ್ಲಿ ಅನೇಕ ಪ್ರಾಂತಗಳು ಇವೆ. ಒಂದೊಂದು ಪ್ರಾಂತದಲ್ಲಿರುವ ಮನುಷ್ಯರು ಒಂದೊಂದು ಸಮಾಜವಾಗಿ ಏರ್ಪಟ್ಟು ಅವರಿಗೆ ಅನುಕೂಲವಾದ ಜೀವನ ವಿಧಾನಗಳಿಗೆ ಅಭ್ಯಾಸ ವಾಗಿರುತ್ತಾರೆ. ಹಾಗೇ ಭಕ್ತಿ ವಿಧಾನದಲ್ಲಿಯೂ ಸಹ ಯಾವುದೋ ಒಂದು ಪದ್ಧತಿಯನ್ನು ಅಭ್ಯಾಸ ಮಾಡಿಕೊಂಡು ಅದರ ಪ್ರಕಾರ ಅವರ ಆರಾಧನೆಗಳು (ಪೂಜೆಗಳು) ಮಾಡುತ್ತಿರುತ್ತಾರೆ. ಕೆಲವು ಸಮಾಜದವರು ಪ್ರಕೃತಿಯನ್ನು ಆರಾಧಿಸುತ್ತಿರುವಾಗ, ಕೆಲವು ಸಮಾಜದವರು ಪ್ರಕೃತಿಯಲ್ಲಿನ ಪ್ರಾಣಿಗಳನ್ನು ಆರಾಧಿಸುತ್ತಿರುತ್ತಾರೆ. ಕೆಲವು ಸಮಾಜದವರು ಗ್ರಾಮ ದೇವತೆಗಳನ್ನು, ಕೆಲವು ಸಮಾಜದವರು ಕ್ಷುದ್ರ ದೇವತೆಗಳನ್ನು, ಕೆಲವು ಸಮಾಜದವರು ಮಹಾ ದೇವತೆಗಳನ್ನೂ ಆರಾಧಿಸುತ್ತಿರುವರು. ಕೆಲವರು ಆ ಪ್ರಾಂತಕ್ಕೆ ದೊಡ್ಡದಾಗಿರುವ ವ್ಯಕ್ತಿಯನ್ನೇ ಆರಾಧಿಸುವುದು ಇದೆ. ಕೆಲವರು ತಮಗೆ ಗುರುವಾಗಿರುವ ವ್ಯಕ್ತಿಯನ್ನು ಆರಾಧಿಸುವುದು ಇದೆ. ಈ ವಿಧವಾಗಿ ಲೆಕ್ಕವಿಲ್ಲದಷ್ಟು ಆರಾಧನೆಗಳು, ಲೆಕ್ಕವಿಲ್ಲದಷ್ಟು ದೇವತೆಗಳಿದ್ದಾರೆಂದು ಹೇಳಬಹುದು. ಅನೇಕ ಪ್ರಾಂತಗಳಲ್ಲಿ

ಇಷ್ಟು ಮಂದಿ ಆರಾಧಿಸುವ ಆರಾಧನೆಗಳಲ್ಲಿ ಯಾವುವು ಸರಿಯಾದವು, ಯಾವು ಸರಿಯಾದವಲ್ಲ ಎಂದು ಆಲೋಚಿಸಿದರೆ, ಬುದ್ಧಿಗೆ ಒಂದು ಸಮಾಧಾನ ತಿಳಿಯುತ್ತಿದೆ. ಬುದ್ಧಿಗೆ ಉತ್ತರವನ್ನು ತಿಳಿಸುವವನು ಆತ್ಮವೇ ಆದ್ದರಿಂದ, ಆತನಿಗೆ ತಿಳಿಯದಿರುವುದು ಏನೂ ಇಲ್ಲವಾದ್ದರಿಂದ, ಆ ಸಮಾಧಾನವೇ ಸರಿಯಾದದ್ದೆಂದು ಭಾವಿಸುತ್ತಿದ್ದೇವೆ. ಆತ್ಮ ತಿಳಿಸಿದ ಸೂಚನೆ ಪ್ರಕಾರ ದೇವರು ಮೂರು ವಿಧಾನಗಳ ಪ್ರಕಾರ ತಿಳಿಸಿದ ಜ್ಞಾನವೇ ಸರಿಯಾದದ್ದೆಂದು, ಆ ಮೂರು ವಿಧಾನಗಳ ಜ್ಞಾನದಲ್ಲಿ ಇಲ್ಲದ ಆರಾಧನೆಗಳು, ಆಚರಣೆಗಳೆಲ್ಲವೂ ವ್ಯರ್ಥವೆಂದು ತಿಳಿಯುತ್ತಿದೆ.

ಇಷ್ಟು ಪ್ರಪಂಚದಲ್ಲಿ ಸುಮಾರು 194 ದೇಶಗಳಲ್ಲಿರುವ ಅನೇಕ ಆರಾಧನೆ ಆಚಾರಗಳನ್ನು, ದೇವರು ಹೇಳಿದ ಮೂರು ವಿಧಾನಗಳಿಂದ ಹೋಲಿಸಿ ನೋಡಿ, ಅದಕ್ಕೆ ಸರಿಹೋಗುವವೆಲ್ಲವೂ ಸಕ್ರಮವಾದವೆಂದು, ಆ ಮೂರು ವಿಧಾನಗಳಿಗೂ ಸರಿಹೋಗದಿರುವವೆಲ್ಲವೂ ಸಕ್ರಮವಾದವುಗಳಲ್ಲವೆಂದು ತಿಳಿಯಬಹುದು. ಆ ವಿಧವಾಗಿ ಲೆಕ್ಕಿಸಿ ನೋಡಿದರು ಸಕ್ರಮವಾದ ದೇವರ ಜ್ಞಾನ ಇರುವವು ಈ ದಿನ ಭೂಮಿಮೇಲಿರುವ ಮೂರು ಮತಗಳೆಂದು ಹೇಳಬಹುದು. ವಾಸ್ತವವಾಗಿ ಮೂರು ಮತಗಳಾಗಿ ಹೇಳುತ್ತಿರುವವುಗಳಲ್ಲಿ ದೇವರು ಹೇಳಿದ ಮೂರು ವಿಧಾನಗಳಿಗೂ ಸಂಬಂಧಿಸಿದ ಜ್ಞಾನವಿದೆ. ಆ ಮತಗಳಲ್ಲಿರುವ ಜ್ಞಾನದ ಪ್ರಕಾರವಾದರೆ ಅವುಗಳಿಗೆ ಮತಗಳೆಂದು ಹೆಸರು ಇಡಬಾರದು. ಆದರೆ ಅಲ್ಲಿಯೂ ಸಹ ಸ್ವಲ್ಪ ಅಜ್ಞಾನ ಏರ್ಪಟ್ಟಿರುವುದರಿಂದ ಮತಗಳೆಂದು ಕರೆಯಲಾಗುತ್ತಿವೆ. ಅವರು ಇಟ್ಟುಕೊಂಡ ಮತಗಳನ್ನು ಹೆಸರಿಂದ ಹೇಳಿದರೆ, ದೇವರ ಜ್ಞಾನ ಹಿಂದೂ ಮತಕ್ಕೆ ಸಂಬಂಧಿಸಿದ ಭಗವದ್ಗೀತೆಯಲ್ಲಿ, ಕ್ರೈಸ್ತವರಿಗೆ ಸಂಬಂಧಿಸಿದ ಬೈಬಿಲ್ ಗ್ರಂಥದಲ್ಲಿ, ಹಾಗೇ ಮುಸ್ಲಿಮ್‌ರಿಗೆ ಸಂಬಂಧಿಸಿದ ಖುರ್‌ಆನ್ ಗ್ರಂಥದಲ್ಲಿದೆಯೆಂದು ಹೇಳಬಹುದು.

ಮನುಷ್ಯರು ಸ್ವಲ್ಪ ಅಜ್ಞಾನದಿಂದ ಮತಗಳೆಂದು ಹೆಸರು ಇಟ್ಟು ಕೊಂಡರೂ, ನಮ್ಮ ಮತ ಗ್ರಂಥ ಬೇರೆಯೆಂದು ಹೇಳಿಕೊಂಡರೂ, ಮೂರು

ಮತ ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನ ಇದೆ. ಗ್ರಂಥದಲ್ಲಿರುವ ವಾಕ್ಯಗಳಿಗೆ ಅರ್ಥಗಳು, ಭಾವಗಳು ಮನುಷ್ಯರು ಬೇರೆ ಬೇರೆಯಾಗಿ ಹೇಳಿಕೊಂಡರೂ, ವಾಸ್ತವವಾಗಿ ಒಂದು ವಾಕ್ಯಕ್ಕೆ ಅರ್ಥ ಒಂದೇ ವಿಧವಾಗಿ ಒಂದೇ ಜ್ಞಾನದಿಂದ ಮುಡಿಬಿದ್ದಿವೆ. ಮನುಷ್ಯನ ಮೆದಳು ದೇವರ ಜ್ಞಾನವನ್ನು ಅರ್ಥ ಮಾಡಿಕೊಳ್ಳದ ಸ್ಥಿತಿಯಲ್ಲಿದ್ದು ತಪ್ಪು ಭಾವನೆಯೊಂದಿಗೆ ಅರ್ಥ ಮಾಡಿಕೊಂಡರೂ, ಒಂದು ವಾಕ್ಯ ಎಲ್ಲ ಗ್ರಂಥಗಳಲ್ಲಿ ಒಂದೇ ಅರ್ಥವನ್ನು ಕೊಡುವುದಾಗಿ, ಒಂದೇ ಜ್ಞಾನವನ್ನು ಸೂಚಿಸುವುದಾಗಿ ಇರುತ್ತದೆ. ಯಾವ ಮನುಷ್ಯನಾದರೂ ತನ್ನ ಮತಗ್ರಂಥವಾದ ಭಗವದ್ಗೀತೆಯನ್ನಾಗಲೀ, ಬೈಬಿಲ್ ಗ್ರಂಥವನ್ನಾಗಲೀ, ಖುರ್‌ಆನ್ ಗ್ರಂಥವನ್ನಾಗಲೀ ಓದಿದರೆ ಉಳಿದ ಎರಡು ಗ್ರಂಥಗಳಲ್ಲಿನ ಸಮಾಚಾರ ಅರ್ಥವಾಗಿಹೋಗುತ್ತದೆ. ಒಬ್ಬ ಮನುಷ್ಯ ಹಿಂದು ವಾದರೆ ಭಗವದ್ಗೀತೆಯನ್ನು ಅಸಲಾದ ಅರ್ಥದಿಂದ, ಅಸಲಾದ ಭಾವದಿಂದ ಓದುವು ದಾದರೆ ಉಳಿದ ಬೈಬಿಲ್, ಖುರ್‌ಆನ್ ಗ್ರಂಥಗಳಲ್ಲಿನ ಸಾರಾಂಶವೆಲ್ಲವೂ ತಿಳಿದುಹೋಗುತ್ತದೆ. ದೇವರು ಹೇಳಿದ ಒಂದೇ ಜ್ಞಾನವೇ ಮೂರು ಗ್ರಂಥಗಳಲ್ಲಿ ಇರುವುದರಿಂದ, ಒಂದು ಗ್ರಂಥವನ್ನು ಓದಿದರೆ ಉಳಿದ ಎರಡು ಗ್ರಂಥಗಳ ಸಾರಾಂಶ ತಿಳಿದುಹೋಗುತ್ತದೆ. ನಾನು ಸ್ವತಃವಾಗಿ ಮೂರು ಗ್ರಂಥಗಳನ್ನು ಓದಿ ನೋಡಿದ್ದೇನೆ. ಆದ್ದರಿಂದ ಅವುಗಳನ್ನು ಕುರಿತು ಹೇಳುತ್ತಿದ್ದೇನೆ. ವಾಸ್ತವವಾಗಿ ಹೇಳಿದರೆ ಈ ಗ್ರಂಥಗಳಲ್ಲಿ ಒಂದು ಮಂತ್ರಜಾಲವಿದೆಯೆಂದು ಹೇಳಬಹುದು. ಇವುಗಳಲ್ಲಿನ ಮ್ಯಾಜಿಕ್ ಬಹುಶ ಯಾರಿಗೂ ಅರ್ಥವಾಗಿರುವುದಿಲ್ಲ. ಏಕೆಂದರೆ ಒಂದೇ ದೃಷ್ಟಿಯಿಂದ ಮೂರು ಗ್ರಂಥಗಳನ್ನು ಯಾರೂ ಓದುವುದಿಲ್ಲ. ಯಾರಾದರಾಗಲಿ ಮೂರು ಮತ ಗ್ರಂಥಗಳನ್ನು ಓದಿದವರಿದ್ದರೂ ಅವರು ಮೊದಲು ಅವರ ಮತ ಗ್ರಂಥವನ್ನು ಓದಿದ ನಂತರ ಉಳಿದ ಮತ ಗ್ರಂಥಗಳನ್ನು ಓದುವುದು ನಡೆದಿರುತ್ತದೆ. ಯಾರಾದರಾಗಲೀ ಮೊದಲು ಓದಿದ ಗ್ರಂಥದ ಮೇಲೆ ಒಂದು ನಿರ್ಣಯಕ್ಕೆ ಬಂದಿರುತ್ತಾರೆ. ಮೊದಲು ತಮ್ಮ ಗ್ರಂಥವನ್ನು ಓದಿರುವುದರಿಂದ ತಮ್ಮ ಗ್ರಂಥವನ್ನು ಮೀರಿದ ಗ್ರಂಥ ಇರುವುದಿಲ್ಲವೆನ್ನುವ ನಿರ್ಣಯ ಹೊಂದಿರುತ್ತಾರೆ. ಆದ್ದರಿಂದ ನಂತರ ಓದುವ ಗ್ರಂಥಗಳ ಮೇಲೆ

ಒಂದೇ ದೃಷ್ಠಿ ಇರುವುದಿಲ್ಲ. ನಂತರ ಓದಿದ ಗ್ರಂಥ ಮೊದಲು ತಾನು ಓದಿದ ಗ್ರಂಥಕ್ಕಿಂತ ದೊಡ್ಡದಾಗಿದ್ದರೂ, ಆ ದೊಡ್ಡತನವನ್ನು ಮನುಷ್ಯ ಗ್ರಹಿಸದೆ ಮೊದಲು ಓದಿರುವುದೇ ದೊಡ್ಡದೆಂದುಕೊಳ್ಳುತ್ತಿರುತ್ತಾನೆ. ಆದ್ದರಿಂದ ಇವುಗಳಲ್ಲಿ ಯಾವುದು ಎಷ್ಟು ಎಂದು ಗುರುತಿಸಲಾರದ ಮಂತ್ರಜಾಲವಿದೆಯೆಂದು ಹೇಳಬಹುದು.

ನಾನು ಇಂದೂವಾಗಿ (ಹಿಂದುವಾಗಿ) ಹುಟ್ಟಿದ್ದೇನೆ. ಆದ್ದರಿಂದ ಮೊದಲು ಭಗವದ್ಗೀತೆಯನ್ನು ಓದುವುದು ನಡೆದಿದೆ. ಜ್ಞಾನವೆಂದರೆ ಏನೋ ತಿಳಿಯದ ನಾನು ಒಂದು ಬಾರಿ ಭಗವದ್ಗೀತೆಯನ್ನು ಓದಿದ ನಂತರ ಅದರಲ್ಲಿ ಕೇವಲ ಶೇ.ಹತ್ತರಷ್ಟು ಮಾತ್ರ ಅರ್ಥವಾಗಿದೆ. ಉಳಿದ ಶೇಕಡ ತೊಂಬತ್ತರಷ್ಟು ಅರ್ಥ ವಾಗಲಿಲ್ಲ. ಪೂರ್ತಿ ಅರ್ಥವಾಗಲಿಲ್ಲವೆಂದು ತಿಳಿದು ಅರ್ಥವಾಗದ್ದನ್ನು ಕುರಿತು ಉಳಿದ ಹಿರಿಯರಾದ ಜ್ಞಾನಿಗಳನ್ನು, ಸ್ವಾಮಿಗಳನ್ನು ಕೇಳುವುದು ನಡೆದಿದೆ. ಆಗ ಅವರು ಹೇಳಿದ ವಿವರವಾಗಲಿ, ಸಮಾಧಾನವಾಗಲಿ ಕೇಳಿದ ನಂತರ ಆಗ ಅರ್ಥವಾಗಿದೆ. ಭಗವದ್ಗೀತೆ ನನಗೇ ಅಲ್ಲ, ನನಗಿಂತ ದೊಡ್ಡವರಾದ ಸ್ವಾಮಿಗಳಿಗೂ, ಜ್ಞಾನಿಗಳಿಗೂ ಸಹ ಅರ್ಥವಾಗಿಲ್ಲವೆಂದೇ ತಿಳಿದುಹೋಗಿದೆ. ಸಾಧಾರಣ ಮನುಷ್ಯನಾದ ನನಗೆ ಶೇ. ಹತ್ತರಷ್ಟಾದರೂ ಅರ್ಥವಾಗಿದೆ. ನನಗಿಂತ ದೊಡ್ಡದಾಗಿ ಕಾಣಿಸುವವರಿಗಾಗಲೀ, ದೊಡ್ಡ ಜ್ಞಾನಿಗಳೆಂದು ಹೆಸರು ಹೊಂದಿದವರಿಗಾಗಲೀ ಕೇವಲ ಹತ್ತರಷ್ಟು ಸಹ ಅರ್ಥವಾಗಿಲ್ಲವೆಂದು ತಿಳಿದು ನಾನು ಆಶ್ಚರ್ಯಪಟ್ಟೆನು. ಎಷ್ಟೋ ಮಂದಿ ಸ್ವಾಮೀಜೀಗಳೆಂದು ಹೆಸರು ಇಟ್ಟುಕೊಂಡು ಗುರುಗಳಾಗಿದ್ದು ಗೀತೆಯನ್ನು ಬೋಧಿಸುವವರಿಗೇ ಕೇವಲ ಶೇಕಡ ಎರಡರಷ್ಟು ಸಹ ತಿಳಿಯದಿರುವಾಗ, ಅವರ ಹತ್ತಿರ ಕೇಳಿ ತಿಳಿದುಕೊಳ್ಳುವವರಿಗೆ ಅದಕ್ಕಿಂತ ದೊಡ್ಡದಾಗಿ ತಿಳಿಯುವುದಕ್ಕೆ ಅವಕಾಶವೇ ಇಲ್ಲವೆನಿಸಿತು. ನಾನು ಮೊದಲು ಎಷ್ಟು ಜನರನ್ನು ಕೇಳಿದರೂ ತಿರುಗಿ ಪ್ರಶ್ನೆ ಬಾರದ ಸಮಾಧಾನ ಸಿಗಲಿಲ್ಲ. ಯಾರು ಹೇಳಿದರೂ ಅದರಲ್ಲಿ ಕೊನೆಗೆ ಪ್ರಶ್ನೆ ಉಳಿದುಹೋಗಿ ಉತ್ತರ ದೊರಕುತ್ತಿರಲಿಲ್ಲ. ಆಗ ಅಲ್ಲಿಯವರೆಗು ನನಗೆ ಅರ್ಥವಾದ ಶೇಕಡ ಹತ್ತರಷ್ಟು ಭಗವದ್ಗೀತೆ ಪ್ರಕಾರ ಶರೀರದ ಒಳಗೆ ಶರೀರಕ್ಕೆ

ಅಧಿಪತಿಯಾಗಿರುವವನೇ ನಿಜವಾದ ಸಮಾಧಾನ ಹೇಳಬಲ್ಲನೆಂದು ಪ್ರತಿ ಪ್ರಶ್ನೆಯನ್ನು ಒಳಗೇ ಕೇಳುತ್ತಿದ್ದೆನು. ನನ್ನ ಮೆದುಳಿನಲ್ಲಿ ಬಂದ ಸಂಶಯಕ್ಕೆ ಅಲ್ಲೇ ಉತ್ತರ ಸಿಗುತ್ತಿತ್ತು. ಆದರೆ ಈಗ ಕೇಳಿದ ಪ್ರಶ್ನೆಗೆ ಕೂಡಲೇ ಉತ್ತರ ಸಿಗುತ್ತಿರಲಿಲ್ಲ. ನಂತರ ಯಾವಾಗಲೋ ಸಿಗುತ್ತಿತ್ತು ಒಳಗಿರುವ ಆತ್ಮ ನನ್ನ ಪ್ರಶ್ನೆಗೆ ಉತ್ತರ ತಿಳಿಸಿದಂತಲ್ಲದೇ, ಆ ಉತ್ತರ ಸ್ವತಃ ನನಗೇ ಬಂದಿದೆ ಎನಿಸುತ್ತಿತ್ತು. ಮೊದಲು ಭಗವದ್ಗೀತೆಯಲ್ಲಿ ನನಗೆ ಅರ್ಥವಾದ ಶೇಕಡ ಹತ್ತರಷ್ಟು ಜ್ಞಾನದಿಂದ ಬಂದಿರುವ ಉತ್ತರ ಆತ್ಮ ತಿಳಿಸಿರುವುದಾದರೂ, ಆತ್ಮ ಹೊರಬೀಳದೇ ಉತ್ತರ ನನಗೇ ಬಂದಿರುವಹಾಗೆ ನನ್ನನ್ನು ಆತ್ಮವೇ ಭ್ರಮಿಸುವಂತೆ ಮಾಡುತ್ತಿದೆಯೆಂದು ತಿಳಿದುಹೋಗಿದೆ. ಆಗಿನಿಂದ ಆತ್ಮ ತಿಳಿಸಿದ ಪ್ರತಿ ವಿಷಯವನ್ನು ಜಾಗ್ರತೆಯಿಂದ (ಜ್ಞಾಪಕದಿಂದ) ಗಮನಿಸುತ್ತಿದ್ದೆನು.

ಆಗಿನಿಂದ ಅಸಲಾದ ಆಧ್ಯಾತ್ಮಿಕವೆಂದರೆ ಏನೋ ತಿಳಿದುಹೋಗಿದೆ. ನಾನಿರುವ ಶರೀರದಲ್ಲಿನ ಆತ್ಮ ಕೂಡಾ ನನ್ನನ್ನು ಮೋಸಮಾಡದೆ ಎಲ್ಲಾ ಆತ್ಮೇ ತಿಳಿಸುವಹಾಗೇ ಅರ್ಥವಾಗುತ್ತಿತ್ತು. ಆ ನಂತರ ಭಗವದ್ಗೀತೆ ಶೇಕಡ ನೂರರಷ್ಟು ಅರ್ಥವಾಗಿದೆ. ಇದೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ, ಆತ್ಮ ತನ್ನ ಇರುವಿಕೆಯನ್ನು ಯಾರೂ ಗುರುತಿಸದ ಹಾಗೆ ಎಲ್ಲರನ್ನೂ ಮೋಸ ಮಾಡಬಲ್ಲದು. ಆದ್ದರಿಂದ ನೀವು ಕೂಡಾ ಆತ್ಮ ವಿಷಯದಲ್ಲಿ ಮೋಸಹೋಗದಂತಿರುವುದಕ್ಕೆ ಹೇಳುತ್ತಿದ್ದೇನೆ. ಭಗವದ್ಗೀತೆಯನ್ನು ಆತ್ಮದಿಂದ ಪೂರ್ತಿಯಾಗಿ ತಿಳಿಯುವುದಕ್ಕೆ ಸ್ವಲ್ಪ ಕಾಲ ಬೇಕಾಗಿದೆ. ನನಗೆ ಅನುಭವವಿದೆ ಆದ್ದರಿಂದ ಹೆಂಗಸರಿಗೆ, ಗಂಡಸರಿಗೆ ಯಾವ ಗುಣಗಳು ಹೆಚ್ಚಿನ ಪ್ರಭಾವವಿದೆಯೋ ಹೇಳಿದಾಗ, ಯಾರಿಗೂ ತಿಳಿಯದ ಗುಣಗಳ ವಿಷಯಗಳು ನಿನಗೆ ಹೇಗೆ ತಿಳಿದಿದೆಯೆಂದು ಇತರರು ಪ್ರಶ್ನಿಸಿದಾಗ ನನಗೆ ಆತ್ಮನಿಂದ ತಿಳಿದಿದೆಯೆಂದು ಹೇಳಿದ್ದೇವೆ. ನನಗೆ ಒಬ್ಬನಿಗೇ ಅಲ್ಲ, ಕೇಳಿದರೇ ನಿನಗೂ ಸಹ ಹೇಳಬಲ್ಲದೆಂದು ಅಲ್ಲಿ ಹೇಳಿದ್ದೇನೆ. ಎಲ್ಲರೂ ಶರೀರದಲ್ಲಿ ತಾವು ಹೊರತು ಬೇರೆ ಯಾರೂ ಇಲ್ಲವೆಂದು ಅಂದುಕೊಳ್ಳುತ್ತಿದ್ದಾರೆ. ನಾವೇ ಮಾತನಾಡುತ್ತಿದ್ದೇವೆಂದು, ಎಲ್ಲಾ ನಮ್ಮ ಬುದ್ಧಿವಂತಿಕೆಯೆಂದು ಅಂದುಕೊಳ್ಳುತ್ತಾ ತನ್ನನ್ನು ತಾನು ದೊಡ್ಡದಾಗಿ ಊಹಿಸಿಕೊಳ್ಳುವುದು ನಡೆಯುತ್ತಿದೆ.

ಆದರೆ ಶರೀರವಿರುವ ಎಲ್ಲರನ್ನೂ ಆತ್ಮೆವೇ ನಡೆಸುತ್ತಿದೆಯೆಂದೂ, ಶರೀರದಲ್ಲಿ ಅಧಿಪತಿಯಾಗಿರುವುದು ಆತ್ಮೇಯೆಂದು, ಜೀವಿಯಾದವನು ಅಲ್ಲವೆಂದು ತಿಳಿಯದೆ, ನಡೆಯುವ ಕೆಲಸಗಳೆಲ್ಲವನ್ನು ತಾನೇ ಮಾಡುವಹಾಗೆ ಮನುಷ್ಯ (ಜೀವಿಯು) ಅಂದುಕೊಂಡು ಮೋಸಹೋಗುವುದು ನಡೆಯುತ್ತಿದೆ. ಎಲ್ಲರೂ ಎಲ್ಲಾದರೆ ಮೋಸಹೋಗುತ್ತಿದ್ದಾರೋ, ನಾನು ಅಲ್ಲಿ ಮೋಸಹೋಗುತ್ತಿಲ್ಲ. ಆದ್ದರಿಂದ ನನಗೆ ಏನೂ ತಿಳಿಯದೆಂದು, ತಿಳಿದುಕೊಳ್ಳಬೇಕೆಂಬ ಶ್ರದ್ಧೆ ನನ್ನಲ್ಲಿ ಉಂಟಾದಾಗಲೆಲ್ಲ ಆತ್ಮ ಸವಿವರವಾಗಿ ತಿಳಿಸುತಿತ್ತು. ಆ ವಿಧವಾಗಿ ಭಗವದ್ಗೀತೆ ಯನ್ನು ಸಂಪೂರ್ಣವಾಗಿ ತಿಳಿದಿದ್ದೇನೆ. ನಂತರ ಬೈಬಿಲ್ ಗ್ರಂಥದಲ್ಲಿನ ವಿವರವನ್ನು ತಿಳಿದುಕೊಂಡಿದ್ದೇನೆ. ಆ ನಂತರ ಅಂತಿಮ ಗ್ರಂಥವೆಂದು ಹೆಸರು ಹೊಂದಿದ ಖುರ್‌ಆನ್ ಗ್ರಂಥವನ್ನು ಕುರಿತು ಆತ್ಮದಿಂದಲೇ ತಿಳಿದಿದ್ದೇನೆ. ಆತ್ಮ ತಿಳಿಸಿದ ವಿಧಾನದ ಪ್ರಕಾರ ಹಿಂದುಗಳಿಗೆ ಭಗವದ್ಗೀತೆ, ಕ್ರೈಸ್ತವರಿಗೆ ಬೈಬಿಲ್ ಗ್ರಂಥ, ಮುಸ್ಲಿಮ್‌ರಿಗೆ ಖುರ್‌ಆನ್ ಗ್ರಂಥ ಅರ್ಥವಾಗಿಲ್ಲವೆಂದು ನನಗೆ ತಿಳಿದಿದೆ. ಇಲ್ಲಿ ನಾನು ಹೇಳುವುದು ಆತ್ಮ ತಿಳಿಸಿದ ವಿಧಾನದ ಪ್ರಕಾರವೆಂದಿದ್ದೇನಾಗಲೀ, ಅವರಿಗೆ ತಿಳಿದ ಪ್ರಕಾರ ತಿಳಿದಿಲ್ಲವೆಂದು ನಾನು ಹೇಳಲಿಲ್ಲ. ಹಿಂದೂಗಳಲ್ಲಿ ಅವರ ಬೋಧಕರು ಹೇಳಿದಹಾಗೆ ಅವರಿಗೆ ಅರ್ಥವಾಗಿದೆ. ಹಾಗೇ ಬೈಬಿಲ್ ಕ್ರೈಸ್ತವರಿಗೆ ಅವರ ಬುದ್ಧಿ ಪ್ರಕಾರವೂ, ಅವರ ಬೋಧಕರು ಹೇಳಿದಹಾಗೆ ಅರ್ಥವಾಗುವುದು ನಡೆದಿದೆ. ಅದೇ ವಿಧವಾಗಿ ಇಸ್ಲಾಮ್‌ನ್ನು ಅನುಸರಿಸುವ ಮುಸ್ಲಿಮ್‌ರಿಗೂ ಅವರ ಹಿರಿಯರು ಹೇಳಿದಹಾಗೆ ಅವರು ಅರ್ಥ ಮಾಡಿಕೊಂಡಿದ್ದಾರೆ. ಮೂರು ಮತಗಳವರೂ ಮೂರು ದೈವ ಗ್ರಂಥಗಳಿಂದ ಅವರವರ ಸಾಮರ್ಥ್ಯವಿದ್ದಷ್ಟು ಅರ್ಥಮಾಡಿಕೊಂಡಿದ್ದಾರೆ. ಎಲ್ಲಾ ಅರ್ಥವಾಗದೇ ಹೋದರೂ ಸ್ವಲ್ಪಕ್ಕೆ ಸ್ವಲ್ಪವಾದರೂ ತಿಳಿದುಕೊಂಡಿದ್ದಾರೆ. ಹಾಗೆ ಸ್ವಲ್ಪಮಟ್ಟಿಗಾದರೂ ತಿಳಿದುಕೊಳ್ಳುವುದು ಸಂತೋಷಿಸಬೇಕಾದ ವಿಷಯವೇ.

ಎಲ್ಲರೂ ಅವರವರ ಗ್ರಂಥಗಳನ್ನು ತಿಳಿದರೂ, ಅವರು ತಿಳಿದಿರುವುದು ದೇವರಿಗೆ ಸಂಬಂಧಿಸಿದ ಜ್ಞಾನವೇ ಆದರೂ, ಒಂದು ಮತದವರು ಮತ್ತೊಂದು ಮತದಲ್ಲಿನ ಗ್ರಂಥವನ್ನು ಒಪ್ಪಿಕೊಳ್ಳದೇ ಹೋಗುವುದು, ಉಳಿದ ಗ್ರಂಥಗಳಿಗಿಂತ

ನಮ್ಮ ಗ್ರಂಥವೇ ದೊಡ್ಡದೆಂದೂ, ಉಳಿದ ಮತಗಳಿಗಿಂತ ನಮ್ಮ ಮತವೇ ದೊಡ್ಡದೆಂದೂ, ಉಳಿದ ಮತಗಳಲ್ಲಿ ಹೇಳಿಕೊಳ್ಳುವ ದೇವರಿಗಿಂತ ನಮ್ಮ ಮತದಲ್ಲಿ ಹೇಳಲಾಗಿರುವ ದೇವರೇ ದೊಡ್ಡವನೆಂದೂ ಅವರ ಮನಸ್ಸಿನಲ್ಲಿ ಅಂದುಕೊಳ್ಳುವುದೇ ಅಲ್ಲದೇ, ಅದೇ ಉದ್ದೇಶವನ್ನೇ ಹೊರಗೆ ವ್ಯಕ್ತಪಡಿಸುತ್ತಿದ್ದಾರೆ. ಹಾಗೆ ಒಂದು ಮತದವರು ಮತ್ತೊಂದು ಮತವನ್ನು ಕಡಿಮೆ ಮಾಡಿ ಮಾತನಾಡುವುದು ನಡೆಯುತ್ತಿದೆ. ಯಾರಿಗೆ ಅವರು ನಮ್ಮ ಮತ ದೊಡ್ಡದು ಅಂದುಕೊಳ್ಳುವುದರಿಂದ ಮನುಷ್ಯರಲ್ಲಿ ಮತ ದ್ವೇಷಗಳು ಆರಂಭವಾಗಿವೆ. ಮತದ್ವೇಷಗಳು ಕೊನೆಗೆ ಮತ ಘರ್ಷಣೆಗಳಾಗಿ ತಯಾರಾಗಿವೆ. ಈ ದಿನ ಒಂದು ಬಾಂಬು ಸ್ಫೋಟಗೊಂಡಿದೆಯೆಂದರೆ ಅದರ ಹಿಂದೆ ಮತ ದ್ವೇಷವಾಗಲಿ, ಮತದಲ್ಲಿನ ಮತ್ತೊಂದು ವರ್ಗದ ಮೇಲೆ ದ್ವೇಷವಾಗಲಿ ಇರುತ್ತದೆ. ಹಾಗೇ ಈ ದಿನ ಒಂದು ದೇಶ ಮತ್ತೊಂದು ದೇಶದ ಮೇಲೆ ದಾಳಿಗೆ ಸಿದ್ಧವಾಗುತ್ತಿದೆಯೆಂದರೂ, ಅಥವಾ ದಾಳಿಮಾಡಿದರೂ ಅದರ ಹಿಂದೆ ಮುಖ್ಯವಾಗಿ ಮತದ್ವೇಷವೇ ಇರುತ್ತದೆ. ಅಮೆರಿಕಾ ಕ್ರೈಸ್ತವ ದೇಶವಾದ್ದರಿಂದ ಮುಸ್ಲೀಮ್ ದೇಶಗಳ ಮೇಲೆ ದಾಳಿ ಮಾಡುವುದರ ಹಿಂದೆ ಏನಿದೆಯೆಂದು ಎಲ್ಲರಿಗೂ ತಿಳಿದ ವಿಷಯವೇ. ಹಾಗೇ ಒಂದು ಮುಸ್ಲೀಮ್ ದೇಶ ಅಮೆರಿಕಾ ಮೇಲೆ ದಾಳಿ ಮಾಡಿದೆಯೆಂದರೆ ಅದಕ್ಕೆ ಕಾರಣ ಏನೋ ಅದೂ ಸಹ ತಿಳಿದ ವಿಷಯವೇ. ಎಲ್ಲ ಮತ ಗ್ರಂಥಗಳು ಒಂದೇ ದೇವರನ್ನು ಕುರಿತು ಹೇಳಿದಾಗ, ಎಲ್ಲ ಮತಗಳ ಮನುಷ್ಯರನ್ನು ಒಂದೇ ದೇವರು ಸೃಷ್ಟಿಸಿದಾಗ ಅವರ ಮಧ್ಯದಲ್ಲಿ ಘರ್ಷಣೆಗಳು, ದ್ವೇಷಗಳು ಏಕೆ ಬರುತ್ತಿವೆಯೆಂದು ಆಲೋಚಿಸಿ ನೋಡಿದರೆ, ಅವರಿಗೆ ಅವರವರ ಗ್ರಂಥಗಳಿಂದ ಬೇರೆ ಬೇರೆ ಭಾವಗಳು ಅರ್ಥವಾಗಿವೆಯೆಂದು ತಿಳಿಯುತ್ತಿದೆ. ಹಾಗೆ ಅವರಿಗೆ ಬೇರೆ ಬೇರೆ ವಿಧಗಳಾಗಿ ಪರಸ್ಪರ ವಿರುದ್ಧವಾಗಿ ಏಕೆ ಅರ್ಥವಾಗಿದೆಯೆಂದು ನೋಡಿದರೆ ಮನುಷ್ಯರು ಸ್ವತಃವಾಗಿ ಅರ್ಥ ಮಾಡಿಕೊಳ್ಳುವುದರಿಂದ ಅವರ ಗುಣಗಳನ್ನನುಸರಿಸಿ, ಅವರವರ ಭಾವಗಳನ್ನನುಸರಿಸಿ ಅವರಿಗೆ ಬೇರೆ ಬೇರೆಯಾಗಿ ಅರ್ಥವಾಗಿರುವುದರಿಂದ ಹಾಗೆ ದ್ವೇಷಗಳು ಏರ್ಪಟ್ಟಿವೆಯೆಂದು ಹೇಳಬಹುದು.

ನಾನು ಮೊದಲು ಭಗವದ್ಗೀತೆಯನ್ನು, ನಂತರ ಬೈಬಿಲ್, ಖುರ್‌ಆನ್ ಓದಿದ್ದೇನೆಂದು ಹೇಳಿದ್ದೇನಲ್ಲ! ನಾನು ಓದಿದರೂ ಮೊದಲು ಭಗವದ್ಗೀತೆಯಿಂದ ಕೊನೆಯ ಖುರ್‌ಆನ್‌ವರೆಗು ಎಷ್ಟೋ ಪ್ರಶ್ನೆಗಳನ್ನು ಪ್ರಶ್ನಿಸಿ ಆತ್ಮ ತಿಳಿಸಿದ ಉತ್ತರವನ್ನು ತೆಗೆದುಕೊಳ್ಳುವುದರಿಂದ ಮೂರು ಗ್ರಂಥಗಳು ಸುಲಭವಾಗಿ ಅರ್ಥವಾಗಿವೆ. ಆದರೇ ಎಲ್ಲರಿಗೂ ಅರ್ಥವಾದಹಾಗಲ್ಲದೆ, ಮೂರು ಗ್ರಂಥಗಳು ಒಂದೇ ದೇವರನ್ನು ಕುರಿತು ಹೇಳಿರುವವಾಗಿ ಅರ್ಥವಾಗಿದೆ. ಮೂರು ಗ್ರಂಥಗಳು ಸರ್ವ ಮಾನವರಿಗೂ ಸಂಬಂಧಿಸಿದವುಗಳಾಗಿ ಅರ್ಥವಾಗಿವೆ. ಒಂದು ಗ್ರಂಥದಲ್ಲಿನ ಜ್ಞಾನ ವಾಕ್ಯಗಳು ಮತ್ತೊಂದು ಗ್ರಂಥದಲ್ಲಿನ ವಾಕ್ಯಗಳನ್ನು ಸಮರ್ಥಿಸುತ್ತಾ ಒಂದನ್ನೊಂದು ಧೃಡೀಕರಿಸಿಕೊಳ್ಳುವ ಹಾಗೆ ತಿಳಿದುಹೋಗಿದೆ. ಒಂದೇ ಕುಟುಂಬದಲ್ಲಿರುವವರು ಒಬ್ಬರ ಹೋಲಿಕೆಗಳು ಮತ್ತೊಬ್ಬರು ಹೊಂದಿರುವ ಹಾಗೆ, ಮೂರು ಗ್ರಂಥಗಳೊಳಗಿನ ವಿಷಯಗಳು ಒಂದಕ್ಕೊಂದು ವಿರುದ್ಧವಾಗಿ ಇಲ್ಲದಂತೆ, ಒಂದಕ್ಕೊಂದು ಹತ್ತಿರ ಹೋಲಿಕೆಗಳು ಹೊಂದಿರುವ ಹಾಗೆ ತಿಳಿದಿದೆ. ಒಂದು ಗ್ರಂಥದಲ್ಲಿನ ಪ್ರಶ್ನೆಗೆ ನಾನು ಉತ್ತರವನ್ನು ಕೊಡುತ್ತೇನೆನ್ನುವಹಾಗೆ ಮತ್ತೊಂದು ಗ್ರಂಥದಲ್ಲಿ ಉತ್ತರ ಸಿಗುತ್ತಾ, ಮೂರು ಗ್ರಂಥಗಳು ಒಂದಕ್ಕೊಂದು ಸಾಕ್ಷಿಯಾಗಿರುವಂತೆ ತಿಳಿದುಹೋಗಿದೆ. ಮೂರು ಗ್ರಂಥಗಳಲ್ಲಿ ಮತ ಎನ್ನುವ ಪದವೇ ಇಲ್ಲ. ಇದು ಇಂತಹ ಮತಗ್ರಂಥವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಮೂರು ಗ್ರಂಥಗಳು ಎಲ್ಲರನ್ನೂ ಸೃಷ್ಟಿಸಿದ, ಎಲ್ಲರಿಗೂ ಅಧಿಪತಿಯಾದ ಒಂದೇ ದೇವರನ್ನು ಕುರಿತು ಹೇಳುತ್ತಿವೆ ಹೊರತು ಯಾವ ಮಾತ್ರ ಬೇರೆ ಇಲ್ಲ. ಪ್ರಾಂತವನ್ನು ಅನುಸರಿಸಿ, ಪ್ರಾಂತೀಯ ಭಾಷೆಯನ್ನನುಸರಿಸಿ ಬೇರೆಬೇರೆ ದೇಶಗಳಲ್ಲಿ ಹೇಳಲಾಗಿರುವ ಮೂರು ಗ್ರಂಥಗಳು, ಬೇರೆ ಬೇರೆ ಭಾಷೆಗಳಲ್ಲಿ ಹೇಳಲಾಗಿವೆ. ಭಾಷೆಗಳು ಬೇರೆಯಾದರೂ ಮೂರು ಗ್ರಂಥಗಳಲ್ಲಿನ ಸೂತ್ರಗಳು, ಧರ್ಮಗಳು ಎಲ್ಲವೂ ಒಂದೇ ಭಾವದಿಂದ ಕೂಡಿಕೊಂಡಿವೆ. ಭಗವದ್ಗೀತೆ ಭಾರತದೇಶದಲ್ಲಿ ದ್ವಾಪರಯುಗ ಅಂತ್ಯದಲ್ಲಿ, ಇಲ್ಲಿಗೆ ಸುಮಾರು 5000 ವರ್ಷಗಳ ಪೂರ್ವ ಆದಿನ ಉತ್ತರ ಭಾರತದೇಶದಲ್ಲಿ

ಜಾರಿಗೆಯಲ್ಲಿದ್ದ ಹಿಂದೀ ಭಾಷೆಯಲ್ಲಿ ಕೃಷ್ಣನಿಂದ ಅರ್ಜುನನಿಗೆ ಹೇಳಲಾಗಿದೆ. ಹಾಗೆ ಹಿಂದಿಯಲ್ಲಿ ಹೇಳಿದ ಜ್ಞಾನವನ್ನು ಅರ್ಜುನನು ವ್ಯಾಸನಿಗೆ ತಿಳಿಸಿದಾಗ, ವ್ಯಾಸನು ತಾನು ಕೇಳಿದ ಜ್ಞಾನಕ್ಕೆ ಭಗವದ್ಗೀತೆಯೆಂದು ಹೆಸರಿಟ್ಟು ಸಂಸ್ಕೃತ ಭಾಷೆಯಲ್ಲಿ ಬರೆದಿದ್ದಾನೆ. ಕಾಗದ ಲೇಖನಿ ಇಲ್ಲದ ಆ ದಿನಗಳಲ್ಲಿ ಅರಿದುಹೋಗದ ತಾಳೆ ಎಲೆಗಳಮೇಲೆ ಚೂಪಾಗಿರುವ ಕಬ್ಬಿಣ ಕಡ್ಡಿಯಿಂದ ಬರೆಯುವುದು ನಡೆದಿದೆ. ಆ ವಿಧವಾಗಿ ಕೃಷ್ಣನು ಹೇಳಿದ ಜ್ಞಾನ ಗ್ರಂಥರೂಪವಾಗಿ ಬದಲಾವಣೆ ಹೊಂದಿದೆ. ಶ್ರೀಕೃಷ್ಣನು ಹಿಂದಿಯಲ್ಲಿ ಹೇಳಿದರೆ, ಸಂಸ್ಕೃತದಲ್ಲಿ ಬರೆಯಲ್ಪಟ್ಟು ದೇವರ ಜ್ಞಾನ ಮೊಟ್ಟಮೊದಲು ಗ್ರಂಥರೂಪವಾಗಿದೆ. ಎಲ್ಲದಕ್ಕಿಂತ ಮೊದಲು ಗ್ರಂಥರೂಪವಾದ ದೈವಜ್ಞಾನಕ್ಕೆ ವ್ಯಾಸನೇ ಭಗವದ್ಗೀತೆಯೆಂದು ಹೆಸರು ಇಟ್ಟಿದ್ದಾನೆ. ಆದ್ದರಿಂದ **"ಪ್ರಥಮ ದೈವ ಗ್ರಂಥ ಭಗವದ್ಗೀತೆ"** ಎಂದು ಹೇಳಲಾಗಿದೆ.

ಭಗವದ್ಗೀತೆಯಾಗಿ ಬರೆಯಲಾಗಿರುವ ತಾಳೆ ಎಲೆಗಳನ್ನು ಹುಳಗಳು ತಿನ್ನದಂತೆ, ಎಲೆಗಳು ಶಿಥಿಲವಾಗದೆ ಮೃದುವಾಗಿ ಇರುವುದಕ್ಕೆ ಕ್ರಿಮಿ ಸಂಹಾರಿಣಿಯಾಗಿ ಕೆಲಸಮಾಡುವ ಹರಿಶಿಣವನ್ನು ಹರಳೆಣ್ಣೆಯಲ್ಲಿ ಬೆರೆಸಿ ಎಲೆಗಳಿಗೆ ಬಳಿದು ಇಡುತ್ತಿದ್ದರು. ಆ ವಿಧವಾಗಿ ಹರಳೆಣ್ಣೆ ಹರಿಶಿಣದಿಂದಿರುವ ತಾಳೆ ಎಲೆಗಳು ಸಾವಿರದಿಂದ ಸಾವಿರದ ಐದು ನೂರು ವರ್ಷಗಳವರೆಗು ಇರಬಲ್ಲವು. ನಂತರ ಅವುಗಳನ್ನು ಹೊಸ ಎಲೆಗಳ ಮೇಲೆ ಬರೆದು ಹರಿಶಿಣ ಎಣ್ಣೆ ಹಚ್ಚಿ ಇಡಬೇಕು. ಇಲ್ಲಿಗೆ ಐದು ಸಾವಿರ ವರ್ಷಗಳಿಗೆ ಮೊದಲು ವ್ಯಾಸನಿಂದ ಬರೆಯಲಾಗಿರುವ ಭಗವದ್ಗೀತೆ ಕಾಲ ಕ್ರಮದಲ್ಲಿ ಪೂರ್ತಿ ಶಿಥಿಲವಾಗದಂತಿರುವುದಕ್ಕೆ ಎರಡು ಅಥವಾ ಮೂರು ಬಾರಿ ಇತರರಿಂದ ತಾಳೆ ಎಲೆಗಳಮೇಲೆ ಬರೆಯಲಾಗಿದೆ. ಆ ವಿಧವಾಗಿ ಐದುಸಾವಿರ ವರ್ಷಗಳವರೆಗು ಅಚ್ಚಳಿಯದೆ ಇರುವ ಭಗವದ್ಗೀತೆಯನ್ನು ನಂತರ ಕಾಗದದ ಮೇಲೆ ಬರೆಯಲಾಗಿ ಮುದ್ರಿಸಲಾಗಿದೆ. ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನ ಕೃಷ್ಣನಿಂದ ಅರ್ಜುನನಿಗೆ ಐದುಸಾವಿರ ವರ್ಷಗಳ ಪೂರ್ವದಲ್ಲಿ ಹೇಳಿರುವಾಗ ಅದೇ ಮೊದಲ ದೈವಗ್ರಂಥವಾಗಿ ವ್ಯಾಸನಿಂದ ಸಂಸ್ಕೃತದಲ್ಲಿ ರಚಿಸಲಾಗಿ ನಮ್ಮವರೆಗು ಬಂದಿದೆ. ಭಗವದ್ಗೀತೆ

ಮೂಲ ರಚನೆ ಸಂಸ್ಕೃತ ಭಾಷೆಯಲ್ಲಿ ಶ್ಲೋಕಗಳ ರೂಪವಾಗಿದ್ದರೂ, ಸಂಸ್ಕೃತ ಭಾಷೆ ತಿಳಿದವರು ಅದನ್ನು ಇತರ ಭಾಷೆಗಳಲ್ಲಿ ಅನುವದಿಸಿ ಬರೆದುಕೊಂಡಾಗ, ಎಲ್ಲ ಪ್ರಾಂತದವರು ಎಲ್ಲ ಭಾಷೆಯವರೂ ಈ ದಿನ ಭಗವದ್ಗೀತೆಯನ್ನು ಓದುತ್ತಿದ್ದಾರೆ. ಈ ವಿಧವಾಗಿ ಪ್ರಥಮ ದೈವ ಗ್ರಂಥ ನಮ್ಮ ಹತ್ತಿರಕ್ಕೆ ಬಂದಿದೆ.

ಪ್ರಥಮ ದೈವ ಗ್ರಂಥವಾಗಿ ಭಗವದ್ಗೀತೆ ತಯಾರಾದ ನಂತರ ಸುಮಾರು ಮೂರು ಸಾವಿರ ವರ್ಷಗಳಿಗೆ ಎರಡನೆ ದೈವ ಗ್ರಂಥವಾದ ಬೈಬಲ್ ತಯಾ ರಾಗಿದೆ. ಬೈಬಲ್ ಗ್ರಂಥಕ್ಕೆ ಎರಡನೇ ದೈವ ಗ್ರಂಥವಾಗಿ ಏಕೆ ಹೆಸರು ಬಂದಿರು ವುದು ನಂತರ ವಿವರಿಸಿಕೊಳ್ಳೋಣ. ಬೈಬಲ್ ಕುರಿತು ನನಗೆ ತಿಳಿದಮಟ್ಟಿಗೆ ಹೇಳಿಕೊಂಡರೆ ಈ ದಿನ ಬೈಬಲ್ ಗ್ರಂಥ ಸುಮಾರು 1400 ಭಾಷೆಗಳಲ್ಲಿ ಬರೆಯಲಾಗಿದೆ. ಹದಿನಾಲ್ಕು ನೂರು ಪ್ರಾಂತೀಯ ಭಾಷೆಗಳಲ್ಲಿ ಬರೆಯಲಾಗಿರುವು ದರಿಂದ ಈದಿನ ಪ್ರತಿ ಭಾಷೆಯಲ್ಲೂ ಬೈಬಲ್‌ನ್ನು ಓದಬಹುದು. ಮೊದಲು ಹೆಬ್ರೀ ಗ್ರೀಕು ಭಾಷೆಯಲ್ಲಿ ಬರೆಯಲಾಗಿರುವ ಬೈಬಲ್ ಈ ದಿನ ಪ್ರಪಂಚದಲ್ಲಿಯೇ ಅತ್ಯಧಿಕ ಭಾಷೆಗಳಲ್ಲಿ ತರ್ಜುಮೆ (ಅನುವಾದ) ಮಾಡಿ ಬರೆಯಲಾಗಿರುವ ಗ್ರಂಥವಾಗಿ ಇದೆ. ಈ ದಿನ ನಮ್ಮ ಮುಂದಿರುವ ಬೈಬಲ್ 66 ಭಾಗಗಳಾಗಿ ಇದ್ದೂ, ಒಂದೊಂದು ಭಾಗ ಒಂದೊಂದು ಹೆಸರಿಂದ ಕರೆಯಲಾಗುತ್ತಿದೆ. ಅವುಗಳನ್ನೇ ಅರವತ್ತಾರು ಸುವಾರ್ತೆಗಳಾಗಿ, ಅರವತ್ತಾರು ಪಾಠಗಳಾಗಿ ಕ್ರೈಸ್ತವರು ಹೇಳಿಕೊಳ್ಳುತ್ತಿದ್ದಾರೆ. ಅರವತ್ತಾರು ಭಾಗಗಳಾಗಿರುವ ಬೈಬಲ್‌ನ್ನು 39 ಭಾಗಗಳು ಹಳೆ ನಿಬಂಧನೆ ಎಂದೂ, 27 ಭಾಗಗಳನ್ನು ಹೊಸ ನಿಬಂಧನೆ ಎಂದೂ ಎರಡು ಹೆಸರುಗಳಿಂದ ಬರೆದಿಟ್ಟಿದ್ದಾರೆ. ಈ ದಿನ ಕ್ರೈಸ್ತವ ಮತವಾಗಿ ಹೇಳಿಕೊಳ್ಳು ವವರೆಲ್ಲರಿಗೂ ಅರವತ್ತಾರು ಭಾಗಗಳಾಗಿರುವ ಬೈಬಲ್ ಮಾರ್ಗದರ್ಶ ಕವಾಗಿ ಇದೆ. ಈದಿನ ಬೈಬಲ್‌ನ್ನು ಕಂಠಾಪಾಠಮಾಡಿ ವರಸೆ ಕ್ರಮದಲ್ಲಿ ಬಾಯಿಪಾಠವಾಗಿ ಹೇಳುವ ಜ್ಞಾಪಕಶಕ್ತಿ ಇರುವವರಿದ್ದರೂ, ಅವರಲ್ಲಿ ಜ್ಞಾನಶಕ್ತಿ ಮಾತ್ರ ರವೆಯಷ್ಟು ಸಹ ಇಲ್ಲವೆಂದೇ ಹೇಳಬಹುದು. ಈ ಮಾತನ್ನು ನಾನು ಮತ ದ್ವೇಷದಿಂದಾಗಲೀ, ಅಸೂಯದಿಂದಾಗಲೀ ಹೇಳುತ್ತಿಲ್ಲ. ಅಷ್ಟೊಂದು ಶ್ರಮಪಟ್ಟು ಗ್ರಂಥವೆಲ್ಲವನ್ನೂ

ಕಂಠಾಪಾಠವಾಗಿ ಹೇಳಿದರೂ, ಅವರಿಗೆ ದೇವರಿಂದ ರವೆಯಷ್ಟು ಸಹ ದೈವಿಕವಾದ ಲಾಭ ಏನೂ ಇಲ್ಲ. ಹಾಗೆ ಏಕಾಗಿದೆಯೆಂದು ಕೇಳಿದರೆ, ಅವರಿಗೆ ಬೈಬಲ್ ಗ್ರಂಥದಲ್ಲಿ ದೇವರು ಹೇಳಿರುವುದು ಯಾವುದೋ, ಮನುಷ್ಯರು ಹೇಳಿರುವುದು ಯಾವುದೋ ತಿಳಿಯದಂತೆ ಹೋಗುವುದೇ ಮುಖ್ಯಕಾರಣ ವೆನ್ನುತ್ತಿದ್ದೇನೆ.

ಇಲ್ಲಿ ನೀವು ಮತ್ತೊಂದು ಪ್ರಶ್ನೆಯನ್ನು ಕೇಳಬಹುದು. ಪ್ರಶ್ನೆ ಏನೆಂದರೆ! ಇದಕ್ಕೂ ಮೊದಲು ಬೈಬಲ್ ಹೆಸರು ಬರೆದಾಗ ನೀವೇ ಬೈಬಲ್‌ನ್ನು ಎರಡನೆ ದೈವ ಗ್ರಂಥವೆಂದು ಹೇಳಿದ್ದೀರ. ಆ ಮಾತನ್ನು ಬರೆದ ಸ್ವಲ್ಪ ಹೊತ್ತಿಗೇ ಬೈಬಲ್‌ನಲ್ಲಿ ದೇವರು ಹೇಳಿರುವುದ್ಯಾವುದೊ, ಮನುಷ್ಯರು ಹೇಳಿರುವುದ್ಯಾವುದೊ ಓದುವವರಿಗೆ ತಿಳಿಯದೆಂದು ಅನ್ನುತ್ತಿದ್ದೀರ. ದೈವ ಗ್ರಂಥವೆಂದು ಹೇಳಿದಾಗ ದೇವರು ಹೇಳಿರುವುದೇ ಇರುತ್ತದಾಗಲೀ, ಮನುಷ್ಯರು ಹೇಳಿರುವುದು ಹೇಗೆ ಇರುತ್ತದೆ? ಒಂದು ವೇಳೆ ಮನುಷ್ಯರು ಹೇಳಿದ ವಿಷಯಗಳು ಇದ್ದರೆ ನೀವೇಕೆ ಅದನ್ನು ಎರಡನೆಯ ದೈವ ಗ್ರಂಥವೆಂದಿದ್ದೀರ? ಎಂದು ಪ್ರಶ್ನಿಸಬಹುದು. ಈ ಪ್ರಶ್ನೆ ಸಮಂಜಸವಾದದ್ದೇ, ದೇವರು ಹೇಳಿದ ಜ್ಞಾನ ಮೊದಲು ಗ್ರಂಥ ರೂಪವಾಗಿರುವುದರಿಂದ ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವೆಂದು ಅಂದಿದ್ದೇವೆ. ಮೊದಲು ದೇವರು ಭಗವಂತನ ರೂಪದಿಂದ, ಶ್ರೀಕೃಷ್ಣನೆನ್ನುವ ಹೆಸರಿಂದ ಕಾಣಿಸುವ ಮನುಷ್ಯನಾಗಿ ಬಂದು ಭಾರತದೇಶದಲ್ಲಿ ತನ್ನ ಜ್ಞಾನ ಹೇಳುವುದು ನಡೆದಿದೆ. ಸೃಷ್ಟ್ಯಾದಿಯಲ್ಲಿ ವಾಣಿಯಿಂದ ದೇವರು ಹೇಳಿದ ಜ್ಞಾನವನ್ನು ಸೂರ್ಯನು ಕೇಳುವುದು ನಡೆದಿದೆ ಅಲ್ಲವೆ! ಆದ್ದರಿಂದ ಪ್ರಪಂಚದಲ್ಲಿ ಸೂರ್ಯನು ಮೊದಲು ದೈವ ಜ್ಞಾನವನ್ನು ತಿಳಿದವನಾಗಿದ್ದಾನೆ. ಪ್ರಪಂಚದಲ್ಲಿ ಮೊದಲನೆಯ ಜ್ಞಾನಿ ಆದ ಸೂರ್ಯನು ಭೂಮಿ ಮೇಲಿರುವ ಭಾರತದೇಶದಲ್ಲಿನ ಮನುವಿಗೆ ಜ್ಞಾನವನ್ನು ಹೇಳಿ ಪ್ರಪಂಚವೆಲ್ಲದಕ್ಕೂ ಸೂರ್ಯನು ಆದಿ ಗುರುವಾಗಿದ್ದಾನೆ. ಮೊದಲನೆಯ ಜ್ಞಾನಿ ಎಂದೂ, ಆದಿ ಗುರುವು ಎಂದೂ ಸೂರ್ಯನಿಗೆ ಹೆಸರು ಬರುವುದು ನಡೆದಿದೆ. ನಂತರ ಪ್ರಪಂಚದಲ್ಲಿ ಯಾರು

ಜ್ಞಾನಿಯಾದರೂ, ಯಾರು ಗುರುವಾದರೂ, ಅವರಿಗೆ ಸೂರ್ಯನನಂತರ ಸ್ಥಾನ ದಕ್ಕಿದೆಯೆಂದು ಹೇಳಬಹುದು. ಜ್ಞಾನದಲ್ಲಿಯೂ, ಗುರುತ್ವದಲ್ಲಿಯೂ ಮೊದಲನೆಯ ಸ್ಥಾನ ಸೂರ್ಯನಿಗೆ ದಕ್ಕಿದೆ. ಎಲ್ಲಾದರೆ ಸೂರ್ಯ ಗ್ರಹ ತೆರೆಮರೆಯಲ್ಲಿ ಕಾಣಿಸದೇ ಮನುವಿಗೆ ಜ್ಞಾನವನ್ನು ಹೇಳಿದೆಯೊ, ಅಲ್ಲೇ ದೇವರ ದೂತನಹಾಗೆ ಬಂದಿರುವ ಕೃಷ್ಣನು ದೇವರ ಸಮಾಚಾರವಾದ ದೈವ ಧರ್ಮಗಳನ್ನು ಅರ್ಜುನನಿಗೆ ಬೋಧಿಸಿ, ರಚನಾ ಸಾಮರ್ಥ್ಯವಿರುವ ವ್ಯಾಸನಿಗೆ ಅರ್ಜುನನಿಂದ ತನ್ನ ಜ್ಞಾನವನ್ನು ಸೇರುವಹಾಗೆ ಮಾಡಿದ್ದಾನೆ.

ನಾವು ಬೈಬಲ್‌ನ್ನು ಕುರಿತು ಕೇಳಿದರೆ ಭಗವದ್ಗೀತೆಯನ್ನು ಕುರಿತು ಹೇಳುತ್ತಿದ್ದಾನೇನು? ಎಂದು ಅಂದುಕೊಳ್ಳಬೇಡಿ. ಬೈಬಲ್ ಕುರಿತು ಹೇಳಬೇಕಾದ ಉತ್ತರಕ್ಕೋಸ್ಕರ ಭಗವದ್ಗೀತೆಯಿಂದ ಆರಂಭ ಮಾಡಬೇಕಾಗಿದೆ. ಆದ್ದರಿಂದ ಈಗ ಹೇಳುವ ಸಮಾಚಾರವನ್ನು ಜಾಗ್ರತೆಯಾಗಿ ಕೇಳಿ. ಅರ್ಜುನನಿಂದ ಕೃಷ್ಣನು ಹೇಳಿದ ಸಮಾಚಾರವೆಲ್ಲಾ ಕೇಳಿದ ನಂತರ ಅರ್ಜುನನಿಗಿಂತ ಚೆನ್ನಾಗಿ ವ್ಯಾಸನಿಗೆ ಕೃಷ್ಣನು ಹೇಳಿದ ಸಮಾಚಾರವೆಲ್ಲವೂ ಅರ್ಥವಾಗಿದೆ. ಆಗ ಕೂಡಲೇ ಆ ಸಮಾಚಾರವೆಲ್ಲವನ್ನೂ ಗ್ರಂಥರೂಪದಲ್ಲಿ ಬರೆದಿಡಬೇಕೆಂದುಕೊಂಡಿದ್ದಾನೆ. ಅದಕ್ಕೂ ಮೊದಲೇ ನಾಲ್ಕು ವೇದಗಳನ್ನೂ, ಹದಿನೆಂಟು ಪುರಾಣಗಳನ್ನೂ ಗ್ರಂಥಗಳಾಗಿ ಬರೆದ ವ್ಯಾಸನು, ಮಾಯೆ ಜ್ಞಾನಕ್ಕೆ ಚಿಹ್ನೆಯಾಗಿರುವವುಗಳನ್ನು ಬರೆದು ಕೆಟ್ಟ ಕಾರ್ಯವನ್ನು ಮಾಡಿದ್ದೇನೆಂದು ಕೃಷ್ಣನ ಸಮಾಚಾರ ತಿಳಿದುಕೊಂಡ ನಂತರ ಚಿಂತಿಸಿದನು. ಈಗ ಕೃಷ್ಣನು ಹೇಳಿದ ಸಮಾಚಾರವನ್ನು ಭಗವದ್ಗೀತೆ ಯಾಗಿ ಬರೆದು ಸ್ವಲ್ಪವಾದರೂ ಒಳ್ಳೆಯ ಕಾರ್ಯವನ್ನು ಮಾಡಬೇಕೆಂದು ಕೊಂಡಿದ್ದಾನೆ. ಕೂಡಲೇ ತನಗೆ ತಿಳಿದ ಸಮಾಚಾರ ಜ್ಞಾನವನ್ನು ಭಗವದ್ಗೀತೆ ಯೆನ್ನುವ ಹೆಸರಿನಿಂದ ಭದ್ರಪಡಿಸಿದನು. ಆ ವಿಧವಾಗಿ ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ಬೋಧಿಸಿದ ಜ್ಞಾನ, ನಂತರ ಶ್ರೀಕೃಷ್ಣಭಗವಾನ್ ನಿಂದ ಹೇಳಿದ ಜ್ಞಾನ ಪ್ರಥಮ ದೈವ ಗ್ರಂಥವಾಗಿ ತಯಾರಾಗಿದೆ. ಆ ವಿಧವಾಗಿ ತಯಾರಾದ ತಾಳೆ ಎಲೆಗಳ ಗ್ರಂಥ ಕಾಲಕ್ರಮದಲ್ಲಿ ಶಿಥಿಲವಾಗದಂತಿರುವುದಕ್ಕೆ ಇತರರಿಂದ ಪುನಃ ಎರಡು ಮೂರು ಬಾರಿ ಬರೆಯಲಾಗಿದೆ.

ಮೊದಲು ವ್ಯಾಸನು ಬರೆದ ಸಮಯದಲ್ಲಿ ಕೃಷ್ಣನು ಹೇಳಿದ ಸಮಾಚಾರವನ್ನು ಮಾತ್ರ ಭಗವದ್ಗೀತಾ ಗ್ರಂಥವಾಗಿ ವ್ಯಾಸನು ಬರೆದಿಟ್ಟಾಗ, ಅದು ಪೂರ್ತಿ ದೈವ ಗ್ರಂಥವಾಗಿ ಇತ್ತು. ನಂತರ ಅದನ್ನು ತಿರುಗಿ ಬರೆದವರು ಅವರಿಗೆ ಅನುಕೂಲವಾದ ಸ್ವಲ್ಪ ಸಮಾಚಾರವನ್ನು ಅದರಲ್ಲಿ ಬುದ್ಧಿವಂತಿಕೆಯಿಂದ ಸೇರಿಸಿ ಬರೆಯುವುದು ನಡೆದಿದೆ. ಆ ವಿಧವಾಗಿ ಭಗವದ್ಗೀತೆಯೊಳಗೆ ಮನುಷ್ಯರ ಸಮಾಚಾರ ಕೆಲವು ಶ್ಲೋಕಗಳ ರೂಪದಲ್ಲಿ ಸೇರಿಹೋಗಿದೆ. ಆ ದಿನ ತಮ್ಮ ಉದ್ದೇಶವನ್ನು ಶ್ಲೋಕಗಳ ರೂಪದಲ್ಲಿ ಯಾರೂ ಗುರುತಿಸದ ಹಾಗೆ ಬುದ್ಧಿವಂತಿಕೆ ಯಿಂದ ಕೆಲವರು ಭಗವದ್ಗೀತೆಯಲ್ಲಿ ಸೇರಿಸಿರುವುದರಿಂದ, ಆ ದಿನ ವ್ಯಾಸನು ಬರೆದ ಭಗವದ್ಗೀತೆ ಸ್ವಚ್ಛವಾದ ದೇವರ ಜ್ಞಾನದಿಂದ ತುಂಬಿರುತ್ತಿತ್ತು. ಈ ದಿನ ನಮ್ಮಮುಂದಿರುವ ಭಗವದ್ಗೀತೆ ಸ್ವಲ್ಪ ಮಾನವ ಕಾಲುಷ್ಯದಿಂದ ಕೂಡಿಕೊಂಡು ಇದೆಯೆಂದು ಹೇಳಬಹುದು. ದೇವರು ಹೇಳಿದ ಜ್ಞಾನಕ್ಕೆ ಶೇಕಡ ಹತ್ತರಷ್ಟು ಮನುಷ್ಯರ ಕಲ್ಪಿತ ಜ್ಞಾನ ಭಗವದ್ಗೀತೆಯಲ್ಲಿ ಇದೆ. ಅಂತಹ ಭಗವದ್ಗೀತೆಯನ್ನು ಕೆಲವರು ಓದುವುದು ನಡೆದಿದೆ, ನಡೆಯುತ್ತಿದೆ. ಆದರೇ ಮಾಯಾ ಪ್ರಭಾವದಿಂದ ಭಗವದ್ಗೀತೆಯಲ್ಲಿ ದೇವರು ಹೇಳಿದ ಶೇಕಡ ತೊಂಬತ್ತರಷ್ಟು ಜ್ಞಾನವನ್ನು ಬಿಟ್ಟು ಹತ್ತರಷ್ಟಿರುವ ಮನುಷ್ಯರು ಹೇಳಿದ ಮಾತುಗಳ ಕಡೆ ಪ್ರಜೆಗಳು ಹೋಗುವುದು ನಡೆಯುತ್ತಿದೆ. ದೇವರು ಹೇಳಿದ ಜ್ಞಾನ ಎಷ್ಟೋ ಸ್ವಚ್ಛವಾಗಿದ್ದರೂ, ಅದನ್ನು ಗ್ರಹಿಸಲಾರದ ಮನುಷ್ಯರು ಕಲ್ಪಿತ ಜ್ಞಾನವನ್ನು ಗ್ರಹಿಸಿಕೊಳ್ಳುತ್ತಿದ್ದಾರೆ. ಇದನ್ನನುಸರಿಸಿ ಭಗವದ್ಗೀತೆಯಲ್ಲಿ ಸೇರಿಹೋದ ಮಾನವ ಕಲ್ಪಿತ ಶ್ಲೋಕಗಳನ್ನು ಕಂಡುಕೊಳ್ಳದೆ ಎಲ್ಲರೂ ಮೋಸಹೋಗುತ್ತಿದ್ದಾರೆಂದು ತಿಳಿಯುತ್ತಿದೆ.

ಈ ವಿಧವಾಗಿ ಯಾವಾಗಲೋ ಭಗವದ್ಗೀತೆಯಲ್ಲಿ ಮಾನವ ವಾಸನೆ ಸೇರಿಹೋದರೂ, ಓದುವವರು ಮನುಷ್ಯರೇ ಆಗಿರುವುದರಿಂದ ತಮ್ಮ ವಾಸನೆಯನ್ನು ತಾವು ಗುರುತಿಸಲಾರದೆ ಭಗವದ್ಗೀತೆಯಲ್ಲಿರುವುದೆಲ್ಲಾ ದೈವ ಜ್ಞಾನವೇ ಅಂದುಕೊಂಡಿದ್ದಾರೆ. ಮಾನವ ಜಾತಿ ಕಲ್ಪಿತಗಳು ಜನಮೇಜಯನ ಕಾಲದಲ್ಲಿಯೇ, ವ್ಯಾಸನು ಸತ್ತುಹೋದ ಸ್ವಲ್ಪ ಕಾಲಕ್ಕೇ ಭಗವದ್ಗೀತೆಯಲ್ಲಿ

ಸೇರಿಹೋಗಿವೆ. ಆದರೂ ಅವುಗಳನ್ನು ಇಲ್ಲಿಯವರೆಗು ಯಾರೂ ಗುರುತಿ ಸಲಿಲ್ಲವೆಂದು ಹೇಳಬಹುದು. ಇಲ್ಲಿ ಒಂದು ಉದಾಹರಣೆಯನ್ನು ಹೇಳುತ್ತಿದ್ದೇವೆ ನೋಡಿರಿ. ಒಂದು ಊರಿನಲ್ಲಿ ಇಬ್ಬರು ಕಳ್ಳರು ತಾವು ಕಳ್ಳತನ ಮಾಡುವುದಕ್ಕೆ ಅನುಕೂಲವಾಗಿರುವ ಮನೆಯನ್ನು ನೋಡಿಕೊಂಡಿದ್ದಾರೆ. ಒಂದು ವಾರದಿಂದ ಆ ಊರಲ್ಲೇ ಇದ್ದ ಕಳ್ಳರು ತಾವು ಕಳ್ಳತನ ಮಾಡಬೇಕೆಂದುಕೊಂಡ ಮನೆಯವರು ಧನಿಕರೋ ಅಲ್ಲೋ, ಆ ಮನೆಯವರು ಬಡವರಾದರೆ ತಾವು ಕಷ್ಟಪಟ್ಟು ರಾತ್ರಿಹೊತ್ತು ಕಳ್ಳತನ ಮಾಡುವುದಕ್ಕೆ ಮನೆಯಲ್ಲಿ ಪ್ರವೇಶಿಸಿದರೂ ಏನೂ ಪ್ರಯೋಜನ ಇರುವುದಿಲ್ಲವೆಂದು ಆಲೋಚಿಸಿ, ಅ ಮನೆಯವರು ಎಷ್ಟರ ಮಟ್ಟಿಗೆ ಆರ್ಥಿಕ ಸ್ಥಿತಿ ಹೊಂದಿದ್ದಾರೋ ತಿಳಿಯುವುದಕ್ಕೆ, ಆ ಮನೆ ಯಜಮಾನ ನೊಂದಿಗೆ ಒಂದು ಬಾರಿ ಹೋಟಲ್‌ನಲ್ಲಿ ಬೇಟಿಯಾಗಿ, ಮಾತುಗಳ ಪರಿಚಯ ಏರ್ಪಡಿಸಿಕೊಂಡು, ಎಲ್ಲರೂ ಅಲ್ಪಾಹಾರವಾಗಿ ಪೂರಿ, ದೋಸೆ ತಿನ್ನುವುದು ನಡೆದಿದೆ. ಆಗ ಸ್ವಲ್ಪ ಪರಿಚಯವಾದ ಮನೆ ಯಜಮಾನ ತಾವು ತಿಂದಿರುವುದಕ್ಕೂ ಸಹ ಹೋಟಲ್ ಬಿಲ್ಲು ಕಟ್ಟಿದರೇ, ಆತನು ಆರ್ಥಿಕ ಸಾಮರ್ಥ್ಯ ಹೊಂದಿದ್ದಾ ನೆಂದು, ಬಿಲ್ಲು ಕಟ್ಟದೇ ತಮ್ಮಿಂದ ಕಟ್ಟಿಸಿದರೆ ಆರ್ಥಿಕ ಸ್ಥಿತಿ  ಇಲ್ಲದವರಾಗಿ ಲೆಕ್ಕಿಸಬಹುದೆಂದು ಅಂದುಕೊಂಡಿದ್ದಾರೆ. ಅವರು ಟಿಫಿನ್ ತಿಂದ ನಂತರ ಸ್ವಲ್ಪ ಪರಿಚಯಕ್ಕೇ ಮನೆ ಯಜಮಾನನೇ ಬಿಲ್ಲು ಕಟ್ಟುವುದು ನಡೆದಿದೆ. ಅದರಿಂದ ಮನೆ ಯಜಮಾನ ಧನಿಕನೇ ಎಂದು ಕಳ್ಳರು ಗ್ರಹಿಸಿ ಒಂದು ವಾರದ ನಂತರ ಆ ಯಜಮಾನನ ಮನೆಗೆ ಕಳ್ಳತನ ಮಾಡುವುದಕ್ಕೆ ಬಂದಿದ್ದಾರೆ. ಆ ವಾರದೊಳಗೇ ಎರಡು ಮೂರು ಬಾರಿ ಆ ಮಜಮಾನನೊಂದಿಗೆ ಸೇರಿ ಮಾತನಾಡುವುದು ನಡೆದಿದೆ. ಆದರೂ ಮನೆ ಯಜಮಾನನಿಗೆ ಅವರು ಕಳ್ಳರೆಂದು ಹೇಗೆ ತಿಳಿಯ ಬಲ್ಲದು. ಆದ್ದರಿಂದ ಅವರನ್ನು ಸರ್ವಸಾಧಾರಣ ಮನುಷ್ಯರ ಹಾಗೇ ತಿಳಿದಿದ್ದಾನೆ. ಅವರು ಮೂರು ಬಾರಿ ತನ್ನೊಂದಿಗೆ ಕೂಡಿ ಮಾತನಾಡಿದರೂ, ಅವರನ್ನು ಕಳ್ಳರೆಂದು ಗ್ರಹಿಸಲಾರದೇ ಹೋಗಿದ್ದಾನೆ. ತನ್ನಂತೆ ಮನುಷ್ಯರೆಂದುಕೊಂಡು ಮೋಸಹೋಗಿದ್ದಾನೆ. ಯಜಮಾನ ಮಾತುಗಳಲ್ಲಿ ಆತನು ಎಷ್ಟು ಸಾಮರ್ಥ್ಯ ಇರುವವನೋ ಗ್ರಹಿಸಿದ ಕಳ್ಳರು, ಆ ಮನೆಯಲ್ಲಿ ಕಳ್ಳತನ ಮಾಡಿದರೆ ಲಾಭವಾಗುತ್ತದೆಂದುಕೊಂಡಿದ್ದಾರೆ.

ಒಂದು ದಿನ ಕತ್ತಲಾಗಿರುವ ರಾತ್ರಿ ಇಬ್ಬರು ಕಳ್ಳರು ತಾವು ಮೊದಲೇ ನೋಡಿಕೊಂಡ ಮನೆಯಲ್ಲಿ ಕಳ್ಳತನ ಮಾಡುವುದಕ್ಕೆ ಹೊರಟು ಮನೆ ಸನಿಹಕ್ಕೆ ಬಂದರು. ಆಗ ರಾತ್ರಿ ಒಂದು ಗಂಟೆ ಸಮಯದಲ್ಲಿ ಆ ಮನೆಯಲ್ಲಿ ಇರುವವರೆಲ್ಲರೂ ಪೂರ್ತಿಯಾಗಿ ಗಾಢನಿದ್ರೆಯಲ್ಲಿ ಇದ್ದಾರೆ. ಇತರರು ತಟ್ಟಿ ಎಬ್ಬಿಸಿದರೂ ಏಳುವ ಸ್ಥಿತಿಯಲ್ಲಿ ಇಲ್ಲ. ಅಂತಹ ಸಮಯದಲ್ಲಿ ಮನೆ ಸಮೀಪಕ್ಕೆ ಬಂದ ಅವರಿಬ್ಬರನ್ನು ಆ ಮನೆ ನಾಯಿ ನೋಡಿದೆ. ನಾಯಿ ಕಣ್ಣಿನಿಂದ ನೋಡುವುದೇ ಅಲ್ಲದೇ, ತನಗಿರುವ ಸಹಜಶಕ್ತಿ ಆದ ಘ್ರಾಣಶಕ್ತಿಯಿಂದ ಗ್ರಹಿಸುವುದಕ್ಕೆ ಮೂಗಿನಿಂದ ಅವರಿಂದ ಬರುವ ವಾಸನೆಯನ್ನು ಗುರುತಿಸಿತು. ಗಾಳಿಯಲ್ಲಿ ಸೇರಿದ ಇಬ್ಬರು ಕಳ್ಳರ ವಾಸನೆಯನ್ನು ನಾಯಿ ಮೂಗಿನಿಂದ ಗ್ರಹಿಸಿ ಕೂಡಲೇ ಬೊಗಳಲು ಪ್ರಾರಂಭಿಸಿತು. ನಾಯಿ ಬೊಗಳುವುದನ್ನು ಗಮನಿಸಿದ ಇಬ್ಬರು ಕಳ್ಳರು ನಾಯಿ ದೃಷ್ಠಿಗೆ ಬೀಳದೇ ಸ್ವಲ್ಪ ಹಿಂದಕ್ಕೆ ಬಂದಿದ್ದಾರೆ. ನಂತರ ಸ್ವಲ್ಪ ಸಮಯಕ್ಕೆ ತಿರುಗಿ ಪ್ರಯತ್ನ ಮಾಡುತ್ತಾ ಮನೆಯನ್ನು ಸಮೀಪಿಸಿದರು. ಆಗಲೂ ಸಹ ನಾಯಿ ಬೊಗಳುವುದು ಪ್ರಾರಂಭಿಸಿತು. ಇಬ್ಬರು ಕಳ್ಳರು ಮುಂದಕ್ಕೆ ಹೋಗದೇ ಮನೆಗೆ ದೂರವಾಗಿ ಅಲ್ಲೇ ಕುಳಿತುಕೊಂಡರು. ಆದರೂ ನಾಯಿ ಬೊಗಳುವುದನ್ನು ನಿಲ್ಲಿಸಲಿಲ್ಲ. ನಾಯಿ ಬೊಗಳುತ್ತಿರುವ ಶಬ್ದವನ್ನು ಮನೆ ಯಜಮಾನ ಕೇಳಿ ಹಾಸಿಗೆಯಿಂದ ಎದ್ದು ಹೊರಗೆ ಬಂದನು. ಹೊರಗೆ ಬಂದು ನಾಯಿಯನ್ನು ಸಮುದಾಯಿಸಿದರೂ ಅದು ಬೊಗಳುವುದು ನಿಲ್ಲಿಸಲಿಲ್ಲ. ಮನೆ ಯಜಮಾನ ಎಚ್ಚರಗೊಂಡು ಹೊರಗೆ ಬಂದಿರುವುದು ಕಳ್ಳರು ದೂರದಿಂದ ನೋಡಿದ್ದಾರೆ. ಇನ್ನು ಈ ದಿನ ಕಳ್ಳತನ ಮಾಡಲಾರೆವೆಂದು ಹಿಂತಿರುಗಿ ಹೋಗಿದ್ದಾರೆ. ಮಾರನೆದಿನ ಬಜಾರಿನಲ್ಲಿ ಕಳ್ಳರು, ಮನೆಯಜಮಾನ ಒಬ್ಬರಿಗೊಬ್ಬರು ಸೇರಿ ಮಾತನಾಡಿಕೊಂಡರು. ಕಳ್ಳರು ಮೊದಲೇ ಪರಿಚಯ ವಿದ್ದರೂ, ಅವರು ಕಳ್ಳರೆಂದು ಯಜಮಾನನಿಗೆ ತಿಳಿಯದು ಆದ್ದರಿಂದ, ರಾತ್ರಿ ನಡೆದ ಸಂಘಟನೆಯನ್ನು ಕುರಿತು ಕಳ್ಳರಿಗೆ ಮನೆ ಯಜಮಾನ ಹೇಳುವುದು ನಡೆದಿದೆ. ಹಾಗೆ ಹೇಳಿದಾಗ ರಾತ್ರಿ ನಮ್ಮ ಮನೆಗೆ ಕಳ್ಳರು ಬಂದಿದ್ದಾರೆ. ಆದರೂ ಅವರು ಕಳ್ಳತನ ಮಾಡಲಾಗದೇ ಹೋಗಿದ್ದಾರೆ ಎಂದು ಹೇಳಿದ್ದಾನೆ.

ಆಗ ಆ ಮಾತು ಕೇಳಿದ ಕಳ್ಳರು ಆಶ್ಚರ್ಯಪಟ್ಟು, ನಿಮ್ಮ ಮನೆಗೆ ಕಳ್ಳರು ಬಂದಿದ್ದಾರೆಂದು ನೀವ್ಹೇಗೆ ಹೇಳುತ್ತಿದ್ದೀರೆಂದು ಕೇಳಿದರು. ಆಗ ಆ ಯಜಮಾನ ನಮ್ಮ ನಾಯಿ ಬೊಗಳುವುದನ್ನು ಅನುಸರಿಸಿ ತಿಳಿದಿದೆಯೆಂದು ಹೇಳಿದ್ದಾನೆ. ಆಗ ಕಳ್ಳರು "ನಾಯಿ ಮತ್ತೊಂದು ನಾಯಿಯನ್ನು ನೋಡಿದಾಗಲೂ ಬೊಗಳುತ್ತದೆ. ಅಷ್ಟು ಮಾತ್ರಕ್ಕೆ ಕಳ್ಳರು ಬಂದಿದ್ದಾರೆಂದು ಏಕೆ ಅಂದುಕೊಳ್ಳಬೇಕು" ಎಂದು ಕೇಳಿದ್ದಾರೆ. ಆಗ ಆ ಯಜಮಾನ "ಇಲ್ಲರೀ! ನಮ್ಮ ನಾಯಿ ನಿಜವಾಗಿ ಕಳ್ಳರನ್ನು ನೋಡಿ ಬೊಗಳಿತೆಂದು ನಾನು ಹೇಳಬಲ್ಲೆನು. ಏಕೆಂದರೆ! ಕಳ್ಳರನ್ನು ನೋಡದೇ ಹೋದರೂ ನಾಯಿ ತನ್ನ ಘ್ರಾಣಶಕ್ತಿಯಿಂದ ಗಾಳಿಯಲ್ಲಿನ ವಾಸನೆಯನ್ನು ಗುರುತಿಸಿ ಬಂದಿರುವವರು ಕಳ್ಳರೇ ಎಂದು ಗ್ರಹಿಸಿ ಬೊಗಳುತ್ತದೆ. ಖಚಿತವಾಗಿ ಬಂದಿರುವವರು ಕಳ್ಳರೇ ಎಂದು ನಾನು ಏಕೆ ಹೇಳುತ್ತಿದ್ದೇನೆಂದರೇ, ನಾಯಿ ಸಾಧಾರಣ ಮನುಷ್ಯರನ್ನು ನೋಡಿದಾಗ ಒಂದು ವಿಧವಾಗಿ, ಕಳ್ಳರನ್ನು ನೋಡಿದಾಗ ಒಂದು ವಿಧವಾಗಿ, ಸಾಟಿ ಮನುಷ್ಯರನ್ನು ನೋಡಿದಾಗ ಒಂದು ವಿಧವಾಗಿ, ಪ್ರಾಣಿಗಳನ್ನು ನೋಡಿದಾಗ ಒಂದು ವಿಧವಾಗಿ, ಹಾವನ್ನು ನೋಡಿದಾಗ ಒಂದು ವಿಧವಾಗಿ, ದೇವರನ್ನು ನೆನಪಿಸಿಕೊಂಡಾಗ ಒಂದು ವಿಧವಾಗಿ ಬೊಗಳುತ್ತದೆ. ತಾನು ಏಕೆ ಬೊಗಳುತ್ತಿರುವುದು ಅರ್ಥವಾಗುವಹಾಗೆ ಐದಾರು ವಿಧಗಳಲ್ಲಿ ನಾಯಿಗಳು ಬೊಗಳುವುದು ಇದೆ. ಹಾಗೆ ಬೊಗಳುವುದು ನಾಯಿಗಳಿಗೆ ಹುಟ್ಟಿನಿಂದ ಬಂದ ವಿದ್ಯೆ, ನಾಯಿಗೆ ವಾಸನೆಯನ್ನು ಗ್ರಹಿಸುವ ಘ್ರಾಣಶಕ್ತಿ ಅದರ ಮೂಗಿನಲ್ಲಿ ದೇವರು ಏರ್ಪಾಟು ಮಾಡಿ ಇಟ್ಟಿದ್ದಾನೆ. ಆದ್ದರಿಂದ ಅವು ನೋಡದಿದ್ದರೂ ವಾಸನೆ ಗ್ರಹಿಸಿ ಬೊಗಳುತ್ತವೆ. ಈ ವಿಷಯ ಮೊದಲು ನನಗೂ ಸಹ ತಿಳಿಯದು. ನಮ್ಮ ಮನೆಗೆ ಬಂದ ಒಬ್ಬ ಮಹರ್ಷಿ ಹೇಳಿದ ವಿಷಯವಿದು. ಆತನು ಹೇಳಿಹೋದ ನಂತರ ನಾಯಿ ಬೊಗಳುವಾಗ ಅವುಗಳ ಬೊಗಳುವುದರಲ್ಲಿನ ವ್ಯತ್ಯಾಸವನ್ನು ಗಮನಿಸುತ್ತಾ ಬಂದಿದ್ದೇನೆ. ಒಂದು ದಿನ ರಾತ್ರಿ ಒಂದು ಮುದಿ ನಾಯಿ ಬೊಗಳುತ್ತಿರುವುದನ್ನು ಕೇಳಿದ್ದೇನೆ. ರಾತ್ರಿ ಒಂದು ಗಂಟೆ ನಂತರ ಆ ನಾಯಿ ಬೊಗಳುವುದು ಪ್ರಾರಂಭಿಸಿತು. ಅದು ಹಾಗೆ ಒಂದು ಅರ್ಧ ಗಂಟೆ ಬೊಗಳಿತು. ಆಗ ಅದು ಸಾಧಾರಣವಾಗಿ

ಬೊಗಳದೇ ಎರಡು ಶಬ್ದಗಳಿಂದ ನಿಲ್ಲಿಸಿ ನಿಲ್ಲಿಸಿ ಬೊಗಳುತ್ತಿತ್ತು. ಅದು ನಮ್ಮ ಮನೆಗೆ ಸ್ವಲ್ಪ ದೂರದಲ್ಲಿ ಬೊಗಳುತ್ತಿರುವುದರಿಂದ ಆ ದಿನ ಆ ಶಬ್ದವನ್ನು ಚೆನ್ನಾಗಿ ಕೇಳಿದ್ದೇನೆ. ಬೆಳಗಾದ ನಂತರ ನಮ್ಮ ಮನೆಗೆ ಏಳೆಂಟು ಮನೆಗಳ ದೂರದಲ್ಲಿರುವ ಸಣ್ಣ ಹೋಟಲ್‌ನಲ್ಲಿ ರಾತ್ರಿ ಕಳ್ಳತನ ನಡೆದಹಾಗೆ ತಿಳಿಯಿತು. ಕಳ್ಳರು ಇಬ್ಬರೋ ಮೂವರೋ, ಅಥವಾ ಒಬ್ಬರೋ ತಿಳಿಯದು ಆದರೆ, ಕಳ್ಳರು ಹೋಟಲ್ ಒಳಗೆ ಹೋದಾಗ ಗಮನಿಸಿದ ನಾಯಿ ತಿರುಗಿ ಅವರು ಹೊರಗೆ ಹೋಗುವವರೆಗು ಅರ್ಧ ಗಂಟೆ ಸಮಯ ಬೊಗಳಿತೆಂದು ನನಗೆ ಅರ್ಥವಾಯಿತು. ಆ ಹೋಟಲ್‌ನ್ನು ರಾತ್ರಿ ಹತ್ತು ಗಂಟೆಗೆ ಮುಚ್ಚಿ ಬೆಳಿಗ್ಗೆ ಆರುಗಂಟೆಗಳಿಗೆ ತೆರೆಯುತ್ತಾರೆ. ಆ ಹೋಟಲ್ ಒಳಗೆ ಹೋದ ಮನುಷ್ಯರು ಕಳ್ಳರೇ ಎಂದು ಅದಕ್ಕೆ ಹೇಗೆ ತಿಳಿದಿದೆಯೆಂದು ಅಂದುಕೊಂಡರೇ ಮೂಗಿಗಿರುವ ವಾಸನೆ ಗ್ರಹಿಸುವ ಶಕ್ತಿಯಿಂದಲೇ ಮನುಷ್ಯನಲ್ಲಿನ ಉದ್ದೇಶವನ್ನು ಸಹ ನಾಯಿ ಗ್ರಹಿಸಬಲ್ಲದೆಂದು ಅರ್ಥವಾಗಿದೆ.

ನಾಯಿ ಬೊಗಳುವ ವಿಷಯದಲ್ಲಿ ಪ್ರತ್ಯಕ್ಷವಾಗಿ ಕಳ್ಳರ ವಿಷಯವನ್ನು ನೋಡಿದ್ದೇನೆ. ಹಾಗೇ ಒಂದು ದಿನ ರಾತ್ರಿ ಕತ್ತಲಾಗಿರುವ ಜಾಗದಲ್ಲಿ ಎರಡು ನಾಯಿಗಳು ಪ್ರತ್ಯೇಕವಾಗಿ ಬೊಗಳುವುದನ್ನು ನೋಡಿದ್ದೇನೆ. ಆಗ ಮಹರ್ಷಿ ಹೇಳಿದ ಮಾತುಗಳು ನೆನಪಿಗೆ ಬಂದವು. ಕೂಡಲೇ ಟಾರ್ಚ್ ಲೈಟನ್ನು ತೆಗೆದುಕೊಂಡು ನಾಯಿಗಳು ಬೊಗಳುತ್ತಿರುವ ಕತ್ತಲಹತ್ತಿರಕ್ಕೆ ಹೋಗಿ ಟಾರ್ಚ್ ಲೈಟ್ ಹಾಕಿ ನೋಡಿದೆನು. ಅಲ್ಲೊಂದು ಗಂಡು ನಾಗರ ಹಾವು ಎಡೆ ಎತ್ತಿ ನಿಂತುಕೊಂಡಿದೆ. ಅದರ ದಾರಿಗೆ ಅಡ್ಡವಾಗಿ ನಾಯಿಗಳು ನಿಂತುಕೊಂಡು ಅದನ್ನು ಈಕಡೆ ಮನುಷ್ಯರ ಕಡೆಗೆ ಬಾರದಂತೆ ಬೊಗಳುತ್ತಿರುವುದನ್ನು ಗ್ರಹಿಸಿ ನಾಯಿಗಳನ್ನು ಅಲ್ಲಿಂದ ಓಡಿಸಿದೆನು. ಆಗ ಹಾವು ಹಿಂತಿರುಗಿ ಹೋಗಿದೆ. ಈ ವಿಧವಾಗಿ ಎರಡು, ಮೂರು ಸಂಘಟನೆಗಳಲ್ಲಿ ನಾಯಿಗಳು ಪ್ರತ್ಯೇಕವಾಗಿ ಬೊಗಳುವುದನ್ನು ನೋಡಿದ್ದೇನೆ. ಆದ್ದರಿಂದ ರಾತ್ರಿ ನಮ್ಮ ಮನೆ ಹತ್ತಿರವಿರುವ ನಾಯಿ ಬೊಗಳುವ ವಿಧಾನವನ್ನನುಸರಿಸಿ ಅದು ಖಚಿತವಾಗಿ ಕಳ್ಳರನ್ನು ಗುರುತಿಸಿ

ಬೊಗಳುತ್ತಿದೆಯೆಂದು ಅರ್ಥಮಾಡಿಕೊಂಡಿದ್ದೇನೆ" ಎಂದು ಹೇಳಿದನು. ಅಲ್ಲಿಯವರೆಗು ಕಳ್ಳರಿಗೂ ಸಹ ತಿಳಿಯದ ಆ ವಿಷಯ ಆ ದಿನ ಆ ಇಬ್ಬರು ಕಳ್ಳರು ತಿಳಿದುಕೊಂಡು ಇನ್ನು ಆ ಮನೆಗೆ ಕಳ್ಳತನಕ್ಕೆ ಹೋಗಬಾರದೆಂದು ಕೊಂಡರು.

ಪ್ರತ್ಯಕ್ಷವಾಗಿ ನೋಡದಿದ್ದರೂ ಮನುಷ್ಯರ ಗಾಳಿಯನ್ನನುಸರಿಸಿ ಇವನು ಒಳ್ಳೆಯವನಾ ಅಥವಾ ಕಳ್ಳನಾ ಎಂದು ಗ್ರಹಿಸುವ ಶಕ್ತಿ ನಾಯಿಗಳಿಗೆ ಇದ್ದಹಾಗೆ, ಒಂದು ದೈವ ಗ್ರಂಥದೊಳಗಿರುವ ವಾಕ್ಯಗಳನ್ನು ನೋಡಿದ ಕೂಡಲೇ ಇವು ದೇವರು ಹೇಳಿದ ವಾಕ್ಯಗಳಾ, ಅಥವಾ ಮನುಷ್ಯ ಹೇಳಿರುವ ವಾಕ್ಯಗಳಾ ಎಂದು ಗ್ರಹಿಸುವ ಶಕ್ತಿ ಕೆಲವರಿಗಿರುತ್ತದೆ. ನಾಯಿಗೆ ವಾಸನೆಯಿಂದ ಇವನು ಇಂತಹವನೆಂದು ಗ್ರಹಿಸುವ ಶಕ್ತಿ ಇದ್ದಹಾಗೇ, ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯನ್ನು ನೋಡಿದ ಕೂಡಲೇ ಅದರಲ್ಲಿ ಈ ವಾಕ್ಯಗಳು ಮಾತ್ರ ದೇವರು ಹೇಳಿರುವವೆಂದು, ಈ ವಾಕ್ಯಗಳು ದೇವರು ಹೇಳಿದ ವಾಕ್ಯಗಳಂತಿರುವ ಇವು ಮಾತ್ರ ಮನುಷ್ಯರು ಹೇಳಿರುವವೇ ಎಂದು ಗ್ರಹಿಸುವ ಶಕ್ತಿಯನ್ನು ಆತ್ಮ ನನಗೆ ಕೊಟ್ಟಿರುವುದರಿಂದ ಮನುಷ್ಯರ ಹಾಗೆ ಇದ್ದರೂ ಕಳ್ಳರನ್ನು ಪ್ರತ್ಯೇಕವಾಗಿ ನಾಯಿ ಗುರುತಿಸಿದ ಹಾಗೆ, ನಾನು ಮಾತ್ರ ಭಗವದ್ಗೀತೆಯಲ್ಲಿ ಎಲ್ಲಾ ದೇವರ ವಾಕ್ಯಗಳಂತೆ ಇದ್ದರೂ ಯಾವುವು ದೇವರು ಹೇಳಿದ ವಾಕ್ಯಗಳು, ಯಾವು ಮನುಷ್ಯರು ಹೇಳಿದ ವಾಕ್ಯಗಳೆಂದು ಗುರುತಿಸುತ್ತಿದ್ದೇನೆ. ಆದ್ದರಿಂದ ಭಗವದ್ಗೀತೆಯಲ್ಲಿ ಕೆಲವು ಕಡೆ ಮನುಷ್ಯರು ಸೇರಿಸಿದ ಶ್ಲೋಕಗಳನ್ನು ಗುರುತಿಸಿ ಇವು ಮನುಷ್ಯರು ಬರೆದು ಸೇರಿಸಿರುವವೆಂದು ಹೇಳಿದ್ದೇನೆ. ನಾನು ಬರೆದ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಮನುಷ್ಯರು ಬರೆದ ಕಲ್ಪಿತ ಶ್ಲೋಕಗಳನ್ನು ತೆಗೆದುಹಾಕುವುದು ನಡೆದಿದೆ.

ಮೊಟ್ಟಮೊದಲು ಗ್ರಂಥರೂಪವಾಗಿರುವುದು ಭಗವದ್ಗೀತೆ. ಮೊದಲು ವ್ಯಾಸನು ಬರೆದ ಭಗವದ್ಗೀತೆಯಲ್ಲಿ ಎಂತಹ ಮನುಷ್ಯರ ವಾಕ್ಯಗಳು ಇಲ್ಲ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆ ಆ ದಿನ ಸ್ವಚ್ಛವಾದ ದೇವರ

ವಾಕ್ಯಗಳಿಂದಲೇ ವ್ಯಾಸನಿಂದ ಬರೆಯಲಾಗಿದೆ. ವ್ಯಾಸನು ಹೋದ ನಂತರ ಭಗವದ್ಗೀತೆ ಶಿಥಿಲವಾಗದಂತೆ ಪುನಃ ಬರೆಯುವುದು ನಡೆದಿದೆ. ಆ ವಿಧವಾಗಿ ಎರಡು ಮೂರು ಬಾರಿ ಬರೆಯಲಾಗಿರುವ ಭಗವದ್ಗೀತೆ ಈದಿನ ನಮ್ಮ ಮುಂದೆ ಇದೆ. ಮೊದಲು ದೈವವಾಕ್ಯಗಳಿಂದ ತುಂಬಿರುವ ಭಗವದ್ಗೀತೆಯಲ್ಲಿ ತಮ್ಮ ಪ್ರಪಂಚ ಸ್ವಾರ್ಥಕ್ಕೋಸ್ಕರ ಕೆಲವರು ಮನುಷ್ಯರು ತಮ್ಮ ಉದ್ದೇಶಗಳನ್ನು ದೇವರ ವಾಕ್ಯಗಳಂತೆ ಕಾಣಿಸುವ ಹಾಗೆ ಶ್ಲೋಕಗಳ ರೂಪದಲ್ಲಿ ಬರೆದು ಭಗವದ್ಗೀತೆಯಲ್ಲಿ ಸೇರಿಸುವುದು ನಡೆದಿದೆ. ಅವರು ಎಷ್ಟು ಬುದ್ಧಿವಂತಿಕೆಯಿಂದ ತಮ್ಮ ಉದ್ದೇಶಗಳನ್ನು ಭಗವದ್ಗೀತೆಯಲ್ಲಿ ಸೇರಿಸಿದರೂ ಅವು ಈ ದಿನ ಆತ್ಮ ಕೊಟ್ಟಿರುವ ಶಕ್ತಿಯಿಂದ ನಮ್ಮಮುಂದೆ ಹೊರಬಿದ್ದಿವೆ. ದೇವರ ಮಾತುಗಳ ಮಧ್ಯದಲ್ಲಿ ಮನುಷ್ಯರ ಮಾತುಗಳು ಇರುವುದು ಆತ್ಮಕ್ಕೆ ಇಷ್ಟವಿಲ್ಲ. ಆದ್ದರಿಂದ ಯಾರೂ ಗುರುತಿಸಲಾರದ ವಾಕ್ಯಗಳನ್ನು ಓದಿದ ಕೂಡಲೇ ಗುರುತಿಸುವ ಹಾಗೆ ಗ್ರಹಿಸುವ ಶಕ್ತಿಯನ್ನು ನನಗೆ ಕೊಡುವುದು ನಡೆದಿದೆ. ಆತ್ಮ ಕೊಟ್ಟಿರುವ ಶಕ್ತಿಯಿಂದಲೇ ಭಗವದ್ಗೀತೆಯಲ್ಲಿ ಕಲ್ಪಿತ ಶ್ಲೋಕಗಳನ್ನು ಗುರುತಿಸಿದ್ದೇನೆ.

ನನ್ನ ದೃಷ್ಟಿಯಲ್ಲಿ ಪ್ರಪಂಚದಲ್ಲಿ ಮೂರು ದೈವ ಗ್ರಂಥಗಳು ಇವೆಯೆಂದು ಹೇಳಿದ್ದೇನಲ್ಲವೇ! ಅದರಲ್ಲಿ ಪ್ರಥಮ ದೈವ ಗ್ರಂಥವಾಗಿ ಬರೆಯಲಾಗಿರುವುದು ಭಗವದ್ಗೀತೆ ಆದಾಗ, ದ್ವಿತೀಯ ದೈವ ಗ್ರಂಥವಾಗಿ ಬರೆಯಲಾಗಿರುವುದು ಬೈಬಲ್. ಆದರೆ ಬೈಬಲ್‌ನ್ನು ಮಧ್ಯ ದೈವ ಗ್ರಂಥವೆಂದು ಸಹ ಅನ್ನಬಹುದು. ಕೊನೆಯಲ್ಲಿ ಅಂತಿಮ ದೈವ ಗ್ರಂಥವಾಗಿ ಖುರ್‌ಆನ್ ಇರುವುದರಿಂದ ದ್ವಿತೀಯ ದೈವ ಗ್ರಂಥವಾದ ಬೈಬಲ್‌ನ್ನು ಮಧ್ಯ ದೈವ ಗ್ರಂಥವೆಂದು ಅನ್ನಬೇಕಾಗಿ ಬಂದಿದೆ. ಇದಕ್ಕೂ ಮೊದಲು ಬೈಬಲ್‌ನಲ್ಲಿ ಮನುಷ್ಯರು ಹೇಳಿರುವುದು ಯಾವುದೋ, ದೇವರು ಹೇಳಿರುವುದು ಯಾವುದೋ ತಿಳಿಯದೇ ಹೋಗಿರುವುದರಿಂದ ಬೈಬಲ್ ಬಹಳ ಜನರಿಗೆ ಅರ್ಥವಾಗಿಲ್ಲವೆಂದು ಹೇಳಿದ್ದೇವೆ. ಭಗವದ್ಗೀತೆಯನ್ನು ಕುರಿತು ಹೇಳಿದ್ದೇನಲ್ಲವೆ! ಭಗವದ್ಗೀತೆಯಲ್ಲಿ ಸ್ವಲ್ಪ ಮನುಷ್ಯರ ವಾಕ್ಯಗಳು (ಶ್ಲೋಕಗಳು) ಸೇರಿರುವಾಗ, ಬೈಬಲ್‌ನಲ್ಲಿ ಹೆಚ್ಚಿನ ಭಾಗ ಮನುಷ್ಯರ

ಮಾತುಗಳಿಂದ, ಸ್ವಲ್ಪ ಭಾಗ ಮಾತ್ರ ದೇವರ ವಾಕ್ಯಗಳಿರುವುದು ನಡೆದಿದೆ. ಒಂದು ಭಗವದ್ಗೀತೆಯಲ್ಲೇ ಅಲ್ಲದೇ, ಬೈಬಲ್‌ನಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯೂ ಮನುಷ್ಯರ ವಾಕ್ಯಗಳು ಬೆರೆತು ಎಷ್ಟು ಮಾತ್ರ ಕಂಡುಕೊಳ್ಳುವುದಕ್ಕೆ ಅವಕಾಶವಿಲ್ಲದೇ ಇವೆ. ಆದ್ದರಿಂದ ಎಲ್ಲರೂ ಅವುಗಳಲ್ಲಿನ ವಾಕ್ಯಗಳನ್ನು ದೈವವಾಕ್ಯಗಳಂತೆ ನಂಬುತ್ತಿದ್ದಾರೆ. ಭಗವದ್ಗೀತೆಯನ್ನು ಬರೆದ ವ್ಯಾಸನು ತಾನು ಯಾವ ತಪ್ಪು ಮಾಡದೇ ದೇವರ ವಾಕ್ಯಗಳನ್ನು ಮಾತ್ರ ಭಗವದ್ಗೀತೆಯಲ್ಲಿ ಬರೆಯುವುದು ನಡೆದಿದೆ. ಎರಡನೆಯ ದೈವ ಗ್ರಂಥ, ಅಂತಿಮ ದೈವ ಗ್ರಂಥ ಹಾಗೆ ಮೊದಲೇ ಸ್ವಚ್ಛವಾಗಿ ಬರೆಯಲಾಗದೇ, ಮೊದಲ ರಚನೆಯಲ್ಲಿಯೇ (ಮೊದಲು ಗ್ರಂಥ ತಯಾರಾದಾಗಲೇ) ಮನುಷ್ಯರ ಮಾತುಗಳು ಅವುಗಳಲ್ಲಿ ಸೇರಿಹೋಗುವುದು ನಡೆದಿದೆ. ಭಗವದ್ಗೀತೆ ವ್ಯಾಸನಿಂದ ಸ್ವಚ್ಛವಾಗಿ ಬರೆಯಲ್ಪಟ್ಟು ಹೊರಗೆ ಬಂದ ನಂತರ ಸ್ವಲ್ಪ ಕಾಲಕ್ಕೆ ಕಲುಷಿತವಾದಾಗ, ಉಳಿದ ಎರಡು ಗ್ರಂಥಗಳನ್ನು ಮನುಷ್ಯ ತನ್ನ ಪ್ರಪಂಚ ಸ್ವಾರ್ಥದಿಂದ ಮೊದಲೇ ಕಲುಷಿತ ಮಾಡಿದ್ದಾನೆ. ಹಾಗೆ ಕಲುಷಿತವಾದರೂ ಅದರಲ್ಲಿ ದೇವರು ಹೇಳಿದ ವಾಕ್ಯಗಳೂ ಇವೆ. ಮನುಷ್ಯರು ಹೇಳಿರುವ ವಾಕ್ಯಗಳೂ ಇವೆ. ಮೂರು ದೈವ ಗ್ರಂಥಗಳಲ್ಲಿಯೂ ದೇವರು ಹೇಳಿದ ವಾಕ್ಯಗಳನ್ನು ಯಾರೂ ತೆಗೆದುಹಾಕಲಾರರು. ಆದ್ದರಿಂದ ಆ ಮೂರು ಗ್ರಂಥಗಳು ಇಂದಿಗೂ ದೈವ ಗ್ರಂಥಗಳೇ.

ಮನುಷ್ಯ ತನ್ನ ಪ್ರಕೃತಿ ಸ್ವಾರ್ಥಬುದ್ಧಿಯಿಂದ ತನ್ನ ವಾಕ್ಯಗಳನ್ನು ಸೇರಿಸಿದರೂ ದೇವರ ವಾಕ್ಯಗಳನ್ನು ಮುಟ್ಟಿಕೊಳ್ಳುವ ಸಾಹಸ ಮಾಡದೇ ಹೋಗಿದ್ದಾನೆ. ಇದೆಲ್ಲವೂ ದೇವರಿಗೆ ತಿಳಿಯದಂತೆ ಏನೂ ನಡೆದಿಲ್ಲ. ಏಕೆಂದರೆ ದೇವರಕಡೆ ಬರಬೇಕೆಂದುಕೊಳ್ಳುವವನು ದೇವರ ವಾಕ್ಯಗಳನ್ನೇ ವಿಶ್ವಾಸಿಸುತ್ತಾನೆ. ಹಾಗೆ ಪೂರ್ತಿ ದೇವರ ಮೇಲೆ ಶ್ರದ್ಧೆ ಇಲ್ಲದವನು ಮನುಷ್ಯರ ವಾಕ್ಯಗಳಲ್ಲಿ ಸಿಲುಕಿಕೊಂಡು ಎಂದಿಗೂ ದೇವರೆಂದರೆ ಯಾರೋ ಅರ್ಥವಾಗದೇ ಇರುತ್ತಾನೆ ಎನ್ನುವ ಉದ್ದೇಶದಿಂದಲೇ ಆ ಕೆಲಸ ನಡೆದಿರುತ್ತದೆ. ತನ್ನನ್ನು ಯಾರೂ ಗುರುತಿಸದಹಾಗೆ ದೇವರಿರುತ್ತಾನೆ ಎಂದು ಹೇಳಿಕೊಂಡಿದ್ದೇವಲ್ಲವೆ! ಆದ್ದರಿಂದ

ದೈವಗ್ರಂಥದಲ್ಲಿನ ಒಂದು ಅಕ್ಷರವಾಗಲೀ, ಒಂದು ಕಾಮಾ ಆಗಲೀ ತೆಗೆದುಹಾಕ ಬಾರದೆಂದು ಕೆಲವರು ಹೇಳಿಕೊಳ್ಳುವುದು ನಡೆಯುತ್ತಿದೆ. ಇಂತಹ ವಾಕ್ಯಗಳಿಂದ ದೈವ ಗ್ರಂಥದಲ್ಲಿನ ಯಾವುದನ್ನು ನಿರಾಕರಿಸಲಾರದ ಸ್ಥಿತಿಯಲ್ಲಿ ಮನುಷ್ಯರಿದ್ದು ಎಲ್ಲವನ್ನೂ ಓದುವುದರಿಂದ ಯಾವುದಕ್ಕೂ ಸಮಾಧಾನ ಸಿಗದೇ ಮನುಷ್ಯ ಅಯೋಮಯ ಸ್ಥಿತಿಯಲ್ಲಿ ಬಿದ್ದುಹೋಗುತ್ತಿದ್ದಾನೆ. ದೈವ ಗ್ರಂಥಗಳು ಮೂರು ಮತಗಳವರಿಗೂ ಎದುರಿಗೇ ಇದ್ದರೂ ಅವುಗಳಲ್ಲಿ ದೇವರು ಹೇಳಿದ ಜ್ಞಾನ ವೇನೋ, ಮನುಷ್ಯ ಹೇಳಿದ ಅಜ್ಞಾನವೇನೋ ತಿಳಿಯದೆ, ಎಲ್ಲವೂ ದೇವರ ಜ್ಞಾನವೆಂದುಕೊಳ್ಳುವುದರಿಂದ ಆ ಮೂರು ದೈವ ಗ್ರಂಥಗಳು ಮೂರು ಮತಗಳವರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು.

ಬೈಬಲ್ ವಿಷಯಕ್ಕೆ ಬಂದರೆ ಅರವತ್ತಾರು ಪಾಠಗಳಲ್ಲಿ 39 ಪಾಠಗಳ ನಂತರ 40, 41, 42, 43 ವರಸೆ ಕ್ರಮದಲ್ಲಿರುವ ನಾಲ್ಕು ಪಾಠಗಳು ಮಾತ್ರ ದೇವರ ಮಾತುಗಳಿಂದ ಕೂಡಿಕೊಂಡಿವೆ. ಈ ನಾಲ್ಕು ಪಾಠಗಳು ಹೊರತು ಉಳಿದ ಅರವತ್ತೆರಡು (62) ಪಾಠಗಳಲ್ಲಿ ದೇವರಿಗೆ ಸಂಬಂಧಿಸಿದ ವಾಕ್ಯ ಗಳಿದ್ದರೂ ಅವು ಭಗವಂತನು ಹೇಳಿರುವವಲ್ಲ. ಯಾವ ವಿಧವಾಗಿ ದೇವರ ದೂತನಾಗಿ ಭಗವಂತನಾದ ಕೃಷ್ಣನು ಬಂದು ಭಗವದ್ಗೀತೆಯನ್ನು ಹೇಳಿಹೋಗಿ ದ್ದಾನೋ, ಆ ವಿಧದಲ್ಲಿ ಯೇಸು ಬಂದು ಹೋಗಿದ್ದಾನೆ. ಭಗವದ್ಗೀತೆ ಮಹಾ ಭಾರತವೆನ್ನುವ ದೊಡ್ಡ ಗ್ರಂಥದಲ್ಲಿ ಸಿಲುಕಿಕೊಂಡಿದ್ದರೂ ಮಹಾ ಭಾರತವನ್ನು ಬಿಟ್ಟು ಆಧ್ಯಾತ್ಮಿಕ ಪ್ರಿಯರು ಭಗವದ್ಗೀತೆಯನ್ನು ಮಾತ್ರ ಓದುತ್ತಿರುವರು. ಹಾಗೇ ದೇವರ ಸಮಾಚಾರವನ್ನು ತಂದಿರುವ ದೂತನ (ಭಗವಂತನ) ಮಾತುಗಳೇ ಮುಖ್ಯವೆಂದುಕೊಳ್ಳುವವರು ಯೇಸು ಮಾತುಗಳಿರುವ ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಎನ್ನುವ ನಾಲ್ಕು ಸುವಾರ್ತೆಗಳನ್ನೇ ಓದಬೇಕು. ಪ್ರತ್ಯಕ್ಷವಾಗಿ ದೇವರ ಸಮಾಚಾರವನ್ನು ತೆಗೆದುಕೊಂಡು ಬಂದಿರುವವನು ಯೇಸು ಆದಾಗ ಆತನು ಹೇಳಿದ ಮಾತುಗಳು ಸ್ವಲ್ಪವೇ ಆದರೂ ಅವು ದೇವರನ್ನು ಸೇರಿಸಬಲ್ಲವು. ಯೇಸೇ ದೇವರೆಂದು ಕೆಲವರು ಕ್ರೈಸ್ತವರು ಎನ್ನುವುದು ನಾವು

ಕೇಳಿದ್ದೇವೆ. ಹಾಗೆ ಯೇಸೇ ದೇವರಾದಾಗ ಆತನ ಮಾತುಗಳನ್ನು ಕೇಳದೇ, ಆತನ ಮಾತುಗಳಿಗೆ ಬೆಲೆ ಕೊಡದೇ ಮನುಷ್ಯರು ಹೇಳಿದ ಮಾತುಗಳನ್ನು ಅಥವಾ ಸುವಾರ್ತೆಗಳನ್ನು ಏಕೆ ಕೇಳುತ್ತಿದ್ದೀರೆಂದು ಪ್ರಶ್ನಿಸುತ್ತಿದ್ದೇವೆ. ಭಗವದ್ಗೀತೆ ಹತ್ತಿರ ಹಿಂದುಗಳು ಸ್ವಲ್ಪ ಎಡವಿದರೆ, ಬೈಬಲ್ ಹತ್ತಿರ ಕ್ರೈಸ್ತವರು ಪೂರ್ತಿಯಾಗಿ ಬೋರ್ಲಾ ಬಿದ್ದಿದ್ದಾರೆ.

ಮಹಾಭಾರತವೆಲ್ಲವನ್ನೂ ಓದದೇ ಅದರಲ್ಲಿಂದ ಸ್ವಲ್ಪ ಯುದ್ಧ ಪ್ರಕರಣೆಯಲ್ಲಿರುವ ಭಗವದ್ಗೀತೆಯನ್ನು ಬೇರ್ಪಡಿಸಿಕೊಂಡು ಹಿಂದುಗಳು ಓದಿಕೊಳ್ಳುತ್ತಿದ್ದಾರೆ. ಆದರೂ ಭಗವದ್ಗೀತೆಯಲ್ಲಿ ಸೇರಿಹೋದ ಮನುಷ್ಯರ ಶ್ಲೋಕಗಳನ್ನು ಗುರುತಿಸಲಾರದೇ ಹೋಗಿದ್ದಾರೆ. ಹಾಗೆ ಮನುಷ್ಯರು ಹೇಳಿದ ಶ್ಲೋಕಗಳನ್ನು ಗ್ರಹಿಸಿಕೊಳ್ಳಲಾರದೇ ಚಿಕ್ಕ ತಪ್ಪನ್ನು ಹಿಂದುಗಳು ಮಾಡಿದರೆ, ಹಿಂದೂಗಳು ಮಹಾ ಭಾರತವನ್ನು ಅದರಲ್ಲಿನ ಭಗವದ್ಗೀತೆಯನ್ನು ಬೇರೆಸಿ ಓದಿಕೊಂಡ ಹಾಗೆ, ಭಾರತವನ್ನು ಭಗವದ್ಗೀತೆಯನ್ನು ಎರಡನ್ನೂ ಒಂದೇ ಅಂದುಕೊಂಡಹಾಗೆ ಕ್ರೈಸ್ತವರು ಹಳೆ ನಿಬಂಧನೆಯನ್ನು ಹೊಸ ನಿಬಂಧನೆಯನ್ನು ಸೇರಿಸಿ ಬೈಬಲ್ ಅಂದುಕೊಳ್ಳುತ್ತಿದ್ದಾರೆ. **ವಾಸ್ತವಕ್ಕೆ ಬೈಬಿಲ್ ಎನ್ನುವ ಪದ ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಎನ್ನುವ ನಾಲ್ಕು ಸುವಾರ್ತೆಗಳಿಗೇ ಅನ್ವಯಿಸುತ್ತದೆ. ಆದ್ದರಿಂದ ಕೇವಲ ನಾಲ್ಕು ಸುವಾರ್ತೆಗಳನ್ನೇ ಬೈಬಲ್ ಎನ್ನಬೇಕು.** ಯೇಸು ಕೃಷ್ಣನಂತೆ ಮನುಷ್ಯನಾಗಿ ಬಂದಿರುವ ದೇವರೇ ಎಂದು ನಾವು ಒಪ್ಪಿಕೊಳ್ಳುತ್ತೇವೆ. ಆದರೂ ಯೇಸನ್ನು ಮಾತಿನ ವರಸೆಗೆ ದೇವರೆಂದು ಕ್ರೈಸ್ತವರಂದರೂ, ಯೇಸು ದೇವರು ಅಲ್ಲವೆಂದು, ಯೇಸು ದೇವರ ಕುಮಾರನೆಂದು ಎನ್ನುವವರು ಬಹಳ ಜನ ಕ್ರೈಸ್ತವರು ಇದ್ದಾರೆ. ದೇವರು ದೇವರಂತೆ ಬಂದು ಯಾರ ಹತ್ತಿರವೂ ನೇರವಾಗಿ ಮಾತನಾಡುವುದಿಲ್ಲ ಎನ್ನುವ ಮಾತು ಸತ್ಯವಾದದ್ದು. ಆ ಮಾತಿನ ಪ್ರಕಾರ ದೇವರು ಭೂಮಿ ಮೇಲೆಗೆ ದೇವರಾಗಿ ಎಂದಿಗೂ ಬರಲಾರನು. ಯಾರೊಂದಿಗೂ ದೇವರು ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ. ಆದರೇ ದೇವರು ಇತ್ತ ಮನುಷ್ಯನೂ ಅಲ್ಲದೆ ಅತ್ತ

ದೇವರೂ ಅಲ್ಲದೇ ಪ್ರತ್ಯೇಕವಾದ ಮನುಷ್ಯನಂತೆ ಕಾಣಿಸುವ, ಭಗವಂತನ ಅವತಾರವಾಗಿ ಬರುತ್ತಿದ್ದಾನೆ. ಆ ವಿಧವಾಗಿ ಬರುತ್ತೇನೆಂದು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲಿನಲ್ಲೇ ಭಗವಂತನೇ ಹೇಳಿದ್ದಾನೆ. ಕೃಷ್ಣನು ಹೇಗೆ ಬಂದಿದ್ದಾನೋ ಹಾಗೇ ಯೇಸೂ ಸಹ ಬಂದಿದ್ದಾನೆ. ಯೇಸೂ ಸಹ ಯೋಹಾನ್ ಸುವಾರ್ತೆಯಲ್ಲಿಯೂ, ಮತ್ತಾಯ ಸುವಾರ್ತೆಯಲ್ಲಿಯೂ ಆ ವಿಷಯ ಅರ್ಥವಾಗುವಹಾಗೆ ಅಲ್ಲಲ್ಲಿ ಹೇಳಿದ್ದಾನೆ. ಒಂದು ಸಂದರ್ಭದಲ್ಲಿ ನಾನು ನನ್ನ ತಂದೆ ಒಂದೇ ಎಂದು ಸಹ ಹೇಳಿದ್ದಾನೆ. ಆದರೂ ಯೇಸನ್ನು ಮನುಷ್ಯನಾಗಿ ಯೆಹೋವಾನ್ನು ದೇವರಾಗಿ ಮನುಷ್ಯರು ಹೋಲಿಸಿಕೊಂಡಿದ್ದಾರೆ. ಯೇಸುವೇ ಯೆಹೋವಾಯೆಂದಾಗಲೀ, ಯೆಹೋವಾಯೇ ಯೇಸು ಎಂದಾಗಲೀ ಗುರುತಿಸಲಾರದೆ ಹೋಗಿದ್ದಾರೆ. ದ್ವಾಪರಯುಗದಲ್ಲಿ ಕೃಷ್ಣನಾಗಿ ಬಂದಿರುವ ದೇವರನ್ನು ಸಹ ಈ ದಿನ ನಾವು ಹಿಂದುಗಳೆಂದು ಹೇಳಿಕೊಳ್ಳುವವರು ಕಂಡುಕೊಳ್ಳದೇ ಹೋಗಿದ್ದಾರೆ.

ಯೇಸು ಜನ್ಮಕ್ಕೂ ಕೃಷ್ಣನ ಜನ್ಮಕ್ಕೂ ಸ್ವಲ್ಪ ಸಂಬಂಧವಿದೆ. ಅದನ್ನು ನಂತರ ಹೇಳಿಕೊಳ್ಳೋಣ. ಭಾರತದೇಶದಲ್ಲಿ ಭಗವದ್ಗೀತೆ ಮೊದಲು ಹುಟ್ಟಿದೆ. ಹಾಗೇ ಬೈಬಲ್ ಇಜ್ರಾಯೇಲ್ ದೇಶದಲ್ಲಿ ಹುಟ್ಟಿದೆ. ಈ ಎರಡನ್ನೂ ಹೇಳಿದವರು ಕೃಷ್ಣನಾಗಲೀ, ಯೇಸಾಗಲೀ ಇಬ್ಬರೂ ಪ್ರತ್ಯಕ್ಷವಾಗಿ ಇದ್ದು ಮಾತನಾಡಿದವರೇ. ದೇವರು ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ ಎನ್ನುವ ಒಂದೇ ಒಂದು ಸೂತ್ರವನ್ನು ಅಡ್ಡ ಇಟ್ಟುಕೊಂಡು ದೇವರು ಭಗವಂತನು (ದೂತ) ಎನ್ನುವ ಇನ್ನೊಂದು ಹೆಸರಿಂದ, ಮಾರು ರೂಪದಲ್ಲಿ ಬಂದಿದ್ದರೂ ಬಂದಿರುವವನನ್ನು ಮನುಷ್ಯರು ಗುರುತಿಸಲಾರದೆ ಹೋಗಿದ್ದಾರೆ. ದ್ವಾಪರಯುಗದಲ್ಲಿ ಬಂದಿರುವ ಕೃಷ್ಣನಾಗಲೀ, ಕಲಿಯುಗದಲ್ಲಿ ಬಂದಿರುವ ಯೇಸುವಾಗಲಿ ಇಬ್ಬರೂ ಒಬ್ಬರೇ ಎಂದು ಯಾವ ಮಾತ್ರ ಯಾರ ಯೋಚನೆಗೂ ಬರಲಿಲ್ಲ. ಅವರಿಬ್ಬರೂ ಬಂದಿರುವ ಪದ್ಧತಿಯಾದರೂ ಒಂದೇಯೆಂದು ತಿಳಿದಿದೆಯಾ ಎಂದರೇ ಅದೂ ಸಹ ಮನುಷ್ಯರು ತಿಳಿಯಲಾರದೇ ಹೋಗಿದ್ದಾರೆ. ಪ್ರಥಮ ದೈವ ಗ್ರಂಥವೆಂದು

ಕರೆಯಲಾಗುವ ಭಗವದ್ಗೀತೆಯನ್ನು ಹೇಳಿದ ಕೃಷ್ಣನಾಗಲಿ, ಎರಡನೇ ದೈವ ಗ್ರಂಥವೆಂದು ಕರೆಯಲಾಗುವ ಬೈಬಲ್‌ನ್ನು ಹೇಳಿದ ಯೇಸುವಾಗಲಿ ಕಾಣಿಸುವುದಕ್ಕೆ ಇಬ್ಬರೂ ಮನುಷ್ಯರೇ. ಆದರೂ ಅವರು ಸಾಧಾರಣ ಮನುಷ್ಯರಾಗಿ ಬರಲಿಲ್ಲ. ಇಬ್ಬರೂ ದೇವರ ಜ್ಞಾನವನ್ನು ಭೂಮಿ ಮೇಲೆ ಬೋಧಿಸುವುದಕ್ಕೆ ಬಂದಿರುವ ದೂತರು.

ಪ್ರಥಮ ದ್ವಿತೀಯ ಎರಡು ದೈವ ಗ್ರಂಥಗಳ ಜ್ಞಾನವನ್ನು ಹೇಳಿರುವುದು ಮನುಷ್ಯರಂತಿರುವ ಇಬ್ಬರೂ ದೂತರೇ ಎಂದು ಹೇಳಬಹುದು. ಅವರನ್ನೇ ಮತ್ತೊಂದು ಹೆಸರಿಂದ ಭಗವಂತರು ಎಂದು ಸಹ ಹೇಳಬಹುದು. ದೇವರ ಸಮಾಚಾರವನ್ನು ತರುವವರು ದೂತರೇ ಆದರೂ ಅವರಿಗೆ ದೇವರ ಸಮಾಚಾರ ಹೇಗೆ ತಿಳಿದಿದೆಯೆಂದು ಪ್ರಶ್ನಿಸಿಕೊಂಡು ನೋಡಿದರೆ, ದೇವರ ಸಮಾಚಾರ ದೇವರಿಗೆ ಹೊರತು ಯಾರಿಗೂ ತಿಳಿಯದೆನ್ನುವ ಸೂತ್ರದ ಪ್ರಕಾರ ಅವರಿಗೂ (ದೂತರಿಗೂ) ಸಹ ತಿಳಿಯದೆಂದೇ ಅಂದುಕೊಳ್ಳುತ್ತೇವೆ. ಆದರೆ ದೂತರಾಗಿ ಬಂದಿರುವವರು ಸಂಪೂರ್ಣವಾಗಿ ದೇವರ ಸಮಾಚಾರವೆಲ್ಲವೂ ಹೇಳುತ್ತಿದ್ದಾರೆಂದರೆ, ಅವರಿಗೆ ದೇವರಿಗೆ ಮಧ್ಯೆ ಏನೋ ರಹಸ್ಯವಿದೆಯೆಂದು ಅರ್ಥವಾಗುತ್ತದೆ. ಆ ರಹಸ್ಯ ಏನಿರುತ್ತದೆಂದು ಪರಿಶೀಲಿಸಿ ನೋಡಿದರೆ, ದೇವರು ತನ್ನ ದೂತರನ್ನು ಭೂಮಿ ಮೇಲೆಗೆ ಕಳುಹಿಸುವುದಕ್ಕೆ ಆತನ ಹತ್ತಿರ ಒಬ್ಬರೆಂದರೆ ಒಬ್ಬರೂ ಸಹ ಇಲ್ಲ. ಆದ್ದರಿಂದ ದೇವರೇ ದೂತ ರೂಪವಾಗಿ ಕಾಣಿಸುವ ಮನುಷ್ಯನಾಗಿ ಬಂದು, ದೈವಜ್ಞಾನವನ್ನು ಸಂಪೂರ್ಣವಾಗಿ ಹೇಳುತ್ತಿದ್ದಾನೆ. ದೇವರು ಮಾರುವೇಷದಲ್ಲಿ ತನ್ನ ಜ್ಞಾನವನ್ನು ತಾನೇ ಹೇಳುತ್ತಿದ್ದಾನೆ. ಆದ್ದರಿಂದ ಆತನು (ದೂತ ಅಥವಾ ಭಗವಂತನು) ಹೇಳಿದ ಜ್ಞಾನದಲ್ಲಿ ಯಾವ ಸಂಶಯವೂ ಇರುವುದಿಲ್ಲ. ತಿರುಗಿ ಪ್ರಶ್ನೆ ಬಾರದ ತಿರುಗಿಲ್ಲದ ಜ್ಞಾನವನ್ನು ದೇವರು ಸ್ವತಃವಾಗಿಯೇ ಭಗವಂತನಾಗಿ ತಿಳಿಸುತ್ತಿದ್ದಾನೆಂದು ತಿಳಿಯಬೇಕು. ಭಗವಂತನ (ದೂತ) ರೂಪದಲ್ಲಿ ದ್ವಾಪರಯುಗ ಅಂತ್ಯದಲ್ಲಿ ಬಂದಿರುವ ಕೃಷ್ಣನು ಭಾರತದೇಶ ದಲ್ಲಿ ತನ್ನ ಜ್ಞಾನವನ್ನು ಬೋಧಿಸಿ ಪ್ರಥಮ ದೈವ ಗ್ರಂಥ ತಯಾರಾಗುವಂತೆ

ಮಾಡಿದ್ದಾನೆ. ನಂತರ ಮೂರು ಸಾವಿರ ವರ್ಷಗಳಿಗೆ ಕಲಿಯುಗದಲ್ಲಿ ಇಜ್ರಾಯೇಲ್ ದೇಶದಲ್ಲಿ ಮತ್ತೊಂದು ಅವತಾರವಾಗಿ, ಮತ್ತೊಂದು ಹೆಸರಿಂದ ಬರುವುದೂ ನಡೆದಿದೆ. ಅಲ್ಲಿ ತನ್ನ ಜೀವನ ಕಾಲದಲ್ಲಿ ಮೂರು ವರ್ಷಗಳು ಮಾತ್ರ ತನ್ನ ಜ್ಞಾನವನ್ನು ಬೋಧಿಸಿ ಹೋಗುವುದು ನಡೆದಿದೆ. ಕೃಷ್ಣನ ಜನ್ಮದಲ್ಲಿ ಯುದ್ಧರಂಗ ಸ್ಥಳದಲ್ಲಿ, ಯುದ್ಧ ಪ್ರಾರಂಭವಾಗುವ ಸಮಯದಲ್ಲಿ ಕೆಲವು ನಿಮಿಷಗಳು (ಐದಾರು ನಿಮಿಷಗಳು) ಮಾತ್ರವೇ ಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಹೇಳುವುದು ನಡೆದಿದೆ. ಈ ವಿಧವಾಗಿ ಒಂದೇ ದೇವರು ಒಂದೇ ಜ್ಞಾನವನ್ನು, ಎರಡು ರೂಪಗಳಲ್ಲಿ, ಎರಡು ದೇಶಗಳಲ್ಲಿ ಬೋಧಿಸುವುದರಿಂದ ಎರಡೂ ಒಂದೇಯೆಂದು, ಎರಡನ್ನೂ ಒಬ್ಬರೇ ಹೇಳಿದ್ದಾ ರೆಂದು ಬಹಳ ಜನರು ತಿಳಿಯದೇ ಹೋಗಿದ್ದಾರೆ.

ಇಲ್ಲಿಯವರೆಗು ಸುಮಾರು ಎರಡು ದೈವ ಗ್ರಂಥಗಳ ವಿಷಯ ತಿಳಿದುಹೋಗಿದೆ. ಇನ್ನು ಮೂರನೇ ದೈವ ಗ್ರಂಥ ವಿಷಯಕ್ಕೆ ಬಂದರೆ, ಅದನ್ನು ಹೇಳಿದವನು ದೂತನಲ್ಲ. ಈ ದಿನ ಮುಸ್ಲೀಮ್ ಸಮಾಜವೆಲ್ಲಾ ಜಿಬ್ರಯೇಲ್ ದೂತನಿಂದ ಪ್ರವಕ್ತ ಆದ ಮಹಮ್ಮದ್ ಅವರಿಗೆ ಖುರ್ಆನ್ ಗ್ರಂಥ ಹೇಳಲಾಗಿದೆಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ನಾವು ಅಂದುಕೊಂಡ ಹಾಗೆ ದೇವರ ದೂತ ಬಂದು ಹೇಳಲಿಲ್ಲವೆಂದು ತಿಳಿಯುತ್ತಿದೆ. ಮೊದಲು ಜ್ಞಾನವನ್ನು ವಾಣಿ (ವಹೀ) ಮೂಲಕ ದೇವರು ಹೇಳಿಸಿದಾಗ ಆಗ ಕೇಳಿದವನು ಸೂರ್ಯನು. ಸೂರ್ಯನು ಒಂದು ಗ್ರಹ. ಆಕಾಶ ಒಂದು ಮಹಾಭೂತ. ಸೃಷ್ಟಿ ಆದಿಯಲ್ಲಿ ಆಕಾಶವೆಂಬ ಭೂತದಿಂದ ಸೂರ್ಯ ಗ್ರಹಕ್ಕೆ ಜ್ಞಾನ ಹೇಳಲಾಗಿದೆ. ಸೂರ್ಯಗ್ರಹ ಭೂಮಿಮೇಲಿರುವ ಮನುವು ಎನ್ನುವಾತನಿಗೆ ಹೇಳುವುದೇ ಅಲ್ಲದೇ, ಖಗೋಳದಲ್ಲಿ ಮತ್ತೆ ಕೆಲವು ಭೂತಗಳಿಗೂ, ಗ್ರಹಗಳಿಗೂ ತನಗೆ ತಿಳಿದ ಜ್ಞಾನವನ್ನು ಹೇಳಲಾಗಿದೆ. ಆ ಪದ್ಧತಿಯಲ್ಲಿ ಗ್ರಹಗಳಲ್ಲಿ ಸ್ವಲ್ಪ ದೊಡ್ಡವನಾದ ಜಿಬ್ರಯೇಲ್ ಗ್ರಹಕ್ಕೆ ಕೂಡ ಹೇಳುವುದು ನಡೆದಿದೆ. ಸೂರ್ಯಗ್ರಹ ತನಗೆ ತಿಳಿದ ಜ್ಞಾನವನ್ನು ಭೂಮಿಮೇಲೆ ಭಾರತದೇಶದಲ್ಲಿ ಮನುವಿಗೆ

ಹೇಳಿದಹಾಗೆ, ಜಿಬ್ರಯೇಲ್ ಗ್ರಹ ಕೂಡಾ ತನಗೆ ತಿಳಿದ ಜ್ಞಾನವನ್ನು ಭೂಮಿ ಮೇಲೆ ತಿಳಿಸಬೇಕೆಂದು ನಿರ್ಣಯಿಸಿಕೊಂಡು, ಎಲ್ಲಾದರೆ ಯೇಸು ದೂತನಾಗಿ ಬಂದು ಹೋಗಿದ್ದಾನೋ, ಆ ಪ್ರಾಂತದೊಳಗೇ ಜಿಬ್ರಯೇಲ್ ಬಂದು ತನಗೆ ತಿಳಿದ ಜ್ಞಾನವನ್ನು ಸೂರ್ಯನು ಮನುವಿಗೆ ಹೇಳಿದಹಾಗೇ ಜಿಬ್ರಯೇಲ್ ಕೂಡಾ ಮಹಮ್ಮದ್ ಪ್ರವಕ್ತನಿಗೆ ಹೇಳುವುದು ನಡೆದಿದೆ. ಇಲ್ಲಿನ ಪ್ರತ್ಯೇಕತೆ ಏನೆಂದರೆ ಪ್ರಥಮ ದೈವ ಗ್ರಂಥ ಭಗವದ್ಗೀತೆಯಾಗಲೀ, ದ್ವಿತೀಯ ದೈವ ಗ್ರಂಥ ಬೈಬಲ್ ಆಗಲೀ ಗ್ರಹ ಹೇಳಿರುವವಲ್ಲ. ಆ ಎರಡು ಗ್ರಂಥಗಳನ್ನು ದೂತರು ಹೇಳಿದ್ದಾರೆ. ಅಂತಿಮ ದೈವ ಗ್ರಂಥವಾದ ಖುರ್‌ಆನ್ ವಿಷಯದಲ್ಲಿ ಹಾಗೆ ನಡೆಯಲಿಲ್ಲ. ಗ್ರಹ ಹೇಳಿರುವುದೇ ಗ್ರಂಥರೂಪವಾಗಿ ಬದಲಾವಣೆಯಾಗಿದೆ. ಸೂರ್ಯಗ್ರಹ ಹೇಳಿದ ನಂತರ ತಿರುಗಿ ಕೃಷ್ಣ ದೂತ ಹೇಳಿದಾಗ ಅದೇ ವಿಷಯ ಪ್ರಥಮ ದೈವ ಗ್ರಂಥವಾಗಿದೆ. ಎರಡನೆ ದೈವ ಗ್ರಂಥ ಸಹ ದೂತನಾದ ಯೇಸು ಹೇಳಿದ ನಂತರ ಗ್ರಂಥರೂಪವಾಗಿದೆ. ಆದರೇ ಸ್ವಲ್ಪ ಗಮನಿಸಬೇಕಾದ ವಿಷಯವಿದೆ. ಅದೇನೆಂದರೇ!

ಸೃಷ್ಟಿ ಆದಿಯಲ್ಲೇ ಸೂರ್ಯನಿಗೆ ವಾಣಿಮೂಲಕ ಜ್ಞಾನ ತಿಳಿದಾಗ, ತನಗೆ ತಿಳಿದ ಜ್ಞಾನವನ್ನು ಸೂರ್ಯನು ಭೂಮಂಡಲದಲ್ಲಿ ಭಾರತದೇಶದಲ್ಲಿ ತಿಳಿಸಿದ್ದಾನೆ. ಎಲ್ಲಾದರೇ ಗ್ರಹ ಜ್ಞಾನವನ್ನು ತಿಳಿಸಿದೆಯೋ ಅಲ್ಲೇ ಅಂದರೆ ಅದೇ ದೇಶದಲ್ಲೇ ಸ್ವಲ್ಪ ಆಕಡೆ ಈಕಡೆ ಇರುವ ಪ್ರದೇಶದೊಳಗೆ ಭಗವಂತನಾದ ಮನುಷ್ಯ ಬಂದು ಹೇಳುವುದು ನಡೆದಿದೆ. ಒಂದು ಬಾರಿ ಸೂರ್ಯಗ್ರಹ ಹೇಳಿರುವಾಗ, ಅದೇ ಜ್ಞಾನವನ್ನೇ ಎರಡನೇ ಬಾರಿ ಭಗವಂತನು ಹೇಳಿದಾಗ, ಆಗ ತಯಾರಾಗಿರುವುದೆ ಪ್ರಥಮ ದೈವ ಗ್ರಂಥ ಭಗವದ್ಗೀತೆ! ಆದರೆ ಭಾರತದೇಶಕ್ಕೆ ಸುಮಾರು ನಾಲ್ಕು ಅಥವಾ ಐದು ಸಾವಿರ ಕಿಲೋಮೀಟರುಗಳ ದೂರದಲ್ಲಿರುವ ಇಜ್ರಾಯೇಲ್ ದೇಶದಲ್ಲಿ ಇಂದಿಗೂ ಯೇಸು ಎರಡು ಸಾವಿರದ ನಲವತ್ತುನಾಲ್ಕು (2044) ವರ್ಷಗಳಂದು ಹುಟ್ಟುವುದು ನಡೆದಿದೆ. ಯೇಸು ಯಾರಾಗಿರುವುದು ಕ್ರೈಸ್ತವರಿಗೆ ತಿಳಿಯದಿದ್ದರೂ ದ್ವಾಪರ ಯುಗ ಅಂತ್ಯದಲ್ಲಿ ಕೃಷ್ಣನಾಗಿ ಬಂದಿರುವ

ವನೇ (ದೇವರೇ) ತಿರುಗಿ ಯೇಸು ರೂಪದಲ್ಲಿ ಇಜ್ರಾಯೇಲ್ ದೇಶದಲ್ಲಿ ಬಂದು ಜ್ಞಾನವನ್ನು ಹೇಳುವುದು ನಡೆದಿದೆ. ಅಲ್ಲಿಗೆ ಮೊದಲು ಗ್ರಹ ಬರಲಿಲ್ಲ. ಅಲ್ಲಿಗೆ ನೇರವಾಗಿ ಮೊದಲು ದೂತನೇ ಬಂದಿದ್ದಾನೆ. ಯೇಸು ದೂತನಾಗಿ ಬಂದು ಹೇಳಿದ ಜ್ಞಾನ ಕೂಡಲೇ ಬೈಬಲ್ ಗ್ರಂಥವಾಗಿದೆ. ಆದರೇ ಇಲ್ಲಿ ಯೇಸು ಹೇಳಿದ ಜ್ಞಾನವನ್ನು ಬೈಬಲ್‌ನಲ್ಲಿ ಭಾಗವಾಗಿ ಮಾಡಿ 39 ಪಾಠಗಳನ್ನು ಹಳೆ ನಿಬಂಧನೆ ಎಂದು ಮೊದಲ ಭಾಗವಾಗಿ ಸೇರಿಸಿ, ಹೊಸ ನಿಬಂಧನೆ ಎನ್ನುವ ಎರಡನೇ ಭಾಗವನ್ನು ಯೇಸು ಹೇಳಿದ ನಾಲ್ಕು ಪಾಠಗಳೊಂದಿಗೆ ಪ್ರಾರಂಭಿಸಿ ಅದರ ನಂತರ 23 ಪಾಠಗಳನ್ನು ಬರೆದು ಒಟ್ಟು ಅರವತ್ತಾರು (66) ಪಾಠಗಳಾಗಿ ಬೈಬಲ್ ಗ್ರಂಥವನ್ನು ತಯಾರು ಮಾಡುವುದು ನಡೆದಿದೆ. ಇದೆಲ್ಲವನ್ನೂ ಗಮನಿಸಿದರೆ ಪ್ರಸ್ತುತ ಕಾಲದಲ್ಲಿ ಬೈಬಲ್ ಎಂದು ಹೇಳಲಾಗುವ ಗ್ರಂಥದಲ್ಲಿರುವ ಅರವತ್ತಾರು ಪಾಠಗಳಲ್ಲಿ ನಿಜವಾದ ಬೈಬಲ್ ಕೇವಲ ನಾಲ್ಕು ಸುವಾರ್ತೆಗಳೆಂದೇ ತಿಳಿಯಬೇಕು. ಯೇಸು ಹೇಳಿದಾಗ ಆತನ ಸಮಕ್ಷಮದಲ್ಲಿರುವ ನಾಲ್ವರು ಬರೆದ ನಾಲ್ಕು ಪ್ರತಿಗಳನ್ನು ನಾಲ್ಕು ಸುವಾರ್ತೆಗಳಾಗಿ ಬೈಬಲ್‌ನಲ್ಲಿ ಸೇರಿಸಲಾಗಿದೆ. ನಾಲ್ಕು ಸುವಾರ್ತೆಗಳಲ್ಲಿ ಸಹ ಒಂದೇ ಸುವಾರ್ತೆ ಜ್ಞಾನವೇ ಉಳಿದ ಮೂರು ಸುವಾರ್ತೆಗಳಲ್ಲಿ ಇದೆಯೆಂದು ಹೇಳಬಹುದು. ಆ ಲೆಕ್ಕ ಪ್ರಕಾರ ನೋಡಿದರೆ ಯೇಸು ಪ್ರತ್ಯಕ್ಷವಾಗಿ ಮಾತನಾಡಿರುವುದು, ಆತನ ಜೀವಿತಕಾಲದಲ್ಲಿ ಹೇಳಿರುವುದು, ಆತನು ಕೊನೆಯಲ್ಲಿ ಹೇಳಿದ ಮೂರು ವರ್ಷಗಳ ಜ್ಞಾನವನ್ನು ನಾಲ್ವರು ಬರೆಯುವುದರಿಂದ, ಬರೆದ ನಾಲ್ವರ ಹೆಸರುಗಳಿಂದ ನಾಲ್ಕು ಸುವಾರ್ತೆಗಳಾಗಿ ಹೇಳುವುದು ನಡೆದಿದೆ. ಒಂದು ಸುವಾರ್ತೆಯಲ್ಲಿರುವುದೇ ಉಳಿದ ಮೂರು ಸುವಾರ್ತೆಗಳಲ್ಲಿ ಇರುವುದರಿಂದ, ನಾಲ್ಕು ಓದಿದರೂ ಒಂದೇ, ಒಂದು ಓದಿದರೂ ಒಂದೇ. ಹಾಗಿರುವಾಗ ಎರಡನೆಯ ದೈವ ಗ್ರಂಥವಾಗಿರುವ ಬೈಬಲ್‌ನಲ್ಲಿ ದೂತ ಬಂದು ಹೇಳಿರುವುದು ಸ್ವಲ್ಪ ಮಾತ್ರವಿದೆಯೆಂದು ತಿಳಿಯಬೇಕು. ಬೈಬಲ್‌ನ್ನು ಕ್ರೈಸ್ತವ ಮತ ಗ್ರಂಥವಾಗಿ ಕ್ರೈಸ್ತವರು ಹೇಳಿಕೊಂಡರೂ, ವಾಸ್ತವಕ್ಕೆ ಅದು ಕ್ರೈಸ್ತವರ ಗ್ರಂಥವೇನೂ ಅಲ್ಲ.

ಅದರಲ್ಲಿ ಮನುಷ್ಯರೆಲ್ಲರಿಗೂ ಕೆಲಸಕ್ಕೆ ಬರುವ ಜ್ಞಾನವೇ ಇದೆ. ನಮ್ಮದು ಎಂದು ಹೇಳುವ ಕ್ರೈಸ್ತವರು ಬೈಬಲ್‌ನಿಂದ ಏನು ಗ್ರಹಿಸಿಕೊಂಡಿದ್ದಾರೆಂದು ಗಮನಿಸಿದರೆ, ಸುಮಾರು ಶೇಕಡ 99 ರಷ್ಟು ಜನ ಯೇಸು ಹೇಳಿದ ಸಮಾಚಾರವನ್ನು ಬಿಟ್ಟು ಮನುಷ್ಯರು ಹೇಳಿದ ಸಮಾಚಾರವೇ ತಿಳಿದು ಕೊಂಡಿದ್ದಾರೆ. ಅವರಲ್ಲಿ ಒಬ್ಬರೂ ಸಹ ನಮಗೆ ಮುಖ್ಯವಾದದ್ದು ಯೇಸು ಹೇಳಿದ ಸಮಾಚಾರವಲ್ಲವೇ ಯೆಂದು ಯಾರೂ ಆಲೋಚಿಸಲಿಲ್ಲ. ಯೇಸು ಹೇಳಿರುವುದು ಹೊರತು ಉಳಿದಿರುವುದು ಅವಶ್ಯಕವಿಲ್ಲವಲ್ಲ ಎಂದು ಅಂದುಕೊಳ್ಳಲಿಲ್ಲ. ಮನುಷ್ಯರನ್ನು, ಭಗವಂತನಾಗಿ ಬಂದಿರುವ ಯೇಸುವನ್ನು ಇಬ್ಬರನ್ನೂ ಸೇರಿಸಿ, ಇಬ್ಬರೂ ಹೇಳಿದವುಗಳನ್ನು ಸಮಾನವಾಗಿ ಸಹಕರಿಸಿದ್ದಾರೆ. ಹಾಗೆ ಎಲ್ಲವನ್ನು ಓದುವುದರಿಂದ ಅದರಲ್ಲಿ ಯೇಸುಗೆ ಏನು ಪ್ರತ್ಯೇಕತೆ ಇದೆಯೆಂದು ಸ್ವಲ್ಪವೂ ಸಹ ಗ್ರಹಿಸಲಿಲ್ಲ. ಮೇಲಕ್ಕೆ ಮಾತುಗಳಲ್ಲಿ ಯೇಸೇ ದೇವರೆಂದರೂ, ಅವರ ಮನಸ್ಸುಗಳಲ್ಲಿ ಯೇಸು ದೇವರ ಕುಮಾರನೆಂದು ಇದೆ. ಆದ್ದರಿಂದ ಬೈಬಲ್‌ನಿಂದ ಕ್ರೈಸ್ತವರು ಗ್ರಹಿಸಿಕೊಂಡಿರು ವುದು ಏನೂ ಇಲ್ಲವೆಂದು ತಿಳಿಯುತ್ತಿದೆ.

ಇಜ್ರಾಯೇಲ್ ದೇಶದೊಳಕ್ಕೆ ಯೇಸು ದೂತನಾಗಿ ಬಂದು ಹೇಳಿರುವುದು ಸಂಪೂರ್ಣ ಜ್ಞಾನವಾದರೂ ಅದು ಉನ್ನತವಾದುದೆಂದು ಬೈಬಲ್‌ನಲ್ಲಿ ಕಾಣಿಸದೇ ಹೋದರೂ, ಯೇಸು ಹೇಳಿರುವುದು ನಾಲ್ಕು ಸುವಾರ್ತೆಗಳಾಗಿಯೇ ಇದ್ದರೂ, ಆತನು (ದೂತ) ಹೇಳಿರುವುದು ಅಸಲಾದ ದೇವರ ಜ್ಞಾನವೇ ಆಗುವುದರಿಂದ ಸ್ವಲ್ಪವಾಗಿದ್ದ ಬೈಬಲ್‌ನ್ನು ದ್ವಿತೀಯ ದೈವ ಗ್ರಂಥವೆಂದೇ ಹೇಳಬಹುದು. ಆದರೆ ಇಲ್ಲಿ ಗ್ರಹ ಬಂದು ಹೇಳಿದ ನಂತರ ದೂತ ಬಂದು ಹೇಳಲಿಲ್ಲ. ಈ ಪ್ರಾಂತದಲ್ಲಿ ಮೊದಲು ದೂತ (ಭಗವಂತನು) ಬಂದಿದ್ದಾನೆ, ನಂತರ ಗ್ರಹಬಂದು ಹೇಳಿದೆ. ಆದರೆ ದೂತ ಬಂದು ಹೇಳಿರುವುದು ಒಂದು ಗ್ರಂಥವಾಗಿದೆ. ಗ್ರಹ ಬಂದು ಹೇಳಿರುವುದು ಮತ್ತೊಂದು ಗ್ರಂಥವಾಗಿದೆ. ಇದು ಇಜ್ರಾಯೇಲ್ ದೇಶದಲ್ಲಿ ನಡೆದ ವಿಷಯವಾದಾಗ, ಭಾರತ ದೇಶದಲ್ಲಿ

ಮೊದಲು ಗ್ರಹ ಬಂದು ಹೇಳಿಹೋಗಿದೆ. ನಂತರ ಅದೇ ವಿಷಯವನ್ನೇ ದೂತನಾದ (ಭಗವಂತನಾದ) ಶ್ರೀ ಕೃಷ್ಣನು ಬಂದು ಹೇಳುವುದು ನಡೆದಿದೆ. ಭಾರತದೇಶದಲ್ಲಿ ಗ್ರಹ ಹೇಳಿದ ಲಕ್ಷ ವರ್ಷಗಳಿಗೆ ದೂತ ಬಂದು ಗ್ರಹ ಹೇಳಿರುವುದನ್ನೇ ಹೇಳಿದ ನಂತರ ಅದೆಲ್ಲವೂ ಪ್ರಥಮ ದೈವ ಗ್ರಂಥವಾಗಿ ತಯಾರಾಗಿದೆ. ದೂತ ಹೇಳಿರುವುದಾಗಲೀ, ಗ್ರಹ ಹೇಳಿರುವುದಾಗಲೀ ಒಂದೇ ಜ್ಞಾನವೇ ಆಗಿರುವುದರಿಂದ ಅದರಲ್ಲಿ ಭೇದವಿಲ್ಲ. ಹಾಗೇ ಇಜ್ರಾಯೇಲ್ ದೇಶದಲ್ಲಿ ಮೊದಲು ದೂತ ಬಂದು ಹೇಳಿದರೂ, ಹಿಂದೆ ಗ್ರಹ ಬಂದು ಹೇಳಿದರೂ ಅಲ್ಲಿಯೂ ಸಹ ದೂತ ಹೇಳಿರುವುದಾಗಲೀ, ಗ್ರಹ ಹೇಳಿರುವುದಾಗಲೀ ಎರಡೂ ಸೃಷ್ಟ್ಯಾದಿಯಲ್ಲಿ ಹೇಳಲಾಗಿರುವ ಜ್ಞಾನವೇ ಆಗಿರುವುದರಿಂದ ಅವುಗಳಲ್ಲಿಯೂ ಸಹ ಭೇಧವಿಲ್ಲ. ವಾಸ್ತವವಾಗಿ ಮೂರು ದೈವ ಗ್ರಂಥಗಳಲ್ಲಿ ಒಂದೇ ಜ್ಞಾನವಿರಬೇಕು. ಹಾಗೇ ಮೂರು ಗ್ರಂಥಗಳಲ್ಲಿ ದೇವರು ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನವೇ ಇದೆ. ಆದರೇ ಮೊದಲ ಗ್ರಂಥವಾದ ಭಗವದ್ಗೀತೆ ತಯಾರಾದ ನಂತರ ಕೆಲವು ವರ್ಷಗಳಿಗೆ ಕೆಲವರು ಅದೇ ಕೆಲಸವಾಗಿ ತಮ್ಮ ಅಜ್ಞಾನವನ್ನು ಅದರಲ್ಲಿ ಕೆಲವು ಶ್ಲೋಕಗಳ ರೂಪದಲ್ಲಿ ಹೇಳಿಸುವುದರಿಂದ ಸ್ವಲ್ಪ ಬದಲಾವಣೆಯಿಂದ ಕೆಲವರಿಗೆ ಕಾಣಿಸಿರಬಹುದು. ಇನ್ನು ಬೈಬಲ್ ವಿಷಯಕ್ಕೆ ಬಂದರೆ ದೂತ ಹೇಳಿರುವುದು ಒಂದು ಭಾಗವಾದರೆ ಉಳಿದವರು ಹೇಳಿರುವುದು ಅರವತ್ತೆರಡ ರಷ್ಟು ಇದೆ. ಆದ್ದರಿಂದ ದೇವರ ಜ್ಞಾನವನ್ನು ಬಿಟ್ಟು ಓದುವವರಿಗೆ ಬೈಬಲ್‌ಗಿಂತ ಭಿನ್ನವಾಗಿ ಭಗವದ್ಗೀತೆ ಕಾಣಿಸಿರಬಹುದು. ಬೈಬಲ್‌ನಲ್ಲಾಗಲಿ, ಭಗವದ್ಗೀತೆಯಲ್ಲಾಗಲಿ ದೇವರು ಹೇಳಿದವುಗಳನ್ನು ಮಾತ್ರ ನೋಡಿದರೆ, ಎರಡರಲ್ಲಿ ಯಾವ ವ್ಯತ್ಯಾಸವಿಲ್ಲವೆಂದು ಹೇಳಬಹುದು.

ಅದೇ ವಿಧವಾಗಿ ಖುರ್‌ಆನ್ ವಿಷಯಕ್ಕೆ ಬಂದು ನೋಡಿದರೆ ಸೃಷ್ಟ್ಯಾದಿಯಲ್ಲಿ ಸೂರ್ಯನು ಕೇಳಿದ ಜ್ಞಾನವನ್ನೇ, ಸೂರ್ಯನು ಜಿಬ್ರಯೇಲ್‌ಗೆ ಹೇಳುವುದು ನಡೆದಿದೆ. ಜಿಬ್ರಯೇಲ್ ಕೇಳಿದ ಜ್ಞಾನವನ್ನೇ 1400 ವರ್ಷಗಳ

ಪೂರ್ವ ಭೂಮಿಮೇಲೆಗೆ ಇಜ್ರಾಯೇಲ್ ಪ್ರಾಂತದೊಳಗೇ ಬಂದು ಮಹಮ್ಮದ್ ಎನ್ನುವ ವ್ಯಕ್ತಿಗೆ ಹೇಳಿ ಹೋಗುವುದು ನಡೆದಿದೆ. ಜಿಬ್ರಯೇಲ್ ಹೇಳುವವರೆಗು ಚೆನ್ನಾಗೇ ಇದ್ದರೂ ಜ್ಞಾನ ಬರವಣಿಗೆ ರೂಪದಲ್ಲಿ ಖುರ್‌ಆನ್ ಗ್ರಂಥವಾಗಿ ಬರೆದಾಗ ಅದರೊಳಗೆ ಕೆಲವು ದೇವರು ಹೇಳದ ವಿಷಯಗಳು ಸಹ ಸೇರಿವೆ. ದೇವರ ವಿಷಯಗಳು ಇದ್ದೂ, ದೇವರು ಹೇಳದ ವಿಷಯಗಳೂ ಸಹ ಯಾವುದೋ ಒಂದು ವಿಧವಾಗಿ ಸೇರಿವೆ. ಮೊದಲು ಎರಡು ಗ್ರಂಥಗಳೊಳಗೆ ಕೆಲವು ದೇವರು ಹೇಳದ ವಿಷಯಗಳು, ಮನುಷ್ಯರು ಹೇಳಿದ ವಿಷಯಗಳು ಸೇರಿಹೋದಂತೆ ಖುರ್‌ಆನ್ ಗ್ರಂಥದೊಳಕ್ಕೆ ಸಹ ಸೇರುವಹಾಗೆ ದೇವರೇ ಮಾಡಿದ್ದಾನೆಂದು ಕೊಳ್ಳೋಣ. ದೇವರು ತನಗೆ ಇಷ್ಟವಾದವರನ್ನು ಮಾತ್ರವೇ ತನ್ನೆಡೆಗೆ ಎಳೆದುಕೊಳ್ಳುವಹಾಗೆ ಮೂರು ಗ್ರಂಥಗಳನ್ನು ಹಾಗೇ ಬದಲಾಯಿಸಿದ್ದಾನೆ. ಇದೆಲ್ಲವನ್ನೂ ಗಮನಿಸಿದರೆ ಒಂದು ಪದ್ಧತಿ ಪ್ರಕಾರ ದೇವರು ತನ್ನ ಜ್ಞಾನವನ್ನು ತಿಳಿಸಿದಕಡೆಯೇ ಸ್ವಲ್ಪ ಅಜ್ಞಾನವನ್ನೂ ಸಹ ಇಟ್ಟಿದ್ದಾನೆಂದು ತಿಳಿಯುತ್ತಿದೆ. ಖುರ್‌ಆನ್ ಗ್ರಂಥದಲ್ಲಿ ಸ್ವಲ್ಪ ಮನುಷ್ಯನ ಜ್ಞಾನವಿರುವಾಗ ಹೆಚ್ಚಾಗಿ ಜಿಬ್ರಯೇಲ್ ಹೇಳಿದ ದೈವ ಜ್ಞಾನವೇ ಇದೆ. ಬೈಬಲ್‌ನ್ನು ಖುರ್‌ಆನ್‌ನನ್ನು ಹೋಲಿಸಿ ನೋಡಿದರೆ ಬೈಬಲ್‌ನಲ್ಲಿ ಹೆಚ್ಚಾಗಿ ಮನುಷ್ಯರು ಹೇಳಿರುವುದು, ಕಡಿಮೆಯಾಗಿ ದೂತ (ಯೇಸು) ಹೇಳಿರುವುದು ಇದೆ. ಮೂರು ದೈವ ಗ್ರಂಥಗಳನ್ನು ಸೇರಿಸಿ ನೋಡಿದರೆ ಭಗವದ್ಗೀತೆಯಲ್ಲಿ ಕಡಿಮೆಯಾಗಿ ಮನುಷ್ಯರು ಹೇಳಿರುವುದು ಇದೆ. ಭಗವದ್ಗೀತೆಯನ್ನು ಮೊದಲು ಗ್ರಹ ನಂತರ ದೂತ (ಭಗವಂತನು) ಹೇಳಿರುವುದರಿಂದ ಅದರೊಳಗೆ ಕೆಲವು ಸಂದರ್ಭಗಳಲ್ಲಿ ಹೊರತು ಉಳಿದ ಕಡೆ ಮನುಷ್ಯರ ರಚನೆಗಳು ಅದರೊಳಗೆ ಸೇರದೆ ಹೋಗಿವೆ. ಉಳಿದ ಬೈಬಲ್ ಕೇವಲ ದೂತ ಹೇಳಿರುವುದೇ ಆಗಿರುವುದರಿಂದ, ಹಾಗೇ ಖುರ್‌ಆನ್ ಕೇವಲ ಗ್ರಹ ಹೇಳಿರುವುದೇ ಆಗಿರುವುದರಿಂದ, ಅವುಗಳೊಳಗೆ ಸುಲಭವಾಗಿ ಮನುಷ್ಯರ ರಚನೆಗಳು ಸೇರಿಹೋಗಿವೆ. ಹಾಗೆ ಸೇರಿಹೋದರೂ ಯಾವುದು ದೇವರು ಹೇಳಿರುವುದು, ಯಾವುದು ಮನುಷ್ಯರು ಹೇಳಿರುವುದೆಂದು

ಕಂಡುಕೊಳ್ಳುವುದಕ್ಕೆ ದೇವರು ಅವಕಾಶವನ್ನು ಸಹ ಕೊಟ್ಟಿದ್ದಾನೆ. ಯಾರಾದರೆ ದೇವರನ್ನು ಪೂರ್ತಿ ನಂಬಿದ್ದಾರೋ, ಯಾರಿಗಾದರೆ ದೇವರ ಜ್ಞಾನ ಅತ್ಯಂತ ಆನಂದವನ್ನು ಕೊಡುತ್ತದೋ, ಯಾರಿಗಾದರೆ ನಿಜವಾದ ತಂದೆ ಪರಮಾತ್ಮ ಯೆಂದೂ, ನಿಜವಾದ ತಾಯಿ ಪ್ರಕೃತಿಯೆಂದೂ ತಿಳಿದಿರುತ್ತದೋ ಅಂಥವರಿಗೆ ದೈವಗ್ರಂಥಗಳೊಳಗಿನ ತನ್ನ ಜ್ಞಾನ ಪ್ರತ್ಯೇಕವಾಗಿ ಕಾಣಿಸುವಹಾಗೆ ಮಾಡುವನು. ಮನುಷ್ಯರು ಬರೆದ ಜ್ಞಾನವನ್ನು ನೋಡಿದಕೂಡಲೇ ಇದು ಕಲುಷಿತ ಜ್ಞಾನವೆಂದು ಅರ್ಥವಾಗುವ ಹಾಗೆ ಮಾಡುತ್ತಾನೆ. ಈ ಪದ್ಧತಿ ಪ್ರಕಾರ ದೇವರಿಗೆ ಇಷ್ಟವಾದವರನ್ನು ತನ್ನ ಕಡೆ ದೇವರು ಬರಮಾಡಿಕೊಳ್ಳುವನು, ತನ್ನ ಜ್ಞಾನ ಪೂರ್ತಿ ಅರ್ಥವಾಗುವಹಾಗೆ ಮಾಡುವನು.

ಭೂಮಿಮೇಲೆ ನಮಗೆ (ನನಗೆ) ತಿಳಿದಮಟ್ಟಿಗೆ ಎರಡು ದೇಶಗಳಲ್ಲೇ ದೇವರ ಜ್ಞಾನ ಹೇಳಲಾಗಿದೆ. ಹೇಳಲಾಗಿರುವ ಎರಡೂ ಕಡೆ ಒಂದು ಗ್ರಹವೂ, ಒಬ್ಬ ದೂತನಿಂದ ಜ್ಞಾನ ಹೇಳಲಾಗಿದೆಯೆಂದು ತಿಳಿದುಹೋಗಿದೆ. ಪದ್ಧತಿ ಪ್ರಕಾರ ಎರಡೂ ಕಡೆ ಎರಡು ದೈವ ಗ್ರಂಥಗಳೇ ತಯಾರಾಗಬೇಕಾಗಿದ್ದಾಗ ತನ್ನ ರಹಸ್ಯ ಸುಲಭವಾಗಿ ತಿಳಿಯದಂತಿರುವುದಕ್ಕೆ ದೇವರು ಮೂರು ಗ್ರಂಥಗಳನ್ನು ತಯಾರು ಮಾಡಿಸಿದ್ದಾನೆ. ಹಾಗೆ ಮಾಡುವುದಕ್ಕೂ ಸಹ ಸ್ವಲ್ಪ ಕಾರಣವಿದೆ, ಅದನ್ನು ನಂತರ ವಿವರಿಸಿಕೊಳ್ಳೋಣ. ದೇವರು ತನ್ನ ಜ್ಞಾನವನ್ನು ಸರ್ವ ಪ್ರಪಂಚದಲ್ಲಿಯೂ ವ್ಯಾಪಿಸುವುದಕ್ಕೆ ತಕ್ಕಹಾಗೇ ಆಕಾಶದಿಂದ ಸೂರ್ಯನಿಗೆ ಹೇಳಿಸಿದ್ದಾನೆ. ನಂತರ ಸೂರ್ಯನಿಂದ ಎಲ್ಲ ಗೋಳಗಳಿಗೂ, ಎಲ್ಲ ಗ್ರಹಗಳಿಗೂ, ಎಲ್ಲ ದೇಶಗಳಿಗೂ ವ್ಯಾಪಿಸುವಹಾಗೆ ಮಾಡಿದ್ದಾನೆ. ಅದರಲ್ಲಿ ಭಾಗವಾಗಿ ಸೂರ್ಯನು ಭೂಮಿಮೇಲಿರುವ ಭಾರತದೇಶದಲ್ಲಿ ದಕ್ಷಿಣ ಭಾಗದಲ್ಲಿರುವ ಶ್ರೀಲಂಕ ಸಮೀಪದಲ್ಲಿ ಮನುವಿಗೆ ತೆರೆಯ ಮರೆಯಲ್ಲಿ ಬೋಧಿಸಿದ್ದಾನೆ. ಸೂರ್ಯನು ಗ್ರಹವಾದ್ದರಿಂದ ತನ್ನ ಸ್ಥೂಲಶರೀರವಾದ ಉರಿಯುತ್ತಿರುವ ಗೋಳವನ್ನು ಆಕಾಶದಲ್ಲೇ ಬಿಟ್ಟು ಸೂಕ್ಷ್ಮ ಶರೀರದೊಂದಿಗೆ ಭೂಮಿ ಮೇಲೆ ಬಂದು, ಇಲ್ಲಿ ತನಗೆ ತಕ್ಕ ವ್ಯಕ್ತಿ ಶರೀರದೊಳಗೆ ಸೇರಿ, ತಾನು ಕಾಣಿಸದೇ

ತಾನು ಸೇರಿದ ಮನುಷ್ಯ ಶರೀರದಿಂದ ಮಾತನಾಡುತ್ತಾ ಮನುವಿಗೆ ದೇವರ ಜ್ಞಾನ ಹೇಳುವುದು ನಡೆದಿದೆ. ಇಲ್ಲಿ ಸೂರ್ಯ ಗ್ರಹ ಹೇಗೆ ತೆರೆಯ ಮರೆಯಿಂದ ಹೇಳಲಾಗಿದೆಯೋ, ಹಾಗೇ ಜಿಬ್ರಯೇಲ್ ಗ್ರಹವೂ ಸಹ ತನ್ನ ಸೂಕ್ಷ್ಮ ಶರೀರದೊಂದಿಗೆ ಬಂದು ಒಂದು ಸ್ಥೂಲ ಶರೀರವನ್ನಾಶ್ರಯಿಸಿ ತೆರೆಯ ಮರೆಯಲ್ಲಿ ಮಹಮ್ಮದ್ ಪ್ರವಕ್ತರವರಿಗೆ ದೇವರ ಜ್ಞಾನವನ್ನು ಹೇಳುವುದು ನಡೆದಿದೆ. ಆದರೇ ಸೂರ್ಯಗ್ರಹ ಒಂದು ದಿನವೇ ಮನುವಿಗೆ ಜ್ಞಾನವನ್ನು ಹೇಳಿರುವಾಗ ಜಿಬ್ರಯೇಲ್ ಗ್ರಹ ಸುಮಾರು 23 ವರ್ಷಗಳು ದೇವರ ಜ್ಞಾನವನ್ನು ಹೇಳುವುದು ನಡೆದಿದೆ. ಸೂರ್ಯನು ತಾನು ಪ್ರವೇಶಿಸಿದ ಶರೀರದಿಂದ ಕಾಣಿಸಿ ಮಾತನಾಡಿದರೂ, ಹೇಳುವ ಸೂರ್ಯನು ಮಾತ್ರ ಕಾಣಿಸಲಿಲ್ಲ. ಮಾತನಾಡುವ ಶರೀರ ಕಾಣಿಸಿದರೂ, ಜ್ಞಾನವನ್ನು ಹೇಳಿದ ಸೂರ್ಯನು ಮಾತ್ರ ಕಾಣಿಸಲಿಲ್ಲ. ಆದ್ದರಿಂದ ಆ ವಿಧಾನವನ್ನು ತೆರೆಯ ಮರೆಯಲ್ಲಿ ಹೇಳಿದ ವಿಧಾನವೆಂದು ದೇವರೇ ಖುರ್ಆನ್ ಗ್ರಂಥದಲ್ಲಿ 42ನೇ ಸುರಾ, 51ನೇ ಆಯತ್‌ನಲ್ಲಿ ಹೇಳಿದ್ದಾನೆ. ಇಲ್ಲೊಂದು ಪ್ರಶ್ನೆ ಬರಬಹುದು, ಅದೇನೆಂದರೇ! ಸೂರ್ಯನು ಮನುವಿಗೆ ಒಂದು ದಿನ ಮಾತ್ರ ಹೇಳಿರುವಾಗ, ಜಿಬ್ರಯೇಲ್‌ನಿಂದ ಮಹಮ್ಮದ್ ಪ್ರವಕ್ತರಿಗೆ ಹೇಳಿದಾಗ 23 ವರ್ಷಗಳು ಏಕೆ ಬೇಕಾಗಿವೆಯೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಸೂರ್ಯನು ಕಾಣಿಸದೇ ತೆರೆಯ ಮರೆಯಲ್ಲಿದ್ದರೂ, ಸೂರ್ಯನು ಪ್ರವೇಶಿಸಿದ ಶರೀರ ಪ್ರತ್ಯಕ್ಷವಾಗಿ ಕಾಣಿಸಿ ಮನುವಿಗೆ ಹೇಳುವುದು ನಡೆದಿದೆ. ಮಾತನಾಡುತ್ತಿರುವುದು ಸೂರ್ಯನಾದರೂ, ಕಾಣಿಸುವ ಶರೀರ ಮನುಷ್ಯನದೆಂದು ಆ ದಿನ ಮನುವಿಗೆ ತಿಳಿದಿದೆ. ಆ ದಿನ ಮನುವು ಒಬ್ಬ ಮಹರ್ಷಿ, ಎಷ್ಟೋ ಜ್ಞಾಪಕ ಶಕ್ತಿ ಇರುವವನು, ಈ ದಿನ ಮೇಧಾವಿಯಾದ ಅಂಬೇಡ್ಕರ್ ರಾಜ್ಯಾಂಗವನ್ನು ಬರೆದು ಪರಿಪಾಲನೆ ಹೀಗೇ ಇರಬೇಕೆಂದು ಸೂಚಿಸಿದಹಾಗೆ, ಆ ದಿನ ಮನುವು ಮಾನವನು ಹೀಗೇ ಇರಬೇಕೆಂದು ಸೂಚಿಸಿದ ಮೇಧಾವಿ. ಮನುವುನಿಂದಲೇ ಆತನ ನಡವಳಿಕೆಗಳಿಗೆ ಅಭ್ಯಾಸವಾಗಿರುವುದರಿಂದಲೇ ನಮಗೆ

ಮನುಷ್ಯರೆಂದು (ಮಾನವರೆಂದು) ಹೆಸರು ಬಂದಿದೆ. ಆ ದಿನ ಮನುವು ದೊಡ್ಡ ಬುದ್ಧಿಬಲವಿರುವವನು, ಹಾಗೇ ಜ್ಞಾಪಕ ಶಕ್ತಿ ಇರುವವನು. ಆದ್ದರಿಂದ ಇರುವ ಜ್ಞಾನವೆಲ್ಲವೂ ಒಂದೇ ದಿನ ಸೂರ್ಯನು ಹೇಳುವುದು ನಡೆದಿದೆ. ಆದರೆ ಜಿಬ್ರಯೇಲ್ ಎರಡು ಅಥವಾ ಮೂರು ವಾಕ್ಯಗಳನ್ನು ಮಾತ್ರ ಒಂದು ಬಾರಿ ಮಹಮ್ಮದ್ ಪ್ರವಕ್ತರವರಿಗೆ ಹೇಳುವುದು ನಡೆದಿದೆ. ಅದಕ್ಕೆ ಕಾರಣ ಪ್ರವಕ್ತರವರು ನಿರಕ್ಷರಸ್ತ. ಪ್ರವಕ್ತಗೆ ಓದು ಬರುವುದಿಲ್ಲ. ಹೇಳಿದ ವಿಷಯವನ್ನು ತಾನು ಸ್ವತಃವಾಗಿ ಬರೆದುಕೊಳ್ಳಲಾರನೆನ್ನುವ ಕಾರಣದಿಂದ, ಹೇಳಿರುವುದನ್ನು ಇತರರಿಗೆ ಹೇಳಿ ಬರೆಸಿಕೊಳ್ಳುವಹಾಗೆ ಎರಡು, ಮೂರು ವಾಕ್ಯಗಳಿಗಿಂತ ಜಿಬ್ರಯೇಲ್ ಹೆಚ್ಚಾಗಿ ಹೇಳುವವನಲ್ಲ. ಅದೂ ಪ್ರತಿ ದಿನ ಹೇಳದೇ ಎರಡು ಮೂರು ದಿನಗಳಿಗೆ ಒಂದು ಬಾರಿ ಹೇಳುತ್ತಿದ್ದನು. ಸಮಾಚಾರವನ್ನನುಸರಿಸಿ ಆಗಾಗ ಬಹಳ ವಾಕ್ಯಗಳು ಸಹ ಹೇಳುತ್ತಿದ್ದನು. ಆ ವಿಧವಾಗಿ ಜಿಬ್ರಯೇಲ್ ಗ್ರಹ 23 ವರ್ಷಗಳು ತನ್ನ ಜ್ಞಾನವನ್ನು ಪ್ರವಕ್ತನಿಗೆ ಹೇಳುವುದು ನಡೆದಿದೆ. ಹಾಗೇ ಬಹಳ ಕಾಲ ಹೇಳಲಾಗಿರುವ ವಿಷಯಗಳೆಲ್ಲವನ್ನು ಗ್ರಂಥವಾಗಿ ಬರೆಯಬೇಕೆಂದುಕೊಂಡಾಗ ಪ್ರವಕ್ತ ಹೇಳಿದಾಗ ಕೇಳಿ ಬರೆದುಕೊಂಡವರು, ವಿಷಯಗಳನ್ನು ಕೇಳಿ ಜ್ಞಾಪಕವಿಟ್ಟುಕೊಂಡವರು, ಹೇಳಿದ ವಿಷಯಗಳೆಲ್ಲವನ್ನು ಸೇರಿಸಿ ಖುರ್‌ಆನ್ ಗ್ರಂಥವಾಗಿ ಮಾಡಲಾಗಿದೆ. ಆದ್ದರಿಂದ ಖುರ್‌ಆನ್ ಗ್ರಂಥದಲ್ಲಿನ ವಾಕ್ಯಗಳು ವರಸೆಕ್ರಮದಲ್ಲಿ ಇರುವುದಿಲ್ಲ. ಹೇಗಿದ್ದರೂ ಅದರಲ್ಲಿ ಜಿಬ್ರಯೇಲ್ ಗ್ರಹ ಹೇಳಿದ ದೇವರ ವಾಕ್ಯಗಳಲ್ಲಿ ಒಂದೂ ಸಹ ತಪ್ಪಿ ಹೋಗದೆ ಬರೆಯುವುದು ನಡೆದಿದೆ. ದೇವರ ಜ್ಞಾನವೆಲ್ಲವೂ ಖುರ್‌ಆನ್ ಗ್ರಂಥದೊಳಕ್ಕೆ ಸೇರಿದೆ. ಆದ್ದರಿಂದ ಖುರ್‌ಆನ್ ಗ್ರಂಥ ದೈವ ಗ್ರಂಥವಾಗಿದೆ. ಮೊದಲು ಹೊರಗೆ ಬಂದ ಭಗವದ್ಗೀತೆ, ಬೈಬಲ್‌ನಂತೆ ಖುರ್‌ಆನ್ ಗ್ರಂಥದಲ್ಲಿಯೂ ಸಹ ಮನುಷ್ಯನ ವಾಕ್ಯಗಳು ಕೆಲವು ಸೇರಿಹೋಗಿವೆ. ಯಾರೂ ಗಮನಿಸದ ಹಾಗೇ ಮನುಷ್ಯನ ವಾಕ್ಯಗಳು ಅದರಲ್ಲಿದ್ದರೂ, ಅವು ಅದೇ ಗ್ರಂಥದಲ್ಲಿನ ದೇವರ ವಾಕ್ಯಗಳಿಗೆ ವಿರುದ್ಧವಾಗಿರುವುದರಿಂದ, ಇವು ಮನುಷ್ಯರು ಹೇಳಿದ ವಾಕ್ಯಗಳೆಂದು ಸುಲಭವಾಗಿ ಹೊರಬೀಳುತ್ತಿವೆ. ನಮ್ಮ ದೃಷ್ಠಿಯಲ್ಲಿ ಮೂರು

ಗ್ರಂಥಗಳು ದೈವ ಗ್ರಂಥಗಳೇ ಆದರೂ ಮೂರರಲ್ಲಿ ಸ್ವಲ್ಪ ಕಾಲುಷ್ಯ (ಬಲಹೀನತೆ) ಕಾಣಿಸುವುದರಿಂದ ಆ ಕಾಲುಷ್ಯವನ್ನು ತೆಗೆದುಹಾಕಿ ದೇವರು ಹೇಳಿದ ಅಸಲಾದ ಜ್ಞಾನವನ್ನು ತಿಳಿಸಬೇಕೆನ್ನುವ ಉದ್ದೇಶದಿಂದ ಭಗವದ್ಗೀತೆಯನ್ನು ಸರಿಪಡಿಸಿ ಮನುಷ್ಯರ ಕಲ್ಪಿತ ಶ್ಲೋಕಗಳನ್ನು ತೋರಿಸುತ್ತಾ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎನ್ನುವ ಹೆಸರಿಂದ ಬರೆಯುವುದು ನಡೆದಿದೆ. ಮುಂಬರುವ ಕಾಲದಲ್ಲಿ ಉಳಿದ ಎರಡು ಗ್ರಂಥಗಳಲ್ಲಿಯೂ ಸಹ ಇದೇ ದೇವರ ಜ್ಞಾನವೆಂದು ಹೇಳುವ ದಿನ ಬರುತ್ತದೆಂದು, ದೇವರು ಆತ್ಮನಿಂದ ಹಾಗೆ ಮಾಡಿಸಬಲ್ಲದೆಂದು ಅಂದು ಕೊಳ್ಳುತ್ತಿದ್ದೇನೆ.

ಮನುಷ್ಯನಾಗಿ ಕಾಣಿಸಿ ಮಾತನಾಡಿದವರು, ಮನುಷ್ಯನಲ್ಲದಿದ್ದರೂ ಎಲ್ಲರನ್ನು ನಂಬಿಸಿ ಕೊನೆಗೆ ತಮ್ಮ ಧ್ಯೇಯವಾದ ಜ್ಞಾನವನ್ನು ಬೋಧಿಸುವುದೆನ್ನುವ ಕೆಲಸವನ್ನು ಮಾಡಿಹೋದವರು ನನಗೆ ತಿಳಿದಷ್ಟು, ಈ ಮಧ್ಯೆ ಕೆಲವು ಸಾವಿರ ವರ್ಷಗಳ ಪೂರ್ವದವರೆಗು ಗಮನಿಸಿದರೆ ಇಬ್ಬರೇ ಇಬ್ಬರು ಇದ್ದಾರೆ. ಅವರಲ್ಲಿ ದ್ವಾಪರಯುಗದ ಅಂತ್ಯದಲ್ಲಿ ಬಂದು ಹೋದ ಶ್ರೀಕೃಷ್ಣನೂ, ಕಲಿಯುಗದಲ್ಲಿ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಬಂದು ಹೋದ ಯೇಸು. ಕೃಷ್ಣನು ಐದುಸಾವಿರ ವರ್ಷಗಳ ಪೂರ್ವದಲ್ಲಿ ಬಂದರೆ, ಆತನ ನಂತರ ಮೂರು ಸಾವಿರ ವರ್ಷಗಳ ನಂತರ ಯೇಸು ಬರುವುದು ನಡೆದಿದೆ. ಇವರಿಬ್ಬರ ಜೀವನಗಳು ಪೂರ್ವ ಪಶ್ಚಿಮವಾಗಿ ಕಾಣಿಸಿದರೂ ವಾಸ್ತವವಾಗಿ ಅವರು ಇಬ್ಬರೂ ಇಬ್ಬರಲ್ಲ ಒಬ್ಬರೇ. ಈ ಮಾತನ್ನು ಯಾರೂ ನಂಬದಂತೆ ಎರಡು ಜೀವನಗಳನ್ನು ಮೊದಲೇ ವ್ಯೂಹಾ ರಚನೆ ಮಾಡಲಾಗಿದೆ. ಇಬ್ಬರೂ ಮನುಷ್ಯನಾಗಿ ಬಂದರೂ ಮನುಷ್ಯನಲ್ಲದ ಭಗವಂತನಾಗಿ ಇದ್ದಾರೆ. ಕೃಷ್ಣನಾಗಿ ಬಂದವನಾಗಲಿ, ಯೇಸಾಗಿ ಬಂದವನಾಗಲಿ ಯಾರು ಎಂದು ಈಗ ಪ್ರಶ್ನಿಸಿದರೆ ರಾಮಾಯಣ ವೆಲ್ಲಾ ಕೇಳಿದ ನಂತರ ಸೀತೆಗೆ ರಾಮನೇನಾಗುತ್ತಾನೆಂದು ಕೇಳಿದಂತಿರುತ್ತದೆ. ಒಬ್ಬನೇ ತಾನು ತಾನಾಗಿ ಅಲ್ಲದೆ ಮಾರುವೇಷದಲ್ಲಿ ಎರಡು ಮೂರು ಬಾರಿ ಬಂದುಹೋಗಿದ್ದಾ ನೆಂದು ಮೊದಲೇ ವ್ಯಕ್ತಪಡಿಸಿದ್ದೇನೆ. ವಿವರವಾಗಿ ಹೇಳಿದರೆ

ಯಾರಿಗೂ ತಿಳಿಯದ ದೇವರು, ಯಾರಿಗೂ ತಿಳಿಯದ ತನ್ನ ವಿಷಯವನ್ನು ತಿಳಿಸುವುದಕ್ಕೆ ಭೂಮಿಮೇಲೆ ಮನುಷ್ಯರ ಮಧ್ಯದೊಳಗೆ ಬರಬೇಕಾದಾಗ ಮನುಷ್ಯನಂತೆ ಬಂದರೆ ತನ್ನನ್ನು ಯಾರೂ ಗುರುತುಹಿಡಿಯಲಾರರೆನ್ನುವ ಉದ್ದೇಶದಿಂದ ಮನುಷ್ಯನಂತೆ ವೇಷ ಧರಿಸಿ ಬರುವುದು ನಡೆದಿದೆ. ಹಾಗೆ ಮನುಷ್ಯನಾಗಿ ಬಂದಾಗ ತಾನು ಯಾರಾಗಿರುವುದು ಮನುಷ್ಯರ್ಯಾರು ಗುರುತಿಸದಹಾಗೆ ನಟಿಸಬೇಕಾಗಿ ಬಂದಿದೆ. ಆದ್ದರಿಂದ ಮೊದಲು ಕೃಷ್ಣನಾಗಿ ಬಂದಾಗ ಸುಖಗಳಲ್ಲಿ ತೇಲಾಡಿದಹಾಗೆ, ಮನುಷ್ಯರಂತೆ ಮೋಸಗಳು ಮಾಡುವುದು, ಅಸತ್ಯಗಳನ್ನು ಹೇಳುವುದೂ, ಒಂದು ಮಾತಿನ ಮೇಲೆ ಕಟ್ಟುಬೀಳದಂತೆ ಮಾಡುತ್ತಾ, ಎಲ್ಲಿಯೂ ಜ್ಞಾನವನ್ನು ಹೇಳದೇ ತೊಂಬತ್ತು (90) ವರ್ಷಗಳು ಜೀವನ ನಡೆಸಿ, ಕೃಷ್ಣನು ಮೋಸಗಾರನು ಎನ್ನುವ ಹೆಸರನ್ನು ಸಂಪಾದಿಸಿಕೊಂಡು ಕೊನೆಯಲ್ಲಿ ಯಾರಿಗೂ ತಿಳಿಯದೇ ಅರ್ಜುನನು ಒಂಟಿಯಾಗಿರುವ ಸಮಯದಲ್ಲಿ, ಯಾರೂ ಕೇಳದಂತೆ ತನ್ನ ಜ್ಞಾನವನ್ನು ಅರ್ಜುನನಿಗೆ ಹೇಳುವುದು ನಡೆದಿದೆ. ರಹಸ್ಯವಾಗಿ ತಾನು ಹೇಳಿದಹಾಗೆ ಯಾರಿಗೂ ತಿಳಿಯದಂತೆ ಹೇಳಿದ ಜ್ಞಾನ ಕೊನೆಗೆ ವ್ಯಾಸನ ರಚನೆಯಿಂದ ಪ್ರಥಮ ದೈವ ಗ್ರಂಥವಾಗಿ ಬದಲಾವಣೆ ಹೊಂದಿದೆ.

ಅಂತಹ ವಾತಾವರಣವನ್ನು ಸೃಷ್ಠಿಸಿ ಜ್ಞಾನವನ್ನು ಹೇಳಿಹೋಗುವುದರಿಂದ ಆತನು ದೊಡ್ಡವನೆಂದು ನಂಬುವವರನ್ನು ಹೊರತುಪಡಿಸಿ ಉಳಿದವರೆಲ್ಲರೂ ಇಂದಿಗೂ ಭಗವದ್ಗೀತೆ ಕಡೆ ನೋಡದೆ, ಹಿಂದೂಗಳ ಆಧ್ಯಾತ್ಮಿಕ ಗ್ರಂಥಗಳು ನಾಲ್ಕು ವೇದಗಳೆಂದು ಹೇಳುತ್ತಿದ್ದಾರೆ. ಕೃಷ್ಣನಾಗಿ ಬಂದುಹೋದ ನಂತರ ಮೂರು ಸಾವಿರ ವರ್ಷಗಳಿಗೆ ತನ್ನ ಜ್ಞಾನವನ್ನು ಭೂಮಿಮೇಲೆ ಮತ್ತೊಂದು ದೇಶದಲ್ಲಿ ಬೋಧಿಸುವುದಕ್ಕೆ ಮತ್ತೊಬ್ಬ ಮನುಷ್ಯನಾಗಿ ದೇವರೇ ಬರಬೇಕಾಗಿದೆ. ದೇವರು ಮನುಷ್ಯನಾಗಿ ಬರುವುದಿಲ್ಲ, ಸೃಷ್ಠಿ ನಂತರ ಆತನಿಗೆ ರೂಪವಿಲ್ಲ ಎನ್ನುವ ಸೂತ್ರವನ್ನು ಅನುಸರಿಸಿ ಆತನು ಸಾಧಾರಣ ಮನುಷ್ಯನಾಗಲ್ಲದೆ ಪ್ರತ್ಯೇಕವಾದ ಮನುಷ್ಯನಾಗಿ ಕೃಷ್ಣನಾಗಿ ಬಂದಾಗ ಹೇಗೆ ಬಂದಿದ್ದಾನೋ

ಹಾಗೇ ಮತ್ತೊಂದು ರೂಪದಿಂದ ಬಂದಿದ್ದಾನೆ. ಎರಡನೇ ಬಾರಿ ಭಾರತದೇಶಕ್ಕೆ ಪಶ್ಚಿಮದ ಕಡೆ ಸುಮಾರು ನಾಲ್ಕು ಅಥವಾ ಐದುಸಾವಿರ ಕಿಲೋಮೀಟರುಗಳ ದೂರದಲ್ಲಿರುವ ಇಜ್ರಾಯೇಲ್ ಎನ್ನುವ ದೇಶದಲ್ಲಿ ಬರುವುದು ನಡೆದಿದೆ. ಎರಡನೆಯ ಬಾರಿ ಹಾಕಿಕೊಂಡ ಜೀವನದ ಪಥಕ ಮೊದಲನೆಯದೊಂದಿಗೆ ಹೋಲಿಕೆಗಳು ಇಲ್ಲದ್ದಾಗಿ, ಪೂರ್ತಿ ಭಿನ್ನವಾಗಿ ಇರುವುದು ನಡೆದಿದೆ. ದೇವರೇ ತನ್ನನ್ನು ತಿಳಿಯಬಾರದೆಂದುಕೊಂಡಾಗ ಯಾರು ಆತನನ್ನು ಗುರುತಿಸಬಲ್ಲರು? ದೇವರು ನಾಮ ರೂಪ ಕ್ರಿಯಾರಹಿತನು ಎನ್ನುವ ಧರ್ಮದ ಪ್ರಕಾರ, ತನ್ನ ಧರ್ಮವನ್ನು ಅತಿಕ್ರಮಿಸದಂತೆ ಮನುಷ್ಯನಂತೆ ಬಂದು ಜ್ಞಾನ ಹೇಳಿದರೂ ಆತನು ಪೂರ್ತಿ ಮನುಷ್ಯನಾಗದೇ ಹೋಗುವುದು ಆತನಲ್ಲಿನ ಪ್ರತ್ಯೇಕತೆ. ಎರಡನೆಯ ಬಾರಿ ಬಂದಾಗ ಕೃಷ್ಣನಿಗೆ ಪೂರ್ತಿ ಭಿನ್ನವಾಗಿ ಬಡವನಾಗಿ, ಅವಿವಾಹಿತನಾಗಿ, ಒಬ್ಬ ದಾರಿಹೋಕನಂತೆ ಪ್ರಜೆಗಳಿಗೆ ಕಾಣಿಸಿ, ಮೂರು ವರ್ಷಗಳು ಪ್ರಜೆಗಳ ಮಧ್ಯೆ ಇದ್ದು ಜ್ಞಾನವನ್ನು ಬೋಧಿಸಿದ್ದಾನೆ. ಆದರೂ ಆತನನ್ನು ಹನ್ನೊಂದು ಮಂದಿ ಶಿಷ್ಯರು ಅನುಸರಿಸಿದ್ದಾರೆ ಹೊರತು ಉಳಿದ ಮನುಷ್ಯರು ಯಾರೂ ಆತನನ್ನು ವಿಶ್ವಾಸಿಸಲಿಲ್ಲ. ಕೊನೆಗೆ ಹನ್ನೊಂದು ಮಂದಿಯಲ್ಲಿ ಒಬ್ಬರು ಅಥವಾ ಇಬ್ಬರು ಹೊರತು ಉಳಿದವರೆಲ್ಲರೂ ಸಹ ಹೆಸರಿಗೆ ಶಿಷ್ಯರೇ ಎಂದು ತಿಳಿದುಹೋಗಿದೆ. ಕೃಷ್ಣನಾಗಿ ಬಂದಿರುವ ಕಾಲದಲ್ಲಿ ಆತನಿಗೆ ಒಬ್ಬರೂ ಸಹ ಶಿಷ್ಯರಾಗಿಲ್ಲ. ಹೀಗೆ ಗೋಪ್ಯವಾಗಿ ಎರಡನೆಯ ಜನ್ಮವನ್ನು ಇಜ್ರಾಯೇಲ್ ದೇಶದಲ್ಲಿ ಜೆರೂಸಲೆಮ್ (ಬೆತ್ಲೇಹಾಮ್) ಎನ್ನುವ ಪಟ್ಟಣದಲ್ಲಿ ತೆಗೆದುಕೊಂಡ ಯೇಸು, ಕೃಷ್ಣನು ಗೀತೆಯಲ್ಲಿ ಹೇಳಿದ ಸಾರಾಂಶವನ್ನೇ ತನ್ನ ಬೋಧನೆಯಲ್ಲಿ ಹೇಳಿದ್ದಾನೆ. ಹಾಗೆ ಹೇಳಿದರೂ ಇಂದಿಗೂ ಆ ಎರಡು ಬೋಧನೆಗಳು ಒಂದೇ ಎಂದಾಗಲೀ, ಆ ಇಬ್ಬರೂ ಒಬ್ಬನೇಯೆಂದಾಗಲಿ ಯಾರೂ ಎಷ್ಟು ಮಾತ್ರ ತಿಳಿಯದೇ ಹೋಗುವುದಲ್ಲದೆ ನಮ್ಮ ಯೇಸುವಿಗೂ ನಿಮ್ಮ ಕೃಷ್ಣನಿಗೂ ಏನು ಹೋಲಿಕೆ, ನಮ್ಮ ಯೇಸು ಮದುವೆಮಾಡಿಕೊಳ್ಳದೇ ಸುಖಗಳಿಗೆ ದೂರವಾಗಿ ಉಳಿದುಹೋಗಿದ್ದಾನೆ, ನಿಮ್ಮ ಕೃಷ್ಣನು ಎಂಟು ಜನರನ್ನು ಮದುವೆ ಮಾಡಿಕೊಂಡಿದ್ದಾನೆಂದು ಕ್ರೈಸ್ತವರು ಅನ್ನುತ್ತಿದ್ದಾರೆ. ಅದೇ ರೀತಿಯಲ್ಲಿ

ಹಿಂದೂಗಳು ಯೇಸನ್ನು ದೂಷಿಸುತ್ತಿದ್ದಾರೆ. ಹೀಗೆ ಒಬ್ಬರನ್ನೇ ಎರಡಾಗಿ ಅಜ್ಞಾನದಿಂದ ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅಂದುಕೊಳ್ಳುವುದರಿಂದ ಇಬ್ಬರಾಗಿ ಹೇಳಿದ ಬೋಧನೆಗಳಲ್ಲಿ ವಾಕ್ಯಗಳು ಬೇರೆಯಾಗಿದ್ದರೂ ಭಾವವೂ, ಜ್ಞಾನವೂ ಒಂದೇ ಎಂದು ತಿಳಿಯಲಾಗದೇ ಹೋಗುತ್ತಿದ್ದಾರೆ.

ಐದು ಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು ಹೇಳಿದ ಜ್ಞಾನವನ್ನೇ ಎರಡು ಸಾವಿರ ವರ್ಷಗಳ ಪೂರ್ವ ಯೇಸು ಹೇಳಿದ್ದಾನೆನ್ನುವುದಕ್ಕೆ ಗುರುತಾಗಿ ಒಂದು ವಾಕ್ಯವನ್ನು ವಿವರಿಸುತ್ತೇನೆ ನೋಡಿ. ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ ಹೀಗೆ ಇದೆ.

**ಶ್ಲೋ॥ ಯಸ್ಯನಾಹಂಕೃತೋ ಭಾವೋ ಬುದ್ಧಿರ್ಯಸ್ಯನಲಿಪ್ಯತೇ ।**
**ಹತ್ವಾಪಿ ಸ ಇಮಾನ್ ಲೋಕಾನ್ನ ಹನ್ತಿ ನನಿ ಬಧ್ಯತೇ ॥**

**ಭಾವಾರ್ಥ :–** "ಯಾರ ಭಾವದಲ್ಲಿ ಅಹಂಕಾರವಿಲ್ಲವೋ, ಯಾರ ಬುದ್ಧಿಯಲ್ಲಿ ಫಲಿತದ ಮೇಲೆ ಧ್ಯಾಸವಿಲ್ಲವೋ, ಆತನು ಈ ಲೋಕದಲ್ಲಿರುವವರೆಲ್ಲರನ್ನೂ ಸಾಯಿಸಿದರೂ ನಿಜವಾಗಿ ಆತನು ಹಂತಕನಲ್ಲ. ಆತನಿಗೆ ಹತ್ಯಾ ಪಾಪ ಅಂಟುವುದಿಲ್ಲ." ಈ ಮಾತು ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ ಇದು ವಾಸ್ತವವಾಗಿ ಜ್ಞಾನಸೂತ್ರವೇ. ಇದೇ ವಿಷಯವನ್ನು ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 5ನೇ ಅಧ್ಯಾಯದಲ್ಲಿ 28ನೇ ವಾಕ್ಯವನ್ನು ಗಮನಿಸಿದರೆ "ಒಬ್ಬ ಸ್ತ್ರೀಯನ್ನು ಮೋಹ ದೃಷ್ಠಿಯಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ." ಎಂದು ಇದೆ. ಇಲ್ಲಿ ಮಾಡದಿದ್ದರೂ ಮಾಡಿದಂತೇ ಎಂದು ಹೇಳುವುದು ವಿಚಿತ್ರವೇ. ಈಗ ಭಗವದ್ಗೀತೆ ಶ್ಲೋಕದಲ್ಲಿನ ಅರ್ಥವನ್ನು ನೋಡಿದರೆ ಹತ್ಯೆ ಮಾಡಿದರೂ ಮಾಡದಂತೇ ಎಂದು ಆತನು (ಕೃಷ್ಣನು) ಹೇಳಿದ್ದಾನೆ. ಬೈಬಲ್‌ನಲ್ಲಿನ ವಾಕ್ಯದಲ್ಲಿ ಮಾಡದಿದ್ದರೂ ಅಂದುಕೊಂಡರೆ ಮಾಡಿದಂತೇ ಎಂದು ಈತನು (ಯೇಸು) ಅನ್ನುತ್ತಾನೆ. ಎರಡು ವಾಕ್ಯಗಳು ಬೇರೆ ಮಾತುಗಳಂತೆ ಆಶ್ಚರ್ಯವನ್ನು ಉಂಟು ಮಾಡುವಹಾಗೆ ಇದ್ದರೂ, ಎರಡೂ ಒಂದೇ ಅರ್ಥವನ್ನು ಕೊಡುವ ಜ್ಞಾನದ

ವಾಕ್ಯಗಳೆಂದು ಗುರುತಿಸದಹಾಗೆ ಇವೆ. ಸ್ವಲ್ಪಮಟ್ಟಿಗೆ ಆಲೋಚಿಸಿದರೆ ಎರಡು ವಾಕ್ಯಗಳು ಒಂದಕ್ಕೊಂದು ಭಿನ್ನವಾಗಿ ಕಾಣಿಸಿದರೂ ಎರಡೂ ಒಂದೇ ಜ್ಞಾನವನ್ನು ಬೋಧಿಸುತ್ತಿವೆಯೆಂದು ತಿಳಿಯಬಲ್ಲದು. ಬೇರೆಯಾಗಿ ಕಾಣಿಸುವ ಇಬ್ಬರೂ ಒಬ್ಬರೇ ಆದರೂ ಇಬ್ಬರಾಗಿ ಕಾಣಿಸಿದ ಹಾಗೆ, ಬೇರೆಯಾಗಿ ಕಾಣಿಸುವ ಎರಡು ವಾಕ್ಯಗಳು ಒಂದೇ ಜ್ಞಾನವಾದರೂ ಬೇರೆ ಬೇರೆ ಭಾವಗಳಿದ್ದ ವಾಕ್ಯಗಳ ಹಾಗೆ ಕಾಣಿಸುತ್ತಿವೆ. ಈ ವಿಧವಾಗಿ ನಾವು ಸ್ವಲ್ಪ ವಿವರವಾಗಿ ಗಮನಿಸುವುದಾದರೇ ಭಗವದ್ಗೀತೆ ಬೈಬಲ್‌ನಲ್ಲಿ ವ್ಯತ್ಯಾಸಗಳು ಕಾಣಿಸುವುದಿಲ್ಲ.

ಅದೇ ವಿಧವಾಗಿ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವೇ ಖುರ್‌ಆನ್ ಗ್ರಂಥದಲ್ಲಿಯೂ ಸಹ ಇದೆ. ಹಾಗೆ ಬೈಬಲ್ ಖುರ್‌ಆನ್‌ನಲ್ಲಿರುವ ಜ್ಞಾನ ಮೊದಲು ಭಗವದ್ಗೀತೆಯಲ್ಲಿ ಹೇಳಲಾಗಿದೆಯೆಂದು ಮನುಷ್ಯರು ಗ್ರಹಿಸಲಾಗದೇ ಹೋಗಿದ್ದಾರೆ. ಖುರ್‌ಆನ್‌ನಲ್ಲಿಯೂ ಸಹ ಭಗವದ್ಗೀತೆ ಸಾರಾಂಶವಾದ ಜ್ಞಾನವೇ ಇದೆಯೆನ್ನುವುದಕ್ಕೆ ಉದಾಹರಣೆಯಾಗಿ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳು ಇವೆ.

**16. ಶ್ಲೋ॥ ದ್ವಾವಿಮೌ ಪುರುಷೌ ಲೋಕೇ ಕ್ಷರ ಶ್ಚಾಕ್ಷರ ಏವಚ ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋ ಕ್ಷರ ಉಚ್ಯತೇ ॥**

**ಭಾವಾರ್ಥ :–** "ಲೋಕದಲ್ಲಿ ಎರಡು ವಿಧಗಳ ಪುರುಷರಿದ್ದಾರೆ. ಅವರನ್ನೇ ಕ್ಷರನೆಂದು ಒಬ್ಬನನ್ನು, ಅಕ್ಷರನೆಂದು ಮತ್ತೊಬ್ಬನನ್ನು ಅನ್ನಬಹುದು. ಕ್ಷರನು ಎನ್ನುವ ಜೀವಾತ್ಮ ಸರ್ವ ಜೀವರಾಶಿಗಳಲ್ಲಿ ಇದ್ದಾನೆ. ಅಕ್ಷರನೆನ್ನುವ ಆತ್ಮ ಸರ್ವ ಜೀವರಾಶಿಗಳ ಶರೀರಗಳಲ್ಲಿ ಕೂಟಸ್ಥನಾಗಿ (ದರ್ಶಕನಾಗಿ) ಹೊಂದಾಣಿಕೆಯಾಗಿದ್ದಾನೆ."

**17. ಶ್ಲೋ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ ।**
**ಯೋ ಲೋಕತ್ರಯ ಮಾವಿಶ್ಯ ಬಿಭರ್ತವ್ಯಯ ಈಶ್ವರಃ ॥**

**ಭಾವಾರ್ಥ :–** "ಜೀವಾತ್ಮ, ಆತ್ಮ ಎನ್ನುವ ಇವರಿಬ್ಬರೂ ಅಲ್ಲದೆ ಮೂರನೆಯ

ಪುರುಷನು ಇದ್ದಾನೆ. ಮೂರನೆಯವನು ಕ್ಷರನಿಗಿಂತಲೂ, ಅಕ್ಷರಿನಿಗಿಂತಲೂ ಉತ್ತಮ ಪುರುಷನು ಆದ್ದರಿಂದ ಆತನನ್ನು ಪುರುಷೋತ್ತಮನೆಂದೂ, ಪರಮಾತ್ಮನೆಂದೂ ಹೇಳುತ್ತಿದ್ದಾನೆ. ಪರಮಾತ್ಮನೆಂದು ಕರೆಯಲಾಗುವವನೇ ಪ್ರಪಂಚವೆಲ್ಲದಕ್ಕೂ ಅಧಿಪತಿಯಾಗಿ ದೇವರೆಂದು ಕರೆಯಲ್ಪಡುತ್ತಿದ್ದಾನೆ."

ಈ ಎರಡು ಶ್ಲೋಕಗಳನ್ನು ಗಮನಿಸಿದರೇ ಸಕಲ ಜೀವರಾಶಿಗಳಲ್ಲಿ ಜೀವಾತ್ಮ ಎನ್ನುವ ಒಬ್ಬನೂ, ಆತ್ಮ ಎನ್ನುವ ಎರಡನೆಯವನೂ, ಪರಮಾತ್ಮ ಎನ್ನುವ ಮೂರನೆಯವನೂ ಆತ್ಮಗಳಾಗಿ ಇದ್ದಾರೆಂದೂ ಅವರನ್ನೇ ಕ್ಷರಾತ್ಮ, ಅಕ್ಷರಾತ್ಮ, ಪರಮಾತ್ಮ ಎಂದು ಅನ್ನುತ್ತಿದ್ದೇವೆಂದೂ ತಿಳಿಯುತ್ತಿದೆ. ಐದುಸಾವಿರ ವರ್ಷಗಳ ಪೂರ್ವದಲ್ಲಿ ಹೇಳಿದ ಮಾತು ಸೃಷ್ಠ್ಯಾದಿಯಲ್ಲಿ ದೇವರು ಹೇಳಿದ ಮಾತಾಗಿ ನಾವು ನೆನಪಿಟ್ಟುಕೊಳ್ಳಬೇಕು. ಆ ಮಾತು ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಇದೆಯೆಂದು ಹೇಳಿಕೊಂಡಿದ್ದೇವಲ್ಲ! ಅದೇ ಸೃಷ್ಠ್ಯಾದಿಯಲ್ಲಿ ಹೇಳಿದ ಜ್ಞಾನವನ್ನೇ ಒಬ್ಬ ದೂತನಿಂದ, ಒಂದು ಗ್ರಹದಿಂದ ಇಜ್ರಾಯೇಲ್ ದೇಶದಲ್ಲಿ ಹೇಳಲಾಗಿದೆಯೆನ್ನುವುದಕ್ಕೆ ಪ್ರಮಾಣವಾಗಿ ಖುರ್‌ಆನ್ ಗ್ರಂಥದಲ್ಲಿ 50ನೇ ಸುರಾ ಆದ ಖಾಫ್ ಸುರಾದಲ್ಲಿ 21ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿರಿ. ಪ್ರತಿ ಮನುಷ್ಯ ಅವನನ್ನು ನಡೆಸುವವನೊಬ್ಬನು, ಸಾಕ್ಷಿಯಾಗಿ ಇರುವವನೊಬ್ಬನು ಜೊತೆಯಾಗಿ ಬರುತ್ತಾನೆ. ಇದನ್ನನುಸರಿಸಿ ನೋಡಿದರೆ ಪ್ರತಿ ವ್ಯಕ್ತಿಯನ್ನು ಒಬ್ಬ ನಡೆಸುವವನೂ, ಒಬ್ಬ ಸಾಕ್ಷಿಯಾಗಿ ನೋಡುವವನು ಜೊತೆಯಾಗಿದ್ದಾನೆಂದು ಅರ್ಥವಾಗುತ್ತಿದೆ. ಈ ವಾಕ್ಯವನ್ನು ನೋಡಿದರೆ ಇದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದ ಮೂರು ಆತ್ಮಗಳ ಜ್ಞಾನವೆಂದು ಯಾರೂ ಗುರುತಿಸಲಾರರು. ಆದರೇ ವಾಸ್ತವವಾಗಿ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ ಹೇಳಿದ ಎರಡು ಶ್ಲೋಕಗಳಲ್ಲಿನ ಜ್ಞಾನವೇ ಖುರ್‌ಆನ್‌ನಲ್ಲಿ 50ನೇ ಸೂರಾ 21ನೇ ಆಯತ್‌ನಲ್ಲಿ ಇದೆ. ಭಗವದ್ಗೀತೆಯಲ್ಲಿ ಕ್ಷರ, ಅಕ್ಷರ, ಪುರುಷೋತ್ತಮ ಅನ್ನುವ ಮೂರು ಆತ್ಮಗಳನ್ನು ಕುರಿತು ಹೇಳುವುದು ನಡೆದಿದೆ. ಇಲ್ಲಿ ಖುರ್‌ಆನ್‌ನಲ್ಲಿಯೂ ಸಹ

ಅದೇ ಮೂರು ಆತ್ಮಗಳನ್ನು ಕುರಿತು ಹೇಳಿದ್ದಾರೆ. ವಿವರವಾಗಿ ಹೇಳಿಕೊಂಡರೆ ಪ್ರತಿ ವ್ಯಕ್ತಿ ಒಬ್ಬ ಜೀವಾತ್ಮನಾಗಿ ಇದ್ದಾನೆ. ಪ್ರತಿ ವ್ಯಕ್ತಿಯನ್ನು ಅವನ ಶರೀರದಲ್ಲಿರುವ ಆತ್ಮ ನಡೆಸುತ್ತಿದೆ. ಆದ್ದರಿಂದ ಪ್ರತಿ ವ್ಯಕ್ತಿ ಒಬ್ಬ ನಡೆಸುವವನ ಜೊತೆ ಬರುತ್ತಾನೆಂದು ಹೇಳಲಾಗಿದೆ. ಪ್ರತಿ ವ್ಯಕ್ತಿಯನ್ನು (ಜೀವಾತ್ಮನನ್ನು) ನಡೆಸುವುದು ಆತ್ಮ ಆದಾಗ, ಏನೂ ಮಾಡದೇ ಕೇವಲ ಸಾಕ್ಷಿಯಾಗಿ ನೋಡುತ್ತಾ ಸುಮ್ಮನಿರುವ ಪರಮಾತ್ಮ ಎನ್ನುವ (ದೇವರು ಅನ್ನುವ) ಮೂರನೆಯವನು ಸಹ ಇದ್ದಾನೆಂದು ಆ ವಾಕ್ಯದಲ್ಲಿ ಇದೆ. ಒಬ್ಬ ನಡೆಯಲ್ಪಡುವವನು, ಎರಡು ನಡೆಸುವವನು, ಮೂರು ನೋಡುವವನು ಎನ್ನುವ ಮೂವರು ಪ್ರತಿ ಮನುಷ್ಯ ಶರೀರದಲ್ಲಿ ಇದ್ದಾರೆನ್ನುವ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ ತಿಳಿಸಲಾಗಿದೆ.

ಇದನ್ನನುಸರಿಸಿ ಭಗವದ್ಗೀತೆಯಲ್ಲಿನ ಜ್ಞಾನವೇ ಖುರ್‌ಆನ್ ಗ್ರಂಥದಲ್ಲಿ ಇದೆಯೆಂದು ಹೇಳಬಹುದು. ಭಗವದ್ಗೀತೆ ಆದಿ ದೈವ ಗ್ರಂಥವಾದ್ದರಿಂದ ನಂತರ ಬಂದಿರುವ ಗ್ರಂಥಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವೇ ಇದೆ. ಆದರೇ ಒಂದೇ ಜ್ಞಾನ ಭಗವದ್ಗೀತೆಯಲ್ಲಿ ಶ್ಲೋಕ ರೂಪವಾಗಿರುವಾಗ, ಉಳಿದ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ವಾಕ್ಯಗಳ ರೂಪದಲ್ಲಿ ಇದೆ. ಹಾಗಿರುವುದರಿಂದ ಅದರಲ್ಲಿನ ಭಾವ ಬಹಳ ಜನರಿಗೆ ಅರ್ಥವಾಗದೆ ಹೋಗಿದೆ. ಬಹಳ ಜನರಿಗೆ ನಮ್ಮ ಗ್ರಂಥ ಬೇರೆ, ಅವರ ಗ್ರಂಥ ಬೇರೆಯೆನ್ನುವ ಭಾವವಿರುವುದರಿಂದ ಭಗವದ್ಗೀತೆಯೊಂದಿಗೆ ಅವರ ಗ್ರಂಥವನ್ನು ಹೋಲಿಸಿಕೊಳ್ಳದೇ ಹೋಗುತ್ತಿದ್ದಾರೆ. ಕೆಲವರಾದರೇ ನಮ್ಮ ಗ್ರಂಥದಲ್ಲಿರುವ ದೇವರೇ ದೊಡ್ಡವನು, ಉಳಿದ ಗ್ರಂಥಗಳಲ್ಲಿ ಹೇಳಿದ ದೇವರು ನಿಜವಾಗಿ ದೇವರೇ ಅಲ್ಲ ಎನ್ನುತ್ತಿದ್ದಾರೆ. ಹೀಗೆ ಕೆಲವರಲ್ಲಿ ಸಂಕುಚಿತ ಭಾವವಿರುವುದರಿಂದ ಭಗವದ್ಗೀತೆಯಲ್ಲಿನ ಜ್ಞಾನವೇ ಎಲ್ಲದರಲ್ಲೂ ಇದೆಯೆಂದೂ, ಭಗವದ್ಗೀತೆ ಎಲ್ಲ ಗ್ರಂಥಗಳಿಗೂ ತವರುಮನೆಯಂತದ್ದೆಂದು ತಿಳಿಯದೇ ಹೋಗಿದ್ದಾರೆ.

ಭೂಮಿಮೇಲೆಗೆ ಬಂದು ತೆರೆಯ ಮರೆಯಲ್ಲಿದ್ದು ಸೂರ್ಯಗ್ರಹ ಆದಿಯಲ್ಲಿ ತನಗೆ ತಿಳಿದ ಜ್ಞಾನವೆಲ್ಲವನ್ನೂ ಭಾರತದೇಶದಲ್ಲಿ ಹೇಳಲಾಗಿದೆ.

ಮಾನವ ಜಾತಿಗೆ "ಮಾನವ"ರು ಎನ್ನುವ ಹೆಸರು ತಂದ "ಮನುವು" ಎನ್ನುವ ವ್ಯಕ್ತಿಗೆ ಸೂರ್ಯನು ಜ್ಞಾನವನ್ನು ಬೋಧಿಸಿ ಮನುಷ್ಯರೆಲ್ಲರಿಗೂ ಆದಿ ಗುರುವಾಗಿದ್ದಾನೆ. ಆದಿ ಗುರುವಾದ ಸೂರ್ಯನು (ಸೂರ್ಯಗ್ರಹ) ಬೋಧಿಸಿದ ಜ್ಞಾನವನ್ನೇ, ಮನುಷ್ಯರಲ್ಲಿ ಕಣ್ಮರೆಯಾಗಿ ಹೋಗುವ ಸಮಯದಲ್ಲಿ ದೇವರು ಭಗವಂತನೆನ್ನುವ ಮಾನವಾಕಾರವಾಗಿ ಬಂದು ತನ್ನ ಜ್ಞಾನವನ್ನು ನೇರವಾಗಿ ಮನುಷ್ಯರಿಗೆ ಯಾವುದೋ ಒಂದು ವಿಧವಾಗಿ ತಿಳಿಸುವುದು ನಡೆದಿದೆ. ಹೀಗೆ ಒಂದು ಬಾರಿ ಗ್ರಹವೂ, ಮತ್ತೊಂದು ಬಾರಿ ಭಗವಂತನೆಂಬ ಮಾರು ರೂಪದಲ್ಲಿರುವ ದೇವರೂ ದೇವರ ಜ್ಞಾನವನ್ನು ಭಾರತದೇಶದಲ್ಲಿ ಹೇಳುವುದು ನಡೆದಿದೆ. ಹಾಗೆ ಹೇಳಿದ ಜ್ಞಾನ ಪ್ರಥಮವಾಗಿ ಗ್ರಂಥರೂಪವಾಗಿ ಬದಲಾಗಿದೆ. ಆದ್ದರಿಂದ ಅದನ್ನೇ **"ಪ್ರಥಮ ದೈವ ಗ್ರಂಥ"** ವಾಗಿ ಹೇಳುತ್ತಿದ್ದೇವೆ. ದೇವರಿಗೆ ಸೃಷ್ಠಿ ನಂತರ ರೂಪ, ನಾಮ, ಕ್ರಿಯೆಗಳು ಇಲ್ಲ ಎನ್ನುವ ಧರ್ಮದ ಪ್ರಕಾರ ದೇವರು ಮನುಷ್ಯನಾಗಿ ಬಂದು ಜ್ಞಾನವನ್ನು ಬೋಧಿಸಿದರೂ, ನೋಡುವವರಿಗೆ ಭಗವಂತನು ಮನುಷ್ಯನಾಗಿ ಕಾಣಿಸಿದರೂ, ಆತನು ವಾಸ್ತವವಾಗಿ ಮನುಷ್ಯನಲ್ಲದೆ ಮನುಷ್ಯನಿಗಿರುವ ಸೂತ್ರಗಳಿಗೆ ಭಿನ್ನವಾಗಿ ಇರುವುದರಿಂದ ದೇವರು ಮನುಷ್ಯನಾಗಿ ಬರಲಿಲ್ಲವೆಂದು ಹೇಳಬಹುದು. ದೇವರು ಮಾನವನಾಗಿ ಕಾಣಿಸಿದರೂ ಆ ಮನುಷ್ಯ ಮನುಷ್ಯನಲ್ಲ, ಆತನು ಭಗವಂತನು. ತಾಯಿ ಗರ್ಭದಿಂದ (ಭಗದಿಂದ) ಸಜೀವವಾಗಿ ಹುಟ್ಟಿದ ಶರೀರವಾದ್ದರಿಂದ ದೇವರು ಮನುಷ್ಯನಂತೆ ಬಂದಿರುವ ಶರೀರ ಆಕಾರವನ್ನು ಭಗವಂತನು ಎನ್ನುತ್ತಿದ್ದೇವೆ. ಅಷ್ಟೇ ಅಲ್ಲದೆ ಮನುಷ್ಯ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಹೆಸರುಗಳಿರುವ ಆತ್ಮಗಳು ಇವೆ. ದೇವರಾದ ಭಗವಂತನ ಶರೀರದಲ್ಲಿ ಜೀವಾತ್ಮ, ಆತ್ಮ ಎರಡೂ ಇರುವುದಿಲ್ಲ. ಆ ಎರಡೂ ಇದ್ದರೇ ಆತನು ಮನುಷ್ಯನಾಗಬಲ್ಲನು, ಆತ್ಮ, ಜೀವಾತ್ಮಗಳು ಇಲ್ಲದಿರುವುದರಿಂದ ಮನುಷ್ಯನಂತೆ ಕಾಣಿಸುವ ಭಗವಂತನನ್ನು ಮನುಷ್ಯನೊಂದಿಗೆ ಹೋಲಿಸುವುದಕ್ಕೆ ಅವಕಾಶವೇ ಇಲ್ಲ. ಈ ವಿಧವಾಗಿ ದೇವರು ಬಂದು ಮನುಷ್ಯನೊಂದಿಗೆ ಮಾತನಾಡಿದರೂ ಮಾತನಾಡದಂತೇ, ಕಾಣಿಸುವ ಮನುಷ್ಯನಾಗಿರುವ ಭಗವಂತನಾಗಿ ದೇವರು ಭೂಮಿಮೇಲೆ

ಅವತರಿಸಿದರೂ ಆತನು ಭೂಮಿಮೇಲೆಗೆ ಬಾರದಂತೆಯೇ. ಆದ್ದರಿಂದ ಸೃಷ್ಠಿ ಪೂರ್ವದಲ್ಲಿ ಎಲ್ಲಾ ಇರುವ ದೇವರು ಸೃಷ್ಠಿ ನಂತರ ಏನೂ ಇಲ್ಲದವನಾಗಿದ್ದಾನೆ.

ದೇವರ ಜ್ಞಾನ ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿಯದೆಂದು ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಮೂರನೇ ಸುರಾ, ಏಳನೇ ಆಯತ್‌ನಲ್ಲಿ ಹೇಳಲಾಗಿದೆ. ಅದಕ್ಕಿಂತ ಮೊದಲು ಹುಟ್ಟಿದ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜ್ಯಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ "ಇದು ರಹಸ್ಯವಾದ ಜ್ಞಾನ, ಯಾರಿಗೂ ತಿಳಿಯದ ರಹಸ್ಯವಾದ ವಿದ್ಯೆ. ಇದನ್ನು ನಿನಗೆ ಹೇಳುತ್ತಿದ್ದೇನೆ ಜಾಗ್ರತೆಯಿಂದ ಕೇಳು" ಎಂದು ಹೇಳಿದ್ದಾನೆ. ಎರಡನೆಯ ದೈವ ಗ್ರಂಥವಾದ ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆಯಲ್ಲಿ 16ನೇ ಅಧ್ಯಾಯದಲ್ಲಿ 25ನೇ ವಾಕ್ಯದಲ್ಲಿ ಹೀಗೆ ಹೇಳಿದ್ದಾರೆ. **"ಈ ಸಂಗತಿಗಳು ಗೂಢಾರ್ಥವಾಗಿ ನಿಮ್ಮೊಂದಿಗೆ ಹೇಳಿದೆನು. ಆದರೆ ನಾನು ಇನ್ನು ಎಂದಿಗೂ ಗೂಢಾರ್ಥವಾಗಿ ನಿಮ್ಮೊಂದಿಗೆ ಮಾತನಾಡದೆ ತಂದೆಯನ್ನು (ದೇವರನ್ನು) ಕುರಿತು ನಿಮಗೆ ಸ್ಪಷ್ಟವಾಗಿ ತಿಳಿಸುವ ಸಮಯ ಬರುತ್ತದೆ."** ಈ ವಿಧವಾಗಿ ಹೇಳಿದ ಮಾತುಗಳಲ್ಲಿ ನಮಗೆ ಅರ್ಥ ವಾಗುವುದು ಏನೆಂದರೆ! ದೇವರ ಜ್ಞಾನ ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿಯದೆಂದು, ಹಾಗಿರುವಾಗ ಆತನು ಹೇಳಿದರೇನೆ ಅಸಲಾದ ಜ್ಞಾನ ತಿಳಿಯುವುದೆಂದು ಅರ್ಥವಾಗುತ್ತಿದೆ. ಆದರೂ ಆತನು ಮನುಷ್ಯನಾಗಿ ಬರುವುದಿಲ್ಲ ಎನ್ನುವ ಸೂತ್ರದ ಪ್ರಕಾರ ಮನುಷ್ಯನಂತೆ ಬಂದಿರುವ ದೇವರನ್ನು ಸಹ ಪಕ್ಕಕ್ಕೆ ತಳ್ಳಿ ಹಾಕುತ್ತಿದ್ದಾರೆ. ಆತನು ಮನುಷ್ಯನಾಗಿ ಬರುವುದಿಲ್ಲವೆಂದಿದ್ದಾನೆ, ನಾನು ಹುಟ್ಟುವುದಿಲ್ಲವೆಂದಿದ್ದಾನೆ. ಆ ಮಾತುಗಳೆಲ್ಲವೂ ವಾಸ್ತವವೆ! ಆದರೆ ಆತನು ಹುಟ್ಟದಂತೆ ಹುಟ್ಟಿ, ಮನುಷ್ಯನಲ್ಲದಂತಹ ಮನುಷ್ಯನಾಗಿ ತನ್ನ ಜ್ಞಾನವನ್ನು ತಿಳಿಸಿ ಹೇಳಿದರೇನೇ ದೇವರ ಜ್ಞಾನ ಭೂಮಿಮೇಲೆ ಸಂಪೂರ್ಣವಾಗಿ ತಿಳಿಯುವುದಕ್ಕೆ ಅವಕಾಶವಿದೆ. ಮನುಷ್ಯರು ತನ್ನ ಮಾನವ ಆಕಾರವನ್ನು

ಗುರುತಿಸಲಾರರೆಂದು, ತಾನು ಬಂದ ವಿಷಯವನ್ನು ಎಲ್ಲಾದರೂ ಒಂದುಕಡೆ ಹೇಳಿ ನಾನು ಬಂದಿದ್ದೇನೆನ್ನುವ ಸಾಕ್ಷಿ ಕೊಡುವುದಕ್ಕೆ ಹೇಳಿದರೂ ತನ್ನ ಮಾತನ್ನು ಗುರುತಿಸಲಾರರೆನ್ನುವ ನಂಬಿಕೆಯಿಂದ ಕೃಷ್ಣನು ನಾನು ಮನುಷ್ಯನಾಗಿ ಕಾಣಿಸಿದರೂ, ಈ ಸೃಷ್ಠಿ ಎಲ್ಲದಕ್ಕೂ ದೇವರಾದರೂ, ಯಾರೂ ನನ್ನನ್ನು ಗುರುತಿಸದೆ ಸಾಧಾರಣ ಮನುಷ್ಯನಂತೆ ಲೆಕ್ಕಿಸಿ ನನ್ನನ್ನು ಅವಮಾನಪಡಿಸುವರೆಂದು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜ್ಯಗುಹ್ಯ ಯೋಗದಲ್ಲಿ ಹನ್ನೊಂದನೇ (11) ಶ್ಲೋಕದಲ್ಲಿ ಹೇಳುವುದು ನಡೆದಿದೆ. ನೋಡಿರಿ.

**ಶ್ಲೋ॥ ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್ ॥**

**ಭಾವಾರ್ಥ :–** "ಸರ್ವ ಜೀವರಾಶಿಗಳಿಗೂ ಅಧಿಪತಿಯಾಗಿ, ದೇವರಾಗಿರುವ ನಾನು ಮಾನವ ಶರೀರ ಧರಿಸಿರುವಾಗ, ನನ್ನೊಂದರ ಶ್ರೇಷ್ಟತ್ವವನ್ನು, ದೈವತ್ವವನ್ನು ಗುರುತಿಸಲಾರದ ಮೂಢಜನರು ನನ್ನನ್ನು ಅವಮಾನಪಡಿಸುವರು." ಎಂದು ಹೇಳಲಾಗಿದೆ. ಈ ವಿಧವಾಗಿ ದೇವರು ಕೃಷ್ಣನಾಗಿ ಬಂದಾಗ ಮಾತ್ರ ತನ್ನ ಇರುವಿಕೆಯನ್ನು ನಿರಾತಂಕವಾಗಿ ಹೇಳಿದ್ದಾನೆ. ಆತನ ಮಾತುಗಳಲ್ಲೇ ನರ ಶರೀರವನ್ನು ಧರಿಸಿದ ನನ್ನನ್ನು ನೋಡಿ ನನ್ನ ದೈವತ್ವವನ್ನು ಮೂರ್ಖರು ಮೂಢರಾದ ಮನುಷ್ಯರು ಗುರುತಿಸಲಾರರೆಂದು ಹೇಳಿದ್ದಾನಲ್ಲ! ಆದ್ದರಿಂದ ಆತನು ಯಾವಾಗ ಬಂದರೂ ಮನುಷ್ಯ ಗುರುತಿಸಲಾರನು.

ಭಗವದ್ಗೀತೆಯಲ್ಲಿ ನಾನು ದೇವರು, ಆದ್ದರಿಂದ ಯಾರಾದರೂ ನನ್ನನ್ನು ಮುಗಿಯುವುದೇ ಶ್ರೇಷ್ಟವೆಂದು ಹೇಳುತ್ತಾ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಕೊನೆಯ 34ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ ಮನ್ಮನಾ ಭವ ಮದ್ಭಕ್ತೋ, ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇ ವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ॥**

**ಭಾವಾರ್ಥ :–** "ನಿನ್ನ ಮನಸ್ಸಿನಲ್ಲಿ ನನ್ನ ಮೇಲೆ ದೃಢ ನಿಶ್ಚಯವಾಗಿ ಭಕ್ತಿ ಹೊಂದಿರು. ಅದರ ಪ್ರಕಾರವೇ ನನ್ನನ್ನು ನನ್ನ ಜ್ಞಾನದಿಂದ ತಿಳಿದುಕೊ. ನನ್ನನ್ನೇ ಆಶ್ರಯಿಸು, ನನ್ನನ್ನೇ ನಮಸ್ಕರಿಸು, ಕೊನೆಗೆ ನನ್ನನ್ನೇ ಹೊಂದುತ್ತೀಯ" ಎಂದು ಹೇಳಲಾಗಿದೆ ಅಲ್ಲವೆ! ಇಷ್ಟು ಗಟ್ಟಿಯಾಗಿ, ಇಷ್ಟು ದೃಢವಾಗಿ ಹೇಳಿದವನು ತಿರುಗಿ ಧರ್ಮಗಳು ತಿಳಿಯದ ಕಡೆ, ಅಧರ್ಮಗಳಿರುವ ಕಡೆ ಉದ್ಭವಿಸುತ್ತೇನೆಂದು ಹೇಳಿದ ಹಾಗೆ ಮೂರು ಸಾವಿರ ವರ್ಷಗಳ ನಂತರ ಇಜ್ರಾಯೇಲ್ ದೇಶದಲ್ಲಿ ಒಬ್ಬ ಅನಾಮಿಕನಾಗಿ ಯೇಸು ಎನ್ನುವ ಹೆಸರಿಂದ ಹುಟ್ಟುವುದು ನಡೆದಿದೆ. ಆದರೆ ಭಾರತ ದೇಶದಲ್ಲಿ ಹುಟ್ಟಿದ ಕೃಷ್ಣನು, ಇಜ್ರಾಯೇಲ್ ದೇಶದಲ್ಲಿ ಹುಟ್ಟಿದ ಯೇಸು ಇಬ್ಬರೂ ಒಬ್ಬರೇ ಎನ್ನುವ ವಿಷಯ ಯಾರೂ ಗ್ರಹಿಸಲಾರದೇ ಹೋಗಿದ್ದಾರೆ. ಯೇಸು ಹುಟ್ಟಿ ಇಂದಿಗೆ 2044 ವರ್ಷಗಳಾದರೂ, ಇಷ್ಟು ಕಾಲ ಕಳೆದರೂ, ಕೃಷ್ಣನು ಹೇಳಿದ ಭಗವದ್ಗೀತೆ, ಯೇಸು ಹೇಳಿದ ಬೈಬಲ್ ಎರಡೂ ಮನುಷ್ಯರ ಮುಂದೇ ಇದ್ದರೂ ಆ ಇಬ್ಬರೂ ಒಬ್ಬರೇ ಎನ್ನುವ ವಿಷಯ ತಿಳಿಯದಂತೆ ಹೋಗಿದೆ. ದೇವರನ್ನು ಪೂರ್ತಿ ವಿಶ್ವಾಸಿಸುವವರಿಗೇ ದೇವರ ವಿಷಯ ತಿಳಿಯುತ್ತದೆ ಎನ್ನುವ ದೇವರ ಮಾತಿನ ಪ್ರಕಾರ ದೇವರನ್ನು ಪೂರ್ತಿ ವಿಶ್ವಾಸಿಸದವರಿಗೆ ದೇವರ ವಿಷಯ ತಿಳಿಯದೆಂದೇ ಹೇಳಬಹುದು. ದೇವರ ಮೇಲೆ ವಿಶ್ವಾಸವಿಲ್ಲದ ಕಾರಣದಿಂದಲೇ ಭೂಮಿಮೇಲೆ ಇತ್ತ ಹಿಂದುಗಳಿಗೂ (ಇಂದೂಗಳಿಗೂ) ಅತ್ತ ಕ್ರೈಸ್ತರಿಗೂ ಕೃಷ್ಣನು, ಯೇಸು ಇಬ್ಬರೂ ಒಬ್ಬರೇ ಎನ್ನುವ ವಿಷಯ ತಿಳಿಯದಂತೆ ಹೋಗಿದೆ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೆಳಬಹುದು. ಅದೇನೆಂದರೇ! ಭೂಮಿಮೇಲೆ ಎಲ್ಲ ದೇಶಗಳಲ್ಲಿ ಯೇಸು ಹೇಳಿದ ಬೈಬಲ್‌ನ್ನು ಅನುಸರಿಸುತ್ತಾ, ಅದೇ ಜ್ಞಾನವನ್ನು ಬೋಧಿಸುವ ಬೋಧಕರು ಎಷ್ಟೋ ಇದ್ದಾರೆ. ಹಾಗೇ ಭಾರತ ದೇಶದಲ್ಲಾದರೂ ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಅನುಸರಿಸುತ್ತಾ ಅದೇ ಭಗವದ್ಗೀತೆಯನ್ನು ಹೇಳುವವರಾಗಿ ಸ್ವಾಮೀಜೀಗಳು ಇದ್ದಾರೆ. ಸಾಮಾನ್ಯ ಮನುಷ್ಯರಿಗೆ ಯೇಸು, ಕೃಷ್ಣನ ವಿಷಯ ತಿಳಿಯದೇ ಹೋದರೂ, ಅತ್ತ ಕ್ರೈಸ್ತವ ಬೋಧಕರೂ, ಇತ್ತ ಹಿಂದೂ ಸ್ವಾಮಿಗಳಿಗೂ ಯೇಸು, ಕೃಷ್ಣನು ಒಬ್ಬರೇ ಎನ್ನುವ ವಿಷಯ ಏಕೆ

ತಿಳಿಯದಂತೆ ಹೋಗಿದೆಯೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ.

ಇಲ್ಲಿ ಮುಖ್ಯವಾಗಿ ಒಂದು ಸೂತ್ರವನ್ನು ನೆನಪುಮಾಡಿಕೊಂಡರೇ ದೇವರ ಮೇಲೆ ಯಾವನಿಗೆ ಶ್ರದ್ಧೆ, ಆಸಕ್ತಿ ಇದೆಯೋ ಅವನಿಗೆ ಮಾತ್ರ ದೇವರು ತಿಳಿಯುವನು ಎನ್ನುವ ಸೂತ್ರ ತಿಳಿಯಬಲ್ಲದು. ಅದರ ಪ್ರಕಾರ ಅಂತರಂಗದಲ್ಲಿ ಶ್ರದ್ಧೆ, ಆಸಕ್ತಿ ಇರುವ ಅವನಿಗೇ ತಿಳಿಯುತ್ತದಾಗಲಿ, ಹೊರಗಿನ ಪ್ರಪಂಚದಲ್ಲಿ ದೊಡ್ಡ ಧನಿಕನಾದರೂ, ದೊಡ್ಡ ಪದವಿಯಲ್ಲಿದ್ದರೂ, ದೊಡ್ಡ ಬೋಧಕನೆಂದು ಹೆಸರೊಂದಿದ್ದರೂ, ಹಾಗೇ ದೊಡ್ಡ ಸ್ವಾಮೀಜೀಯೆಂದು ಪ್ರಖ್ಯಾತಿ ಹೊಂದಿದ್ದರೂ ದೇವರ ವಿಷಯ ತಿಳಿಯದೆಂದು ಹೇಳಬಹುದು. ಅದರ ಪ್ರಕಾರ ಯಾರಿಗೂ ತಿಳಿಯದಂತೇ ಹೋಗುವುದಲ್ಲದೇ ಕೃಷ್ಣನನ್ನು ಯೇಸನ್ನು ಒಬ್ಬರಾಗಿ ಹೋಲಿಸುವುದು ಸಹ ಸರಿಹೋಗದವರಿದ್ದಾರೆ. ಇನ್ನೂ ಕೆಲವು ಜನರಿಗೆ ಪ್ರತ್ಯೇಕಿಸಿ ಹಿಂದುಗಳಿಗೆ ಕೃಷ್ಣನೆಂದರೆ ಇಷ್ಟವಿದ್ದರೂ ಇಲ್ಲದಿದ್ದರೂ ಯೇಸು ಎಂದರೇ ಯಾವ ಮಾತ್ರ ಸರಿಹೋಗುವುದಿಲ್ಲ. ಹಾಗೇ ಕೆಲವರು ಕ್ರೈಸ್ತರು ಯೇಸು ಮೇಲೆ ಪ್ರೀತಿ ಇದ್ದರೂ ಇಲ್ಲದಿದ್ದರೂ ಕೃಷ್ಣನೆಂದರೇ ಸರಿಹೋಗುವುದಿಲ್ಲ. ಕೃಷ್ಣನು ಹಿಂದೂ ಮತದವನೆಂದೂ, ಯೇಸು ಕ್ರೈಸ್ತವ ಮತದವನೆಂದೂ ಮತ ದ್ವೇಷದಿಂದ ಅವರು ಹಾಗೆ ಅಂದುಕೊಳ್ಳುವುದು ನಡೆಯುತ್ತಿದೆ. ಕೆಲವರು ಮತವನ್ನು ಪಕ್ಕಕ್ಕೆ ಇಟ್ಟು ಜ್ಞಾನದ ಪ್ರಕಾರ ಸ್ವಲ್ಪ ಆಲೋಚಿಸಿದರೂ, ಅವರಲ್ಲಿ ಪೂರ್ತಿ ವಿಶ್ವಾಸ ಇಲ್ಲದೇ ಹೋಗುವುದರಿಂದ ಕೃಷ್ಣನು, ಯೇಸು ಒಬ್ಬರೇ ಎನ್ನುವ ವಿಷಯ ಪೂರ್ತಿ ತಿಳಿಯದಂತೆ ಹೋಗಿದೆ. ಅವರಲ್ಲಿ ದೇವರ ಮೇಲೆ ಸ್ವಲ್ಪ ವಿಶ್ವಾಸವಿದ್ದರೂ ಒಂದು ವಿಧವಾಗಿ ದೇವರೇ ಅವರಿಗೆ ತಿಳಿಯದಂತೆ ಹೋಗುವಹಾಗೆ ಮಾರ್ಗವನ್ನು ಏರ್ಪಡಿಸಿದ್ದಾನೆಂದು ಹೇಳಬಲ್ಲೆವು. ಏಕೆಂದರೆ! ಭಗವದ್ಗೀತೆ ಗ್ರಂಥದಲ್ಲಿ ಮನುಷ್ಯನಾಗಿ ಬಂದಿರುವ ಕೃಷ್ಣನು ನಾನೇ ದೇವರು ಎಂದು ಪ್ರಕಟಿಸಿ ಹೇಳಿ, ನಂತರ ಇಜ್ರಾಯೇಲ್ ದೇಶದಲ್ಲಿ ಮನುಷ್ಯನ ಹಾಗೇ ಹುಟ್ಟಿ ಬಂದಾಗ ನಾನು ದೇವರ ಕುಮಾರನೆಂದು ಹೇಳುವುದು ನಡೆದಿದೆ.

ಸ್ವಲ್ಪ ಪರೋಕ್ಷವಾಗಿ ಯೇಸೇ ದೇವರೆನ್ನುವ ಭಾವ ಬರುವಹಾಗೇ ಕೆಲವು ವಾಕ್ಯಗಳಲ್ಲಿ ಅರ್ಥವಾದರೂ, ಕೆಲವು ವಾಕ್ಯಗಳಲ್ಲಿ ತಂದೆ ಬೇರೆ, ಕುಮಾರನು ಬೇರೆಯೆಂದು ಹಾಗೇ ಯೇಸು ತಾನು ದೇವರ ಕುಮಾರನೆಂದೂ, ನನ್ನ ತಂದೆ ವಾಕ್ಯಗಳನ್ನೇ ನಾನು ಹೇಳುವೆನು ಎಂದು ಹೇಳುವುದರಿಂದ ಯೇಸು ದೇವರ ಕುಮಾರನೆಂದು ಅರ್ಥವಾಗಿದೆ. ಎಲ್ಲಾದರೂ ಕೆಲವರು ಯೇಸನ್ನು ದೇವರೆಂದು ಹೇಳಿದರೂ ಕೂಡಲೇ ತಮ್ಮ ಮಾತುಗಳಲ್ಲಿ ಯೇಸು ದೇವರು ಅಲ್ಲ, ಯೇಸು ದೇವರ ಕುಮಾರ ನೆಂದು ಹೇಳುತ್ತಿರುವರು. ಎರಡು ಗ್ರಂಥಗಳಲ್ಲಿ ಬೇರೆ ಬೇರೆ ವಾಕ್ಯಗಳಿರುವುದರಿಂದ ಅವುಗಳಲ್ಲಿನ ಅಂತರಾರ್ಥ ತಿಳಿಯದವರಿಗೆ ಯೇಸು, ಕೃಷ್ಣನಲ್ಲವೆಂದು ಧೃಢವಾಗಿ ತಿಳಿದುಹೋಗಿದೆ.

ಯೇಸು ದೊಡ್ಡ ಜ್ಞಾನಿ ಎಂದೂ, ಆದ್ದರಿಂದ ತಾನು ದೇವರ ಕುಮಾರನೆಂದು ಹೇಳುತ್ತಿದ್ದಾನೆಂದೂ, ಈಗ ಜ್ಞಾನ ತಿಳಿದ ನಂತರ ಎಲ್ಲರ ತಂದೆ ಆದ ದೇವರು ಪರಲೋಕದಲ್ಲಿ ಇದ್ದಾನೆಂದೂ, ಎಲ್ಲರಹಾಗೆ ಯೇಸೂ ಸಹ ಒಬ್ಬ ಮನುಷ್ಯನೇ ಆದ್ದರಿಂದ, ಯೇಸು ತಮಗೆ ಅಣ್ಣ ಆಗುತ್ತಾನೆಂದು ಹೇಳುತ್ತಾ ಕೆಲವರು ಕ್ರೈಸ್ತರು ನಮ್ಮ ದೊಡ್ಡಣ್ಣ ಯೇಸು ಎಂದು ಅನ್ನುತ್ತಿದ್ದಾರೆ. ಈ ವಿಧವಾಗಿ ಯೇಸು ಯಾರೋ ಸಹ ತಿಳಿಯಲಾರದ ಕ್ರೈಸ್ತವರು ಯೇಸು ಹಿಂದಿನ ಜನ್ಮಗಳಲ್ಲಿ ಕೃಷ್ಣನೆಂದು ಹೇಗೆ ತಿಳಿಯಬಲ್ಲರು? ದೊಡ್ಡ ಬೋಧ ಕರಾದವರಿಗೇ ಯೇಸಾಗಲೀ, ಯೇಸು ಬೋಧನೆಗಳಾಗಲೀ ಅರ್ಥವಾಗದಿರು ವಾಗ, ಎಲ್ಲೋ ಭಾರತದೇಶದಲ್ಲಿ ಹುಟ್ಟಿ ಗೀತೆಯನ್ನು ಬೋಧಿಸಿ ಇಂದೂವಾಗಿ ಚಲಾವಣೆ ಆದ ಕೃಷ್ಣನು ಯಾರೋ ಹೇಗೆ ತಿಳಿಯಬಲ್ಲರು? ಅದೇ ವಿಧವಾಗಿಯೇ ಭಾರತ ದೇಶದಲ್ಲಿ ಹುಟ್ಟಿದ ಕೃಷ್ಣನು ಯಾರೋ ಆತನ ಜ್ಞಾನವೇನೋ ಇಂದಿಗೂ ಸರಿಯಾಗಿ ಅರ್ಥವಾಗದಿರುವಾಗ, ಆತನೇ ಯೇಸಾಗಿ ಹುಟ್ಟಿದ್ದಾನೆಂದು ನಾವು ಹೇಳಿದರೂ ಕೇಳಿ ಸಹಿಸಲಾರದ ಸ್ಥಿತಿಯಲ್ಲಿ ಇದ್ದಾರೆ. ಕೃಷ್ಣನು ಹಿಂದೂ ಮತದಲ್ಲಿ ಹುಟ್ಟಿದ ಪ್ರವಕ್ತ ಎಂದು ಕೆಲವರು ಹೇಳುತ್ತಿರುವಾಗ, ಕೃಷ್ಣನನ್ನು ಜ್ಞಾನಿಯಾಗಿ ಗುರುತಿಸದೇ ಜಾರನೆಂದೂ, ಚೋರನೆಂದೂ ಹೇಳುವವರಿದ್ದಾರೆ.

ಇಜ್ರಾಯೇಲ್ ದೇಶದಲ್ಲಿ ಹುಟ್ಟಿದ ಯೇಸನ್ನು ಕ್ರೈಸ್ತವ ಮತ ಪ್ರವಕ್ತನಾಗಿ ಹೇಳುವ ಕ್ರೈಸ್ತರು ಆದಿನ ಆತನನ್ನು ಗುರುತಿಸದೆ, ಗೌರವಿಸದೆ, ಅನವಶ್ಯಕ ಆರೋ ಪಣೆಗಳಿಂದ ನ್ಯಾಯಸ್ಥಾನಕ್ಕೆ ಕರೆತಂದು, ಶಿಕ್ಷೆ ಹಾಕಿಸಿ ಹತ್ತಿರವಿದ್ದು ಸಾಯಿಸಿದ್ದಾರೆ. ಈದಿನ ಆತನು ಸತ್ತುಹೋದ ಶಿಲುಬೆಯನ್ನು ದೊಡ್ಡದಾಗಿ ಇಟ್ಟುಕೊಂಡು ಆತನ ಫೋಟೋವನ್ನು ಸಹ ಸರಿಯಾಗಿ ಇಟ್ಟುಕೊಂಡಿಲ್ಲ. ದೇವರು ಮನುಷ್ಯ ನಾಗಿ ಬಂದು ಯೇಸೂ ಎಂದು ಕರೆಯಲ್ಪಟ್ಟರೂ, ಮೊದಲು ಬಂದಾಗ ಕೃಷ್ಣನಾಗಿ ಕರೆಯಲ್ಪಟ್ಟಿದ್ದಾನೆಂದು ತಿಳಿಯದೇ ಹೋಗುವುದು ದೊಡ್ಡ ಅಜ್ಞಾನವೆಂದೇ ಹೇಳಬಹುದು. ಭಾರತದೇಶದಲ್ಲಿ ಹುಟ್ಟಿದ ಕೃಷ್ಣನಿಗೆ ಅದಕ್ಕೂ ಮೊದಲು ಯಾರಿಗೂ ಇಡದ ಹೆಸರನ್ನು ಇಡುವುದು ನಡೆದಿದೆ. ಹಾಗೇ ಇಜ್ರಾಯೇಲ್ ದೇಶದಲ್ಲಿ ಹುಟ್ಟಿದ ಯೇಸುಗೂ ಸಹ ಅರ್ಥದಿಂದ ಕೂಡಿದ ಹೇಸರೇ ಇಡುವುದು ನಡೆದಿದೆ.

ಭಾರತದೇಶದಲ್ಲಿ ಎಷ್ಟೋ ಪ್ರಾಂತೀಯ ಭಾಷೆಗಳಿದ್ದರೂ ಹೆಚ್ಚಿನ ವಿಸ್ತೀರ್ಣದಲ್ಲಿ ಹಿಂದೀ ಭಾಷೆ ಮಾತನಾಡುತ್ತಿದ್ದಾರೆ. ದೇಶ ಭಾಷೆಗಳಲ್ಲಿ ಬಹಳ ಕಡಿಮೆ ಜನ ಸಂಸ್ಕೃತವನ್ನು ಮಾತನಾಡಿದರೂ ಅದನ್ನು ಕೆಲವರು ಸ್ವಾರ್ಥ ದಿಂದಲೋ, ಅಭಿಮಾನದಿಂದಲೋ ದೊಡ್ಡ ಭಾಷೆಯಾಗಿ ಹೇಳುತ್ತಿದ್ದಾರೆ. ಇಷ್ಟು ಭಾಷೆಗಳಲ್ಲಿ "ಕೃಷ್ಣ" ಎನ್ನುವ ಪದ ಪೂರ್ತಿಯಾಗಿ ಯಾವ ಭಾಷೆಯಲ್ಲಿರುವುದೋ ಹೇಳಲಾರೆನಾಗಲೀ, ಪದಕ್ಕಿರುವ ಅರ್ಥವನ್ನು ಪೂರ್ತಿಯಾಗಿ ಹೇಳಬಲ್ಲೆನು. ಕೃಷ್ಣಾ ಎಂದರೆ ಕಪ್ಪು ಎಂದು ಅರ್ಥ. ಕಪ್ಪನೆಯ ಜಿಂಕೆಗಳನ್ನು ಕೃಷ್ಣ ಜಿಂಕೆಗಳೆನ್ನುವುದು ನಡೆಯುತ್ತಿದೆ. ಕಪ್ಪನ್ನು ಕೃಷ್ಣ ಎನ್ನುವುದರಿಂದ ಕೃಷ್ಣನು ಕಪ್ಪಾಗಿ ಹುಟ್ಟಿದ್ದಾನೆಂದು 'ಕೃಷ್ಣ' ಎಂದು ಹೆಸರು ಇಡುವುದು ನಡೆದಿದೆಯೆಂದು ಕೆಲವರನ್ನುತ್ತಿದ್ದಾರೆ. ಕಪ್ಪಾಗಿದ್ದರೆ ಕರಿಯ ಎಂದು ಹೆಸರು ಇಡುವುದು ಆತನನ್ನು ಹೇಳನ ಮಾಡಿದಂತಿರುತ್ತದಲ್ಲವೆ! ಆದ್ದರಿಂದ ಆ ಉದ್ದೇಶದಿಂದ ಹೆಸರು ಇಡುವುದು ನಡೆದಿರುವುದಿಲ್ಲ. ಆತನಿಗೆ ಹೆಸರು ಇಡುವ ದಿನದಂದು ಅವರಲ್ಲಿನ ಆತ್ಮೇ ಆ ವಿಧವಾಗಿ ಪ್ರೇರೇಪಿಸಿ ದೊಡ್ಡವರಿಂದಲೇ ನಾಮಕರಣ ಮಾಡಿಸುವುದು ನಡೆದಿರುತ್ತದೆ. ಯಾವುದು ಏನಾದರೂ

ಬಂದಿರುವವನು ಯಾರೋ ಆತ್ಮಕ್ಕೆ ತಿಳಿಯುತ್ತದೆ ಆದ್ದರಿಂದ ಆತನಿಗೆ ತಕ್ಕ ಹೆಸರನ್ನು ನಿರ್ಣಯಿಸಿದೆಯೆಂದು ಅಂದುಕೊಳ್ಳುತ್ತೇನೆ. ಕೃಷ್ಣ ಎಂದರೇ ಕಪ್ಪು, ಕಪ್ಪು ಎಂದರೆ ಕಾಣಿಸದ ಕತ್ತಲು ಎಂದು ಅರ್ಥ. ಕಪ್ಪನೆಯ ತೆರೆಯಂತಿರುವ ಕತ್ತಲಲ್ಲಿ ಯಾವುದೂ ಕಾಣಿಸದು, ಯಾವುದೂ ತಿಳಿಯದು. ನಮಗೆ ದೃಷ್ಠಿ ಇದ್ದರೂ ಕತ್ತಲಲ್ಲಿ ಇಲ್ಲದಂತೇಯೆಂದು, ಯಾರೂ ನೋಡಲಾರದ ಸ್ಥಿತಿ ಕತ್ತಲೆಂದು ಹೇಳಬಹುದು. ಯಾರಿಗೂ ತಿಳಿಯದವನೇ ದೇವರು, ಆದ್ದರಿಂದ ಕತ್ತಲೊಂದಿಗೆ ಹೋಲಿಸಿ ಹೇಳುತ್ತಾ ದ್ವಾಪರಯುಗದಲ್ಲಿ ಬಂದಿರುವ ದೇವರನ್ನು ಕೃಷ್ಣಾ ಎಂದು ಕರೆಯುವುದೂ, ಆತನನ್ನು ಕೃಷ್ಣನೆಂದು ಹೇಳುವುದೂ ನಡೆದಿದೆ. ಕೃಷ್ಣಾ ಎಂದರೇ ದೇವರೆನ್ನುವ ಭಾವ ತಿಳಿಯದವರು ಕಪ್ಪಗಿರುವವನಾದ್ದರಿಂದ ಹಾಗೆ ಹೆಸರು ಇಟ್ಟಿದ್ದಾರೆಂದುಕೊಳ್ಳುವಹಾಗೆ, ಆತನ ಶರೀರ ಛಾಯೆ ಸಹ ಕಪ್ಪಾಗಿ ಇರುವುದರಿಂದ ಆತನ ವಿಷಯದಲ್ಲಿ ಹೆಸರಲ್ಲಿನ ಅರ್ಥವನ್ನು ಸಹ ಯಾರೂ ಗುರುತಿಸಲಾಗದೇ ಹೋಗಿದ್ದಾರೆ. ಈ ದಿನ ನಾವು ಕೃಷ್ಣಾ ಎನ್ನುವ ಪದಕ್ಕೆ ತಿಳಿಯದ ದೇವರೆಂದು ಅರ್ಥ ಹೇಳಿದರೆ ನಮ್ಮ ಮಾತನ್ನು ಕಲ್ಪನೆ ಎನ್ನುವವರು ಸಹ ಇದ್ದಾರೆ. ಯಾರು ಗ್ರಹಿಸಿದರೂ ಗ್ರಹಿಸದೇ ಇದ್ದರೂ ಕೃಷ್ಣನು ಮನುಷ್ಯನಾಗಿ ಬಂದರೂ, ನಾನು ನಿಮಗೆ ತಿಳಿಯದವನೇ ಎಂದು ಹೇಳಿದಹಾಗೆ ಆತನ ಹೆಸರು ಇದೆ.

ಇಜ್ರಾಯೇಲ್ ದೇಶದಲ್ಲಿ ಹುಟ್ಟಿದ ಯೇಸು ಹೆಸರು ಸಹ ವಿಶೇಷ ಅರ್ಥದಿಂದ ಕೂಡಿಕೊಂಡಿದೆ. ಆಗ ಆ ಪ್ರಾಂತದಲ್ಲಿ ಇರುವ ಹೆಬ್ರೀ ಭಾಷೆಯಲ್ಲಿ ಯೇಸು ಎಂದರೆ ರಕ್ಷಕನು ಎಂದು ಅರ್ಥವೆಂದು ಹೇಳುವುದು ಕೇಳಿದ್ದೇವೆ. ಜ್ಞಾನಶಕ್ತಿ ಕೊಟ್ಟು ಕರ್ಮಗಳನ್ನು ಇಲ್ಲದಂತೆ ಮಾಡುವ ವಿಧಾನವನ್ನು ತಿಳಿಸಿ, ಕರ್ಮಗಳಿಂದ ರಕ್ಷಿಸುವವನು ಆದ್ದರಿಂದ ಆತನಿಗೆ ಯೇಸು ಎಂದು ಹೆಸರು ಇಟ್ಟು ಕರೆಯುವುದು ನಡೆದಿದೆ. ಆದರೂ ಆದಿನ ಕಾಣಿಸುವ ಆ ವ್ಯಕ್ತಿಯಲ್ಲಿ ನಿಜವಾಗಿ ಅಂತಹ ಶಕ್ತಿ ಇದೆಯೆಂದು ಯಾರೂ ತಿಳಿದುಕೊಳ್ಳಲಾಗದೆ ಹೋಗಿದ್ದಾರೆ. ತನ್ನನ್ನು ತಾನು ರಕ್ಷಿಸುಕೊಳ್ಳದಿರುವವನು ಇತರರನ್ನು ಹೇಗೆ

ರಕ್ಷಿಸುತ್ತಾನೆಂದು ಅಂದುಕೊಂಡಿದ್ದಾರೆ ಹೊರತು ಆತನ ರಕ್ಷಣ ವಿಧಾನವನ್ನು ಗ್ರಹಿಸಲಾರದೆಹೋಗಿದ್ದಾರೆ. ಪ್ರತ್ಯಕ್ಷವಾಗಿ ಹಿಂಸಿಸಿ ಹೆಸರಿಗೆ ತಕ್ಕಹಾಗೆ ಇಲ್ಲವಲ್ಲ ಎಂದು ಅಂದವರೂ ಸಹ ಇದ್ದಾರೆ. ಈ ವಿಧವಾಗಿ ದೇವರು ಪ್ರತ್ಯೇಕ ಮನುಷ್ಯನಾಗಿ ಭೂಮಿಮೇಲೆಗೆ ಬರುವಾಗ, ಪ್ರತ್ಯೇಕವಾದ ಹೆಸರಿನಿಂದಲೇ ಬರಬಹುದೆಂದು ಅರ್ಥವಾಗುತ್ತದೆ. ಈ ಬಾರಿ ಪ್ರತ್ಯೇಕವಾದ ಹೆಸರಿಂದ ಬಂದರೂ, ಮನುಷ್ಯರು ಯಾರೂ ಗುರುತಿಸದಹಾಗೇ ಆತನು ಇರಬಲ್ಲನು. ಮೊದಲು ತಿಳಿಯದವನು ಎನ್ನುವಹಾಗೆ ಕೃಷ್ಣ ಎಂದೂ, ಎರಡನೆಯ ಬಾರಿ ಕರ್ಮಗಳಿಂದ ರಕ್ಷಿಸುವವನೆನ್ನುವಹಾಗೆ ಯೇಸು ಎನ್ನುವ ಹೆಸರಿಂದ ಬಂದಿದ್ದಾನೆ. ಈ ಬಾರಿ ನನಗಿಂತ ಮಿಗಿಲಾದವನು ಇಲ್ಲ ಎನ್ನುವ ಅರ್ಥದಿಂದ ಬರಬಲ್ಲನೆಂದು ಕೊಳ್ಳುತ್ತೇನೆ. ಆದರೂ ಆತನು ಯಾವ ಹೆಸರಿಂದ ಬಂದರೂ ಯಾರೂ ಗುರುತಿಸುವುದಕ್ಕೆ ಅವಕಾಶವಿಲ್ಲದಂತೆ ಬರುತ್ತಾನೆ. ಯಾವಾಗ ಬಂದರೂ ತನಗೆ ಸರಿಯಾದ ಅರ್ಥವನ್ನು ಕೊಡುವ ಹೆಸರಿಂದಲೇ ಬರಬಲ್ಲನು. ಭಗವದ್ಗೀತೆ, ಬೈಬಲ್‌ನ್ನು ಹೇಳಿದವನು ಒಬ್ಬ ಭಗವಂತನೇ ಆದರೂ, ಖುರ್‌ಆನ್ ಗ್ರಂಥವನ್ನು ಹೇಳಿರುವುದು ಮನುಷ್ಯನಂತೆ ಇರುವ ಭಗವಂತನು ಅಲ್ಲ. ಅಂತಿಮ ದೈವ ಗ್ರಂಥವೆಂದು ಹೆಸರುಹೊಂದಿದ ಅದನ್ನು ಹೇಳಿದ ಜಿಬ್ರಯೇಲ್ ಒಂದು ಗ್ರಹವೆಂದು ಮರೆಯಬಾರದು. ಸೂರ್ಯಗ್ರಹ ಜ್ಞಾನವನ್ನು ಭೂಮಿಮೇಲೆ ಬೋಧಿಸಿದಹಾಗೆ ಜಿಬ್ರಯೇಲ್ ಎನ್ನುವ ಗ್ರಹ ಸಹ ದೇವರ ಜ್ಞಾನವನ್ನು ಬೋಧಿಸುವುದು ನಡೆದಿದೆ. ಅಷ್ಟೇ ಆಗಲೀ ಖುರ್‌ಆನ್‌ನನ್ನು ಭಗವಂತನು ಬಂದು ಹೇಳಲಿಲ್ಲ.

ಮುಖ್ಯವಾಗಿ ಗಮನಿಸಿದರೆ ಬೈಬಲ್‌ನ್ನು ಭಗವಂತನು, ಖುರ್‌ಆನ್ ನನ್ನು ಖಗೋಳ ಗ್ರಹ ಹೇಳಿರುವಾಗ, ಭಗವದ್ಗೀತೆಯನ್ನು ಗ್ರಹವೂ, ಭಗವಂತನೂ ಇಬ್ಬರೂ ಹೇಳಿದ್ದಾರೆ. ಒಂದು ಬಾರಿ ಸೂರ್ಯಗ್ರಹ, ಒಂದುಬಾರಿ ಭಗವಂತನೂ ಇಬ್ಬರೂ ಹೇಳುವುದರಿಂದ, ಭಗವದ್ಗೀತೆಯನ್ನು ಎರಡು ಗ್ರಂಥಗಳಿಗಿಂತ ಮೊದಲು ಹೇಳುವುದರಿಂದ, ಅದು ಪ್ರಥಮ ದೈವ ಗ್ರಂಥವೆಂದು ಹೆಸರು

ಹೊಂದಿದೆ. ಇಬ್ಬರು ಬೋಧಿಸಿದ ಜ್ಞಾನ ಇರುವುದರಿಂದ ಒಂದು ವಿಧವಾಗಿ ಪ್ರಥಮ ಗ್ರಂಥವಾದರೆ, ಎಲ್ಲದಕ್ಕಿಂತ ಮೊದಲು ಗ್ರಂಥರೂಪವಾಗಿರುವು ದರಿಂದ ಸಹ ಗೀತೆಯೇ ಪ್ರಥಮ ದೈವ ಗ್ರಂಥವಾಗಿದೆ. ದ್ವಿತೀಯ ಗ್ರಂಥವಾಗಿ ಬರೆಯಲಾಗಿರುವ ಬೈಬಲ್‌ನ್ನು ಯೇಸು ಒಬ್ಬರು ಹೇಳಿದರೂ, ಅಂತಿಮ ದೈವ ಗ್ರಂಥವಾಗಿ ಬರೆಯಲಾಗಿರುವ ಖುರ್‌ಆನ್‌ನನ್ನು ಜಿಬ್ರಯೇಲ್ ಒಬ್ಬರೇ ಹೇಳಿದರೂ, ಬೈಬಲ್ ಜ್ಞಾನವನ್ನು ಮೂರು ವರ್ಷಗಳು, ಖುರ್‌ಆನ್ ಗ್ರಂಥ ಜ್ಞಾನವನ್ನು ಇಪ್ಪತ್ತು ಮೂರು ವರ್ಷಗಳು ಹೇಳಿದರೂ ಇತ್ತ ಯೇಸಾಗಲೀ, ಅತ್ತ ಜಿಬ್ರಯೇಲ್ ಆಗಲೀ ಬೇರೆಬೇರೆ ಜ್ಞಾನವನ್ನು ಹೇಳದೇ, ಒಂದೇ ಜ್ಞಾನವನ್ನು ಹೇಳುವುದೇ ಅಲ್ಲದೇ ಇಬ್ಬರೂ ಪ್ರಥಮ ಗ್ರಂಥವನ್ನು ಧೃಡೀಕರಿಸುತ್ತಾ ಹೇಳಿದ್ದಾರೆ. ಅದನ್ನನುಸರಿಸಿ ನೋಡಿದರೆ ಪ್ರಥಮ ಗ್ರಂಥವಾದ ಭಗವದ್ಗೀತೆಗು ಉಳಿದ ಎರಡು ಗ್ರಂಥಗಳು ಸಾಕ್ಷಿ ಕೊಡುವಹಾಗೆ ಕಾಣಿಸುತ್ತಿದೆ. ಎಲ್ಲಾದರೂ ಒಂದು ಗ್ರಂಥವನ್ನು ಮತ್ತೊಂದು ಗ್ರಂಥ ಖಂಡಿಸುವುದಾಗಲೀ, ಭಿನ್ನವಾಗಿ ಹೇಳುವು ದಾಗಲೀ ಇಲ್ಲ. ಹಾಗೆ ಇಲ್ಲದಂತೆ ಹೋಗುವುದೇ ಅಲ್ಲದೆ ಭಗವದ್ಗೀತೆಯನ್ನು ಸಮರ್ಥಿಸುವುದಕ್ಕೇ ನಾವು ಬಂದಿದ್ದೇವಾಗಲೀ, ತಪ್ಪು ಹಿಡಿಯುವುದಕ್ಕಾಗಲೀ, ಖಂಡಿಸುವುದಕ್ಕಾಗಲೀ ಅಲ್ಲವೆಂದು ಗ್ರಂಥಗಳಲ್ಲಿಯೇ ಹೇಳಲಾಗಿದೆ. ದ್ವಿತೀಯ ದೈವ ಗ್ರಂಥವಾದ ಬೈಬಲ್ ಹೊಸ ನಿಬಂಧನೆಯಲ್ಲಿ ಮತ್ತಾಯ ಸುವಾರ್ತೆಯಲ್ಲಿ 5ನೇ ಅಧ್ಯಾಯದಲ್ಲಿ 17,18 ವಚನಗಳಲ್ಲಿ ಯೇಸು ಹೀಗೆ ಹೇಳಿದ್ದಾನೆ **(17) "ಧರ್ಮಶಾಸ್ತ್ರವನ್ನಾದರೂ, ಪ್ರವಕ್ತರ ವಚನಗಳನ್ನಾಗಲೀ ತೆಗೆದುಹಾಕುವುದಕ್ಕೆ ನಾನು ಬಂದೆನೆಂದು ಅಂದುಕೊಳ್ಳಬೇಡ. ನೆರವೇರಿಸುವುದಕ್ಕೇ ಆಗಲಿ ತೆಗೆದು ಹಾಕುವುದಕ್ಕೆ ನಾನು ಬರಲಿಲ್ಲ." (18) "ಆಕಾಶ ಭೂಮಿ ಗತಿಸಿಹೋದರಾಗಲಿ, ಧರ್ಮಶಾಸ್ತ್ರವೆಲ್ಲವೂ ನೆರವೇರುವವರೆಗೂ ಅದರೊಳಗಿಂದ ಒಂದು ಕಾಮಾ ಆಗಲೀ, ಒಂದು ಸೊನ್ನೆಯಾಗಲೀ ತಪ್ಪಿಹೋಗುವುದಿಲ್ಲವೆಂದು ನಿಶ್ಚಯವಾಗಿ ನಿಮ್ಮೊಂದಿಗೆ ಹೇಳುತ್ತಿದ್ದೇನೆ."** ಈ ಎರಡು ವಾಕ್ಯಗಳಲ್ಲಿ ವಿಶೇಷವಾಗಿ

ಧರ್ಮಶಾಸ್ತ್ರವೆನ್ನುವುದೇ ಇದೆ. ಧರ್ಮಶಾಸ್ತ್ರವೆನ್ನುವುದು ಯಾವುದು ಎಂದು ಪ್ರಶ್ನಿಸಿಕೊಂಡು ನೋಡಿದರೆ ಯೇಸು ಹುಟ್ಟುವುದಕ್ಕೆ ಮೊದಲು ಇರುವ ಹಳೆ ನಿಬಂಧನೆಗಳಲ್ಲಿ ಧರ್ಮಶಾಸ್ತ್ರವನ್ನು ಕುರಿತು ಇದ್ದರೂ, ಅವರು ಯಾವುದನ್ನು ಕುರಿತು ಹೇಳಿಕೊಂಡಿದ್ದಾರೋ ನನಗೆ ತಿಳಿಯದು. ನನಗೆ ತಿಳಿದ ಧರ್ಮಶಾಸ್ತ್ರ ದೇವರು ಹೇಳಿರುವುದೊಂದೇ. ಮನುಷ್ಯರು ಹೇಳಿರುವುದು ಯಾವುದಾಗಲೀ ಧರ್ಮಶಾಸ್ತ್ರವಲ್ಲ. ಯೇಸು ಬರುವುದಕ್ಕೆ ಮೊದಲು ಇರುವ ಧರ್ಮಶಾಸ್ತ್ರ ಒಂದೇ ಇದೆ. ದೇವರ ಧರ್ಮಗಳಿಂದ ಕೂಡಿಕೊಂಡಿರುವುದೇ ಧರ್ಮಶಾಸ್ತ್ರ. ಆದ್ದರಿಂದ ಅದಕ್ಕೂ ಮೊದಲು ಒಂದೇ ಒಂದು ಧರ್ಮಶಾಸ್ತ್ರವಿದೆ. ಅದೇ ಆದಿ ದೈವ ಗ್ರಂಥವಾದ ಭಗವದ್ಗೀತೆ. ಭಗವದ್ಗೀತೆ ನಂತರ ತಯಾರಾದ ಎರಡನೆ ಧರ್ಮಶಾಸ್ತ್ರ ಬೈಬಲ್. ಬೈಬಲ್‌ಗಿಂತ ಮೊದಲು ಒಂದೇ ಒಂದು ಭಗವದ್ಗೀತೆ ಪ್ರಪಂಚ ವೆಲ್ಲದಕ್ಕೂ ಧರ್ಮ ಶಾಸ್ತ್ರವಾದ್ದರಿಂದ ಆ ದಿನ ಯೇಸು ತನ್ನ ಗ್ರಂಥದಲ್ಲಿ ಮೊದಲ ಗ್ರಂಥವನ್ನು ಕುರಿತು ಹೇಳುತ್ತಾ 'ಧರ್ಮಶಾಸ್ತ್ರ' ಎನ್ನುವ ಪದವನ್ನು ಉಪಯೋಗಿಸಿದ್ದಾನೆ.

ಯೇಸು ಹೇಳಿದ ವಾಕ್ಯದಲ್ಲಿ ಧರ್ಮಶಾಸ್ತ್ರದ ನಂತರ ಪ್ರವಕ್ತರ ವಚನಗಳನ್ನಾದರೂ ಎಂದು ಹೇಳಿದ್ದಾನೆ. ಮೊದಲು ಏಕ ವಚನದಲ್ಲಿ ಧರ್ಮಶಾಸ್ತ್ರವನ್ನು ಹೇಳಿ ನಂತರ ಬಹುವಚನದಲ್ಲಿ ಪ್ರವಕ್ತರನ್ನಾದರೂ ಅಂದಿದ್ದಾನೆ. ಇದನ್ನು ಕುರಿತು ನಾನು ಏನು ಹೇಳುತ್ತಿದ್ದೇನೆಂದರೇ, ದೇವರ ಜ್ಞಾನವನ್ನು ಬೋಧಿಸುವವರೆಲ್ಲರೂ ಪ್ರವಕ್ತರೇ ಎಂದು ನಮ್ಮ ರಚನೆಗಳಲ್ಲಿನ **"ಪ್ರವಕ್ತರು ಯಾರು?"** ಎನ್ನುವ ಗ್ರಂಥದಲ್ಲಿ ಹೇಳಿದ್ದೇವೆ. ಇದರ ಪ್ರಕಾರ ದೇವರ ಬೋಧನೆಯನ್ನು ಬೋಧಿಸುವವರು ಎಷ್ಟುಜನರಾದರೂ, ಯಾರಾದರೂ ಪ್ರವಕ್ತರು ಆಗಬಹುದು. ಆದರೆ ಧರ್ಮಶಾಸ್ತ್ರ ಒಂದೇ ಇರುತ್ತದೆ. ಎರಡು ಮೂರು ಇರುವುದಿಲ್ಲ. ಬೈಬಲ್‌ನ್ನು, ಖುರ್‌ಆನ್‌ನ್ನು ಬೇರೆ ಬೇರೆ ಹೆಸರುಗಳಿಂದ ದೈವಗ್ರಂಥಗಳೆಂದರೂ ಅವೆಲ್ಲವೂ ಒಂದೇ ಧರ್ಮಶಾಸ್ತ್ರಕ್ಕೆ ಸಂಬಂಧಿಸಿರುವವೇ. ಒಂದೇ ಧರ್ಮಶಾಸ್ತ್ರವನ್ನೇ ಬೇರೆ ಬೇರೆ ದೇಶಗಳಲ್ಲಿ ಹೇಳಿಕೊಂಡು ಅವರು

ಬೇರೆಬೇರೆ ಹೆಸರುಗಳು ಇಟ್ಟುಕೊಳ್ಳುವುದು ನಡೆದಿದೆ. ಧರ್ಮಶಾಸ್ತ್ರ ಎಂದಿಗೂ ಒಂದೇ ಇರುತ್ತದೆ. ಆದರೆ ಪ್ರವಕ್ತರು ಎಷ್ಟು ಜನರಾದರೂ ಇರಬಹುದು. ಧರ್ಮಶಾಸ್ತ್ರವನ್ನಾಗಲೀ, ಧರ್ಮಶಾಸ್ತ್ರದಲ್ಲಿನ ಜ್ಞಾನವನ್ನು ಬೋಧಿಸುವ ಪ್ರವಕ್ತರ ವಚನಗಳನ್ನಾಗಲೀ ನಾನು ಖಂಡಿಸುವುದಕ್ಕೆ ಬರಲಿಲ್ಲ, ನೆರವೇರಿಸುವುದಕ್ಕೇ ಬಂದಿದ್ದೇನೆಂದು ಯೇಸು ಹೇಳಿದ್ದಾನೆ. ಇಲ್ಲಿ ಇನ್ನೊಂದು ಮಾತು ಹೇಳುವುದೇನೆಂದರೇ! ಧರ್ಮಶಾಸ್ತ್ರವನ್ನು ಬೋಧಿಸುವವರೇ ಪ್ರವಕ್ತರಾಗುತ್ತಾರಾಗಲೀ, ಪ್ರವಕ್ತರೆನ್ನುವ ಹೆಸರು ಇಟ್ಟುಕೊಂಡವರೆಲ್ಲರೂ ಬೋಧಿಸಿರುವುದು ಧರ್ಮಶಾಸ್ತ್ರ ಅಲ್ಲವೆಂದು ಹೇಳಬಹುದು. ಆದ್ದರಿಂದ 17ನೇ ವಾಕ್ಯದಲ್ಲಿ ಮೊದಲು ಧರ್ಮಶಾಸ್ತ್ರವೆಂದು ಹೇಳಿ ನಂತರ ಪ್ರವಕ್ತರ ವಚನಗಳೆಂದು ಹೇಳಿದ್ದಾರೆ.

ಬೈಬಲ್ ಸಹ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವೇ ಆಗಿರುವುದರಿಂದ ಬೈಬಲ್‌ನ್ನು ಬೋಧಿಸಿದವನು ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಮಾತನಾಡುವುದಿಲ್ಲ. ಆದ್ದರಿಂದ ಯೇಸು ಧರ್ಮಶಾಸ್ತ್ರವನ್ನು ನಾನು ಖಂಡಿಸುವುದಕ್ಕೆ ಬರಲಿಲ್ಲ ಎಂದಿದ್ದಾನೆ. ಕೃಷ್ಣನಾಗಲಿ, ಯೇಸಾಗಲಿ ಇವರು ಇಬ್ಬರು ಧರ್ಮಶಾಸ್ತ್ರದಲ್ಲಿನ ವಿಷಯಗಳನ್ನು ಬೋಧಿಸುವುದರಿಂದ ಇಬ್ಬರನ್ನೂ ಪ್ರವಕ್ತರೆಂದು ಹೇಳಬಹುದು. ಮೊದಲು ಹೇಳಲಾಗಿರುವ ಧರ್ಮಶಾಸ್ತ್ರ ಭಗವದ್ಗೀತೆ, ಅದನ್ನು ಹೇಳಿದವನು ಮನುಷ್ಯ ರೂಪದಲ್ಲಿರುವ ದೇವರೇ ಆದರೂ, ದೇವರ ಜ್ಞಾನ ಬೋಧಿಸುವವನು ಪ್ರವಕ್ತ ಎನ್ನುವ ಸೂತ್ರದ ಪ್ರಕಾರ ಕೃಷ್ಣನನ್ನು ಪ್ರವಕ್ತ ಎಂದು ಹೇಳಬಹುದು. ಕೃಷ್ಣನು ಭಗವಂತನಲ್ಲವೆ ಎಂದರೆ ಮಾನವ ಅವತಾರದಲ್ಲಿರುವ ದೇವರಾಗಿರುವುದರಿಂದ, ಯಾರಿಗೂ ತಿಳಿಯದ ದೇವರ ಜ್ಞಾನವನ್ನು ಹೇಳುವವನು ಭಗವಂತನು ಎನ್ನುವ ಸೂತ್ರದ ಪ್ರಕಾರ ಕೃಷ್ಣನು ಭಗವಂತನೇ ಆಗುತ್ತಾನೆ. ಕೃಷ್ಣನು ಭಗವಂತನು ಮತ್ತು ಪ್ರವಕ್ತ ಎಂದು ಹೇಳಬಹುದು. ಅಷ್ಟೇ ಅಲ್ಲದೆ ಕೃಷ್ಣನು ಪ್ರವಕ್ತನಾಗಿ ಕಾಣಿಸುವ ಭಗವಂತನೆಂದು ಹೇಳಬಹುದು. ಭಗವದ್ಗೀತೆಯನ್ನು ಬೋಧಿಸಿದ ಕೃಷ್ಣನನ್ನು ಪ್ರವಕ್ತ ಎಂದಿದ್ದೇವೆ. ನಂತರ ಆ ಗ್ರಂಥವನ್ನು (ಧರ್ಮಶಾಸ್ತ್ರವನ್ನು) ಯಾರು ಬೋಧಿಸಿದರೂ ಪ್ರವಕ್ತರೇ ಆಗುತ್ತಾರೆ. ಆ ವಿಧವಾಗಿ ಪ್ರವಕ್ತರು

ಎಷ್ಟು ಜನರಾದರೂ ಆಗಬಹುದು. ಭಗವಂತನು ಮಾತ್ರ ಒಬ್ಬನೇ ಇರುತ್ತಾನೆ. ಹಾಗೇ ಧರ್ಮಶಾಸ್ತ್ರವನ್ನು ಅನುಸರಿಸಿದ ಗ್ರಂಥಗಳು ಎಷ್ಟಾದರೂ ಇರಬಹುದು. ಆದರೆ ಧರ್ಮಶಾಸ್ತ್ರ ಮಾತ್ರ ಒಂದೇ ಇರುತ್ತದೆ.

ಧರ್ಮಶಾಸ್ತ್ರ ಒಂದೇ, ಅದನ್ನು ಬೋಧಿಸುವ ಭಗವಂತನು ಒಬ್ಬನೇ. ಆದರೇ ಧರ್ಮಶಾಸ್ತ್ರ ಬೇರೆ ರೂಪದಲ್ಲಿದ್ದರೂ, ಅದನ್ನು ಬೋಧಿಸುವ ಭಗವಂತನು ಬೇರೆ ರೂಪದಲ್ಲಿ ಪ್ರವಕ್ತನಾಗಿ ಇದ್ದರೂ ಭಗವಂತನು ಎಂದಿಗೂ ತನ್ನ ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಮಾತನಾಡುವುದಿಲ್ಲ. ಹಾಗೇ ಧರ್ಮಶಾಸ್ತ್ರವನ್ನು ಬೋಧಿಸುವ ಪ್ರವಕ್ತರಿಗೆ ವಿರುದ್ಧವಾಗಿ ಮಾತನಾಡುವುದಾಗಲಿ, ಖಂಡಿಸುವುದಾಗಲಿ ಇರುವುದಿಲ್ಲ. ಹಾಗೆ ವಿರುದ್ಧವಾಗಿ ಮಾತನಾಡಿದರೆ ತನ್ನ ಮುಖಕ್ಕೆ ತಾನೇ ಮಸಿ ಬಳಿದುಕೊಂಡಹಾಗೆ, ತನ್ನ ಕೈಗಳನ್ನು ತಾನೇ ಕತ್ತರಿಸಿಕೊಂಡಂತಾಗುತ್ತದೆ. ಯೇಸು ಇಜ್ರಾಯೇಲ್ ದೇಶದಲ್ಲಿ ಬೈಬಲ್ ಗ್ರಂಥವನ್ನು ಹೇಳಿದರೂ, ಆ ಬೈಬಲ್ ಧರ್ಮಶಾಸ್ತ್ರವಾದ ಭಗವದ್ಗೀತೆಯನ್ನು ಅನುಸರಿಸಿಯೇ ಇರುತ್ತದೆ. ಯೇಸು ಕಾಣಿಸುವ ಮನುಷ್ಯನಾಗಿ ಬೈಬಲ್‌ನ್ನು ಹೇಳಿದರೂ, ಆತನು ಗತಜನ್ಮದಲ್ಲಿ ಕೃಷ್ಣನೇ ಆಗಿರುವುದರಿಂದ ತನ್ನ ಶಾಸ್ತ್ರವನ್ನು ತಾನೇ ಖಂಡಿಸುವುದಾಗಲೀ, ತನ್ನ ಜ್ಞಾನವನ್ನೇ ಬೋಧಿಸುವ ಪ್ರವಕ್ತರ ಬೋಧನೆಗಳಿಗೆ ವಿರುದ್ಧವಾಗಿ ಮಾತನಾಡುವುದಾಗಲೀ ನಡೆಯುವುದಿಲ್ಲ. ಆದ್ದರಿಂದ ಮತ್ತಾಯ ಸುವಾರ್ತೆ ಐದನೇ ಅಧ್ಯಾಯದಲ್ಲಿ 17ನೇ ವಚನದಲ್ಲಿ **"ಧರ್ಮಶಾಸ್ತ್ರವನ್ನಾದರೂ, ಪ್ರವಕ್ತರ ವಚನಗಳನ್ನಾದರೂ ತೆಗೆದುಹಾಕಲು ಬಂದಿದ್ದೇನೆಂದು ತಿಳಿಯಬೇಡಿ. ನೆರವೇರಿಸುವುದಕ್ಕೇ ಆಗಲಿ ತೆಗೆದುಹಾಕಲು ನಾನು ಬರಲಿಲ್ಲ"** ಎಂದಿದ್ದಾನೆ. ಈ ವಾಕ್ಯದಲ್ಲಿರುವ ಧರ್ಮಶಾಸ್ತ್ರ ಎಂದರೆ ಏನೋ, ಯಾವ ಉದ್ದೇಶದಿಂದ ಆ ಮಾತು ಹೇಳಿದ್ದಾನೋ ಅರ್ಥವಾಗಿರುತ್ತದೆ. ಹಾಗೇ ಪ್ರವಕ್ತರ ಮಾತುಗಳೆಂದು ಯಾವುದನ್ನು ಕುರಿತು ಅಂದಿದ್ದಾನೋ ಸಹ ತಿಳಿದಿರುತ್ತದೆ. ತೆಗೆದುಹಾಕಲು ಬಂದಿದ್ದೇನೆಂದು ತಿಳಿಯಬೇಡ ಎಂದಿದ್ದಾನೆ. ಆ ಮಾತುಗಳು ಸಹ ತನ್ನ ಜ್ಞಾನವನ್ನು ತಾನೇ ಖಂಡಿಸುವವವನಲ್ಲ, ತೆಗೆದುಹಾಕುವವನಲ್ಲವೆಂದು

ಸಹ ಅರ್ಥವಾಗಿದೆ. ಇನ್ನು ವಾಕ್ಯದ ಕೊನೆಯಲ್ಲಿ "ನೆರವೇರಿಸುವುದಕ್ಕೇ ಆಗಲೀ ತೆಗೆದುಹಾಕುವುದಕ್ಕೆ ನಾನು ಬರಲಿಲ್ಲ" ಎಂದಿದ್ದಾನೆ. ಆ ಮಾತನ್ನು ಕುರಿತು ವಿವರಿಸಿಕೊಂಡರೆ ಧರ್ಮಶಾಸ್ತ್ರವನ್ನು ಬ್ರಹ್ಮವಿದ್ಯಾಶಾಸ್ತ್ರ ಎಂದು ನಾವು ಬಹಳಸಾರಿ ಹೇಳಿಕೊಂಡಿದ್ದೇವೆ. ಬೈಬಲ್, ಖುರಾನ್ ಎರಡೂ ಸಹ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುವವೇ ಎಂದು ಸಹ ಹೇಳಿದ್ದೇವೆ. ದ್ವಾಪರಯುಗದಲ್ಲೇ ಗ್ರಂಥರೂಪ ವಾಗಿ ಬದಲಾದ ಭಗವದ್ಗೀತೆಯನ್ನು ಮೊದಲ ದೈವ ಗ್ರಂಥ ಎಂದು ಹೇಳಿಕೊಂಡಿದ್ದೇವೆ. ಭಗವದ್ಗೀತೆಯಲ್ಲಿ ಹೇಳಿದ ಧರ್ಮಗಳು ಎಲ್ಲಿ ಇಲ್ಲದಂತೆ ಹೋಗುತ್ತವೊ ಅಲ್ಲಿ ದೇವರು ಭಗವಂತನಾಗಿ ಅವತರಿಸುತ್ತಾನೆಂದು ಸಹ ಹೇಳಿದ್ದೇವೆ. ಹಾಗೆ ಅವತರಿಸಿದವನು ತನ್ನ ಧರ್ಮಗಳನ್ನು ಆಚರಿಸಿ ತೋರಿಸಿ, ಪ್ರಜೆಗಳನ್ನು ಸಹ ಅವುಗಳ ಪ್ರಕಾರ ನಡೆಯುವಹಾಗೆ ಮಾಡುವನು. ಆ ವಿಧವಾಗಿ ಧರ್ಮಶಾಸ್ತ್ರದಲ್ಲಿನ ಧರ್ಮಗಳನ್ನು ಆಚರಿಸಿ ತೋರಿಸುವುದಕ್ಕೆ ಬಂದಿರುವ ಯೇಸು ಅವುಗಳನ್ನು ಸಮರ್ಥಿಸುತ್ತಾನಾಗಲೀ. ಖಂಡಿಸುವವನಲ್ಲ ಅಲ್ಲವೆ! ಆದ್ದರಿಂದಲೇ ನಾನು ನೆರವೇರಿಸುವುದಕ್ಕೇ ಆಗಲಿ ತೆಗೆದುಹಾಕುವುದಕ್ಕೆ ಬರಲಿಲ್ಲ ಎಂದಿದ್ದಾನೆ. ಒಂದು 17ನೇ ವಾಕ್ಯದಲ್ಲಿ ನಿಗೂಢವಾಗಿ ಅಡಕವಾಗಿರುವ ಆದಿನದ ಯೇಸು ಭಾವವನ್ನು ವಿವರವಾಗಿ ಹೇಳಿಕೊಂಡರೆ ಈ ವಾಕ್ಯ ಎಷ್ಟೋ ಹತ್ತಿರವಾಗಿ ಅರ್ಥವಾಗುತ್ತಿದೆ.

ಧರ್ಮಶಾಸ್ತ್ರವನ್ನು ನೆರವೇರಿಸುವುದಕ್ಕೆ ಬಂದಿದ್ದೇನೆ ಎಂದಾಗ ಧರ್ಮಶಾಸ್ತ್ರ ಮೊದಲೇ ಭೂಮಿಮೇಲೆ ಇದೆಯೆನ್ನುವ ಭಾವ ಎಲ್ಲರಿಗು ತಿಳಿದುಹೋದರೂ, ವಾಸ್ತವವಾಗಿ ಅದೇನೋ ಯಾರಿಗೂ ತಿಳಿಯದಂತೆ ಹೋಗಿದೆ. ದೇವರು ಮೊದಲೇ ಭಗವಂತನಾಗಿ ಬಂದು ಹೇಳಿರುವುದನ್ನು ಬಿಟ್ಟು ಮನುಷ್ಯರು ಬರೆದುಕೊಂಡ ಯಾವುದೋ ಒಂದು ಗ್ರಂಥವನ್ನು ಧರ್ಮಶಾಸ್ತ್ರ ಎಂದುಕೊಂಡಿದ್ದಾರೆ. ಈ ಪ್ರಪಂಚದಲ್ಲಿ ಧರ್ಮ ಶಾಸ್ತ್ರವನ್ನು ಮೀರಿದ ಗ್ರಂಥ ಮತ್ತೊಂದು ಇರುವುದಿಲ್ಲ. ಬ್ರಹ್ಮವಿದ್ಯೆಯನ್ನು (ದೇವರವಿದ್ಯೆ ಯನ್ನು) ಸೂತ್ರಬದ್ಧವಾಗಿ ಹೇಳಿದ ಅದನ್ನು ಬ್ರಹ್ಮವಿದ್ಯಾಶಾಸ್ತ್ರ ಅಥವಾ ಧರ್ಮ

ಶಾಸ್ತ್ರ ಎಂದು ಅನ್ನುತ್ತಿದ್ದೇವೆ. ಯೇಸು ಬರುವುದಕ್ಕೆ ಮುನ್ನವೇ ಸೃಷ್ಟ್ಯಾದಿಯಲ್ಲೇ ಹೇಳಲಾಗಿ, ಪುನಃ ಎರಡನೆಯ ಬಾರಿ ಭಗವಂತನಿಂದ ಹೇಳಲಾಗಿ, ಮೊದಲ ಗ್ರಂಥರೂಪವಾದ ಶಾಸ್ತ್ರ ಯಾವುದಾದರೇ ಇದೆಯೋ ಅದನ್ನೇ ನೆರವೇರಿಸುವುದಕ್ಕೆ ಯೇಸು ಬಂದಿದ್ದಾನೆ. ಆತನಿಗಿಂತ ಮೊದಲು ಮೂರುಸಾವಿರ ವರ್ಷಗಳ ಪೂರ್ವವೆ ಬಂದಿರುವ ಧರ್ಮಶಾಸ್ತ್ರವೇ ಭಗವದ್ಗೀತೆಯೆಂದು ಕನಿಷ್ಠ ಒಬ್ಬರಾದರೂ ತಿಳಿಯಲಾಗದೆ ಹೋಗಿದ್ದಾರೆ. ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನು ಬೋಧಿಸುವುದಕ್ಕೆ ಬಂದಿರುವ ಯೇಸು ಅದನ್ನು ಪೂರ್ತಿ ಆಚರಿಸಿ ತೋರಿಸುತ್ತೇನೆಂದು, ಅದರಲ್ಲಿನ ಯಾವ ವಿಷಯವನ್ನಾದರೂ ಯಾರೂ ಖಂಡಿಸಲಾರರೆಂದು ಬಲವಾಗಿ ಹೇಳುತ್ತಾ, ಮತ್ತಾಯ ಸುವಾರ್ತೆ 5ನೇ ಅಧ್ಯಾಯ, 18ನೇ ವಾಕ್ಯದಲ್ಲಿ **"ಆಕಾಶ ಭೂಮಿಯು ಗತಿಸಿಹೋದರಾಗಲೀ, ಧರ್ಮ ಶಾಸ್ತ್ರವೆಲ್ಲವೂ ನೆರವೇರುವವರೆಗು ಅದರಿಂದ ಒಂದು ಕಾಮಾ ವಾದರೂ, ಒಂದು ಸೊನ್ನೆಯಾದರೂ ತಪ್ಪಿಹೋಗುವುದಿಲ್ಲವೆಂದು ನಿಶ್ಚಯವಾಗಿ ನಿಮ್ಮೊಂದಿಗೆ ಹೇಳುತ್ತಿದ್ದೇನೆ"** ಎಂದು ಹೇಳಿದ್ದಾನೆ. ಈ ವಾಕ್ಯದಲ್ಲಿ ಗ್ರಂಥದಲ್ಲಿನ ಕಾಮಾವಾಗಲಿ, ಸೊನ್ನೆಯಾಗಲೀ ಅಂದಾಗ ಬಾಹ್ಯವಾಗಿ ಬರವಣಿಗೆಯಲ್ಲಿರುವ ಕಾಮಾವನ್ನು ಸೊನ್ನೆಯನ್ನು ಹೇಳಿದ್ದಾನೆಂದು ಅಂದು ಕೊಳ್ಳಬಾರದು. ಕಾಮಾ ಸೊನ್ನೆ ಎನ್ನುವುದರಲ್ಲಿನ ಉದ್ದೇಶವೇನೆಂದರೆ! ಧರ್ಮಶಾಸ್ತ್ರದಲ್ಲಿನ ಯಾವ ಚಿಕ್ಕ ಸೂತ್ರವೂ ಸಹ ತಪ್ಪಿಹೋಗುವುದಿಲ್ಲ ಎಲ್ಲಾ ನಡೆದೇ ನಡೆಯುತ್ತವೆಂದು ಹೇಳುವುದಕ್ಕೆ ಹೋಲಿಕೆಯಾಗಿ ಕಾಮಾ, ಸೊನ್ನೆ ಎಂದಿದ್ದಾನೆಂದು ಗ್ರಹಿಸಬೇಕು. ಬರವಣಿಗೆಯಲ್ಲಿ ಕಾಮಾಗಳು, ಸೊನ್ನೆಗಳಿದ್ದಹಾಗೆ ಧರ್ಮಗಳಲ್ಲಿ ಪ್ರತಿಯೊಂದು ಶಾಸನ ಬದ್ಧವಾಗಿ ನಿರ್ದೇಶಿಸಲಾಗಿದೆಯೆಂದು ತಿಳಿಸುವುದಕ್ಕೆ ಹಾಗೆ ಹೇಳಲಾಗಿದೆ. ಶಾಸನ ರೂಪವಾದದ್ದು ಶಾಸ್ತ್ರ. ಶಾಸ್ತ್ರ ಜಾರಿಗೆ ನಡೆದು ನೆರವೇರುವುದು. ದೇವರ ಶಾಸನಗಳೊಂದಿಗೆ ಇರುವುದೇ ಧರ್ಮಶಾಸ್ತ್ರ. ಅದರಲ್ಲಿನ ಪ್ರತಿ ಶಾಸನ ಚಿಕ್ಕದಾಗಲೀ ದೊಡ್ಡದಾಗಲೀ ನೆರವೇರುವುದೆಂದು ನಿಶ್ಚಯವಾಗಿ ಭಗವಂತನಾದ

ಯೇಸು ಹೇಳಿದ್ದಾನೆ. ಈ ವಾಕ್ಯದಲ್ಲಿ ಮೊದಲೇ ಆಕಾಶ ಭೂಮಿಯು ಗತಿಸಿಹೋದರಾಗಲಿ ಎಂದು ಅಂದಿದ್ದಾರೆ. ಆ ಮಾತನ್ನು ಏಕೆ ಉಪಯೋಗಿಸಿ ಹೇಳಿದ್ದಾನೋ ವಿವರಿಸಿಕೊಂಡು ನೋಡೋಣ.

ವಿಶ್ವವಿದೆಯೆಂದರೆ ಮೇಲೆ ಆಕಾಶ, ಕೆಳಗೆ ಭೂಮಿ, ಆ ಎರಡರ ಮಧ್ಯದಲ್ಲಿ ಗಾಳಿ, ಅಗ್ನಿ, ನೀರು ಮೂರು ಇವೆ. ಮೇಲೆ ಆಕಾಶವನ್ನು ಆಧಾರ ಮಾಡಿಕೊಂಡು ಗಾಳಿ ಇರುವಾಗ, ಕೆಳಗೆ ಭೂಮಿಯನ್ನು ಆಧಾರ ಮಾಡಿಕೊಂಡು ನೀರು, ಅಗ್ನಿ ಎರಡೂ ಇವೆ. ಮೇಲಿರುವ ಆಕಾಶ ಗತಿಸಿಹೋದರೆ ಅದನ್ನು ಆಧಾರ ಮಾಡಿಕೊಂಡ ಗಾಳಿ ಸಹ ಹೋಗುತ್ತದೆ. ಹಾಗೇ ಕೆಳಗೆ ಭೂಮಿ ಹೋದರೆ ಅದನ್ನು ಆಧಾರಮಾಡಿಕೊಂಡ ನೀರು, ಅಗ್ನಿ ಎರಡೂ ಹೋಗುವವು. ಒಟ್ಟು ಪಂಚಭೂತಗಳೆನ್ನುವ ಐದೂ ಹೋಗುತ್ತವೆ. ಅದರಿಂದ ಈ ವಿಶ್ವವೇ ಇಲ್ಲದಂತೆ ಹೋಗುವುದೆಂದು ಅರ್ಥ. ಸೃಷ್ಟಿ ಗತಿಸಿದರೂ ದೇವರಾಗಲೀ, ದೇವರ ಜ್ಞಾನ (ಧರ್ಮಗಳು) ಆಗಲೀ ನಶಿಸುವುದಿಲ್ಲ ಎಂದು ನಾವು ಬಹಳಸಾರಿ ಹೇಳಿದ್ದೇವೆ. ಇದರಿಂದ ಸೃಷ್ಟಿಗಿಂತ ದೊಡ್ಡದು ದೇವರ ಜ್ಞಾನವೆಂದು ತಿಳಿಯುತ್ತಿದೆ. ಒಟ್ಟಾರೆ ಸೃಷ್ಟಿಗಿಂತ ದೊಡ್ಡದು ಧರ್ಮಶಾಸ್ತ್ರ ಎಂದು ಎಲ್ಲರಿಗೂ ತಿಳಿಯುವಹಾಗೆ 18ನೇ ವಾಕ್ಯದಲ್ಲಿ ಆಕಾಶವೂ, ಭೂಮಿಯೂ ಗತಿಸಿದರೂ ಎಂದು ಒತ್ತಿ ಹೇಳಲಾಗಿದೆ. ಅಷ್ಟಾಗಿ ಯೇಸು ಧರ್ಮಶಾಸ್ತ್ರವನ್ನು ಕುರಿತು ಹೇಳಿದರೆ ಅದು ಎಷ್ಟು ದೊಡ್ಡ ಶಾಸ್ತ್ರವಾಗಿರುತ್ತದೊ ಯಾರಿಗಾದರೂ ಅರ್ಥವಾಗಬಲ್ಲದು. ಆದರೇ ಯೇಸು ಬರುವುದಕ್ಕೆ ಮೊದಲೇ ಭೂಮಿಮೇಲಿರುವ ಧರ್ಮಶಾಸ್ತ್ರ ಯಾವುದು ಎಂದು ಎಲ್ಲರೂ ಆಲೋಚಿಸಲಾಗದೇ ಹೋಗಿದ್ದಾರೆ, ಅದನ್ನು ತಿಳಿಯಲಾಗದೆ ಹೋಗಿದ್ದಾರೆ. ಕೆಲವರು ಮೋಷೇ ಪ್ರವಕ್ತ, ಯೆಶಾಯ ಪ್ರವಕ್ತ, ಯೆರಮೀಯಾ ಪ್ರವಕ್ತ ಹೇಳಿದ ವಾಕ್ಯಗಳನ್ನೇ ಧರ್ಮಶಾಸ್ತ್ರವೆಂದುಕೊಂಡಿದ್ದಾರೆ. ಬೈಬಲ್‌ನಲ್ಲಿ ಅಲ್ಲಲ್ಲಿ ಕೆಲವು ಸಂಘಟನೆಗಳು ನಡೆದಾಗ "ಇದು ಯೆರಮೀಯಾ ಪ್ರವಕ್ತ ಹೇಳಿದಂತೆ ನೆರವೇರಿತು" ಎಂದು ಬರೆಯುವುದೂ, ಹಾಗೇ ಕೆಲವು ಕಡೆ "ಯೆಶಾಯ ಪ್ರವಕ್ತ ಮೋಷೇ ಪ್ರವಕ್ತ ಮೊದಲೇ ಬರೆದಿರುವ ಲೇಖನ ನೆರವೇರುವುದು" ಎಂದು ಬರೆದಿರುವುದರಿಂದ ಬಹಳ ಜನ ಕಾಮಾ ಹೋಗದಂತೆ

ನೆರವೇರುವು ದೆಂದರೆ ಅದೇ ಎಂದು ಅಂದುಕೊಂಡಿದ್ದಾರೆ. ಯೇಸನ್ನು ಕುರಿತು ಮೊದಲೇ ಭವಿಷ್ಯತ್ತನ್ನು ಹೇಳಿದಹಾಗೆ ಯೆಶಾಯ ಬರೆದಿಟ್ಟಿರುವ ವಾಕ್ಯಗಳು ಎಲ್ಲಾ ನೆರವೇರುತ್ತಾ ಬಂದಿವೆ. ಹಾಗೆ ಮೊದಲೇ ಬರೆದ ಲೇಖನಗಳು ಒಂದರನಂತರ ಮತ್ತೊಂದು ನೆರವೇರುವುದನ್ನು ನೋಡಿದ ಅಲ್ಲಿನ ಮನುಷ್ಯರು ಆ ಲೇಖನಗಳ ಗ್ರಂಥವನ್ನೇ ಧರ್ಮಶಾಸ್ತ್ರವೆಂದುಕೊಂಡಿದ್ದಾರೆ. ಧರ್ಮಶಾಸ್ತ್ರ ತಪ್ಪದೇ ನೆರವೇರುವುದೆಂದು ಯೇಸು ಹೇಳಿದಹಾಗೆ ಯೆಶಾಯ ಪ್ರವಕ್ತ ಮೊದಲೇ ಯೇಸು ಜನನವನ್ನು ಕುರಿತು, ಆತನ ಜೀವನವನ್ನು ಕುರಿತು ಬರೆದ ವಾಕ್ಯಗಳು ನೆರವೇರುವುದನ್ನು ನೋಡಿದ ಅವರೆಲ್ಲರೂ ಯೆಶಾಯ ಬರೆದಿರುವುದೇ ಧರ್ಮಶಾಸ್ತ್ರವೆಂದು ಕೊಂಡಿದ್ದಾರೆ. ಅಲ್ಲೇ ಬಹಳ ತಪ್ಪಾಗಿ ಅರ್ಥೈಸಿಕೊಂಡು ಧರ್ಮಶಾಸ್ತ್ರವೆನ್ನುವುದು ಮತ್ತೊಂದಿದೆಯೆನ್ನುವ ಆಲೋಚನೆ ಮಾಡಲಾಗದೇ ಹೋಗಿದ್ದಾರೆ. ಧರ್ಮಶಾಸ್ತ್ರ ಮನುಷ್ಯರಾದ ಪ್ರವಕ್ತರು ಬರೆದಿರುವುದು ಅಲ್ಲವೆಂದು, ಪ್ರವಕ್ತನಾಗಿರುವ ಭಗವಂತನು (ದೇವರು) ಬರೆದ ಗ್ರಂಥವೆಂದು ತಿಳಿಯಲಾಗದೇ ಹೋಗಿದ್ದಾರೆ. ಆದ್ದರಿಂದ ಕ್ರೈಸ್ತವರೆಲ್ಲರೂ ಮುಖ್ಯವಾದ ಘಟ್ಟದಲ್ಲಿ ತಪ್ಪು ಅರ್ಥವನ್ನು ಮಾಡಿಕೊಂಡು ಅಸಲಾದ ಧರ್ಮಶಾಸ್ತ್ರವನ್ನು ತಿಳಿಯಲಾರದೇ ಹೋಗಿದ್ದಾರೆ.

ಉದಾಹರಣೆಗೆ ನಿಮಗೆ ಒಂದು ವಿಷಯವನ್ನು ಹೇಳುತ್ತೇನೆ ನೋಡಿರಿ. ಯೆಶಾಯ ಪ್ರವಕ್ತ ಯೇಸು ಜೀವನವನ್ನು ತನ್ನಲ್ಲಿರುವ ಅದ್ಭುತ ಶಕ್ತಿಯಿಂದ ಮೊದಲೇ ಬರೆದಿಟ್ಟಿದ್ದಾನೆ. ಹಾಗೆ ಬರೆದ ಪ್ರತಿ ವಾಕ್ಯ ಒಂದೂ ಸಹ ಕಾಮಾ ಹೋಗದಂತೆ ಯೇಸು ಜೀವನದಲ್ಲಿ ನೆರವೇರಿದೆ. ಆ ವಿಷಯ ಕ್ರೈಸ್ತವರೆಲ್ಲರಿಗೂ ತಿಳಿದಿದೆ. ಮುಂದೆ ನಡೆಯುವ ವಿಷಯಗಳನ್ನು ಪ್ರವಕ್ತ ಹೇಳಿದರೂ ಅಥವಾ ಸಾಧಾರಣ ಮನುಷ್ಯ ಹೇಳಿದರೂ ಅವುಗಳನ್ನು ಜ್ಯೋತಿಷ್ಯ ಶಾಸ್ತ್ರವನ್ನು ಅನುಸರಿಸಿ ಹೇಳಿರುವವೆಂದು ಅನ್ನಬೇಕಾಗಲೀ, ಧರ್ಮಶಾಸ್ತ್ರದ ಪ್ರಕಾರ ಹೇಳಿರುವವೆಂದು ಅಂದುಕೊಳ್ಳಬಾರದು. ಹೇಳಿದವನು ಜ್ಯೋತಿಷ್ಯನಾದರೂ ಆಗಿರಬಹುದು ಅಥವಾ ಪ್ರವಕ್ತನಾದರೂ ಆಗಿರಬಹುದು, ಹೇಳಿದ ವಿಷಯವನ್ನನುಸರಿಸಿ ಅದು ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿರುವುದಾ ಅಥವಾ ಧರ್ಮಶಾಸ್ತ್ರಕ್ಕೆ ಸಂಬಂಧಿಸಿರುವುದಾ

ಎಂದು ಆಲೋಚಿಸಬೇಕು. ನಡೆಯುವ ಭವಿಷ್ಯತ್ತನ್ನು ಕುರಿತು ಹೇಳಿದ್ದರೇ ಅದು ಎಂದಿಗೂ ಧರ್ಮಶಾಸ್ತ್ರವಲ್ಲ. ಅದನ್ನು ಜ್ಯೋತಿಷ್ಯಶಾಸ್ತ್ರವೆಂದೇ ಹೇಳಬೇಕು. ಭಾರತದೇಶದಲ್ಲಿನ ಆಂಧ್ರಪ್ರದೇಶ (ಈಗ ಸೀಮಾಂಧ್ರ) ದಲ್ಲಿ ಕಡಪ ಜಿಲ್ಲೆಯಲ್ಲಿನ ಕಂದಿಮಲ್ಲಯ್ಯ ಹಳ್ಳಿಯಲ್ಲಿ ವಿಶ್ವಬ್ರಾಹ್ಮಣ ಕುಲದಲ್ಲಿ ನಾಲ್ಕು ನೂರು ವರ್ಷಗಳ ಕೆಳಗೆ ಪೋತುಲೂರಿ ವೀರಬ್ರಹ್ಮ ಎಂಬ ವ್ಯಕ್ತಿ ಜನ್ಮಿಸಿ ಆಧ್ಯಾತ್ಮಿಕ ತಜ್ಞನಾಗಿ ಸ್ವಲ್ಪ ಹೆಸರು ಸಂಪಾದಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ಕಾಲಜ್ಞಾನವೆನ್ನುವ ಹೆಸರಿಂದ ಮುಂದೆ ನಡೆಯಬೇಕಾಗಿರುವ ಅನೇಕ ವಿಷಯಗಳನ್ನು ಬರೆದು ದಿವ್ಯಜ್ಞಾನಿ ಎಂದು ಎಲ್ಲರಿಂದ ಕರೆಸಿಕೊಂಡಿದ್ದಾನೆ. ಆತನು ಹೇಳಿದ ಜ್ಞಾನ ವಿಷಯಗಳು ಪ್ರಜೆಗಳಿಗೆ ಅಷ್ಟಾಗಿ ತಿಳಿಯದೆ ಹೋದರೂ, ಆತನು ಹೇಳಿದ ಭವಿಷ್ಯತ್ತು ವಿಷಯಗಳು ಜನರನ್ನು ಚೆನ್ನಾಗಿ ಆಕರ್ಷಿಸಿವೆ. ಆತನು ತನ್ನ ಕಾಲಜ್ಞಾನದಲ್ಲಿ ಬರೆದ ಅನೇಕ ವಿಷಯಗಳು ಆಗಾಗ ನೆರವೇರುತ್ತಾ ಬಂದಿವೆ. ಇನ್ನೂ ನೆರವೇರಬೇಕಾಗಿರುವ ವಿಷಯಗಳು ಎಷ್ಟೋ ಇವೆ. ಉಳಿದಿರುವವು ಸಹ ನೆರವೇರುವವೆಂದು, ಆತನ ಮಾತು ಸಹ ಕಾಮಾ ಹೋಗದೆ ಹೇಳಿರುವವು ಹೇಳಿದಂತೆ ನೆರವೇರುತ್ತಿವೆಯೆಂದು ಪ್ರಜೆಗಳು ಅಂದುಕೊಳ್ಳುತ್ತಿದ್ದಾರೆ.

ನಮಗೆ ತಿಳಿದ ವಿಚಿತ್ರವೇನೆಂದರೆ! ಯಾವಾಗಲೋ ಮುನ್ನೂರ ಐವತ್ತು ವರ್ಷಗಳ ಕೆಳಗೇ ಆತನು ನನ್ನ ಹೆಸರೊಂದಿಗೆ ಸಹ, ನಮ್ಮ ಆಶ್ರಮದ ಹೆಸರೊಂದಿಗೆ ಸಹ ಕೆಲವು ವಾಕ್ಯಗಳು ಬರೆದಿಟ್ಟಿದ್ದಾನೆ. ಈ ಮಧ್ಯಕಾಲದಲ್ಲಿ ಆ ವಿಷಯ ನಮಗೆ ತಿಳಿದಿದೆ. ಆತನು ಬರೆದವುಗಳಲ್ಲಿ ಉದಾಹರಣೆಗೆ ಎರಡು ವಾಕ್ಯಗಳನ್ನು ಹೇಳುತ್ತಿದ್ದೇನೆ ನೋಡಿರಿ. **1) ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದು. 2) ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಹೊಂದಿದ್ದಾರೆ.** ಈ ಎರಡೇ ಅಲ್ಲದೇ ಇನ್ನೂ ಅನೇಕ ಇವೆ. ಈ ಎರಡರಲ್ಲಿ ಮುಖ್ಯವಾಗಿ ನಮ್ಮ ಹೆಸರು, ನಮ್ಮ ಆಶ್ರಮದ ಹೆಸರು ಇರುವುದು ಗಮನಿಸಬೇಕಾದ ವಿಷಯ. ಶ್ರೀ ವೀರಬ್ರಹ್ಮಯ್ಯನವರು ಹೇಳಿದಂತೇ ನಮಗೆ ಸಂಬಂಧಿಸಿದ ಕೆಲವು ವಿಷಯಗಳು ಈಗಾಗಲೆ ನೆರವೇರಿವೆ. ಅಷ್ಟು ಮಾತ್ರಕ್ಕೆ ನಾವು

ಬ್ರಹ್ಮಯ್ಯನವರು ಹೇಳಿದ ಕಾಲಜ್ಞಾನವನ್ನು ಧರ್ಮಶಾಸ್ತ್ರ ಎನ್ನಲಾರೆವು! ಏಕೆಂದರೆ ಈ ವಿಷಯಗಳೆಲ್ಲವೂ ನಡೆಯಬೇಕಾಗಿರುವ ಕಾಲಕ್ಕೆ ಸಂಬಂಧಿಸಿರುವವು. ಆದ್ದರಿಂದ ಎಲ್ಲವೂ ಜ್ಯೋತಿಷ್ಯಶಾಸ್ತ್ರ ವಿಷಯಗಳೆಂದೇ ಹೇಳಬಹುದು. ಅಷ್ಟೇ ಅಲ್ಲದೆ ನಡೆಯಬೇಕಾಗಿರುವ ವಿಷಯಗಳನ್ನು ಮೊದಲೇ ತಿಳಿದು ಬರೆದ ದಿವ್ಯಜ್ಞಾನಿ ಆದ ಬ್ರಹ್ಮಯ್ಯನವರು ಸಹ ತಾನು ಬರೆದ ಗ್ರಂಥವನ್ನು ಕಾಲಜ್ಞಾನ ವೆಂದು ಹೇಳಿದ್ದಾನೆ ಹೊರತು ಬ್ರಹ್ಮಜ್ಞಾನವೆಂದು ಹೇಳಲಿಲ್ಲ. ಒಂದು ವೇಳೆ ತಿಳಿಯದವರು ಹೇಗೆ ಅಂದುಕೊಂಡರೂ ಅವರ ಮಾತನ್ನು ಲೆಕ್ಕಿಸದೆ ಆತನು ಹೇಳಿದ ಕಾಲಜ್ಞಾನದಲ್ಲಿನ ಕೆಲವು ವಾಕ್ಯಗಳು ನಮ್ಮ ಜೀವನದಲ್ಲಿ ನೆರವೇರಿದರೂ ನಾವು ಅದು ಧರ್ಮಶಾಸ್ತ್ರವಲ್ಲ ಜ್ಯೋತಿಷ್ಯಶಾಸ್ತ್ರ ಎಂದು ಅನ್ನುತ್ತಿದ್ದೇವೆ. ಹಾಗೇ ಯೆಶಾಯ ಬರೆದ ಗ್ರಂಥದಲ್ಲಿನ ವಾಕ್ಯಗಳು (ಲೇಖನಗಳು) ಯೇಸು ಜೀವನದಲ್ಲಿ ನೆರವೇರಿದರೂ ಆ ಲೇಖನಗಳನ್ನು ವೀರಬ್ರಹ್ಮಯ್ಯರವರು ಹೇಳಿದವುಗಳಾಗಿ ಲೆಕ್ಕಿಸಬಹುದಾಗಲೀ, ಧರ್ಮಶಾಸ್ತ್ರವೊಂದರ ವಾಕ್ಯಗಳಾಗಿ ಲೆಕ್ಕಿಸಬಾರದು. ಯಾವುದು ಧರ್ಮಶಾಸ್ತ್ರವೊ, ಅದರ ವಿಧಾನ, ಅದರಲ್ಲಿನ ಧರ್ಮಗಳು ಹೇಗಿರುತ್ತವೋ ತಿಳಿಯದವರು ತಪ್ಪಾಗಿ ತಿಳಿದು ಯೆಶಾಯ ಬರೆದ ಗ್ರಂಥವನ್ನು ಧರ್ಮಶಾಸ್ತ್ರವಾಗಿ ಲೆಕ್ಕಿಸಿಕೊಂಡಿದ್ದಾರೆ. ಅದರಲ್ಲಿನ ಯಾವುದಾದರೂ ನೆರವೇರದೆ ಇರುವುದಿಲ್ಲವೆಂದು ಹೇಳುತ್ತಿದ್ದಾರೆ.

ವಾಸ್ತವಕ್ಕೆ ಧರ್ಮಶಾಸ್ತ್ರ ಯೇಸುಗಿಂತ ಮೊದಲು ಮೂರುಸಾವಿರ ಸಂವತ್ಸರಗಳ ಪೂರ್ವವೇ ಭಾರತ ದೇಶದಲ್ಲಿ ಕೃಷ್ಣನಿಂದ ಹೇಳಲಾಗಿ ವ್ಯಾಸನಿಂದ ಗ್ರಂಥವಾಗಿ ಬರೆಯಲಾಗಿದೆ. ಅದರಲ್ಲಿನ ಜ್ಞಾನ ಸೃಷ್ಟ್ಯಾದಿಯಲ್ಲಿ ಬಂದಿರುವು ದಾದರೂ ದ್ವಾಪರಯುಗದ ವರೆಗು ಗ್ರಂಥವಾಗಿ ಬರೆಯಲಾಗಲಿಲ್ಲ. ಕೃತಯುಗದ ಆರಂಭದಲ್ಲೇ ಹೇಳಿದ ಜ್ಞಾನ ದ್ವಾಪರಯುಗದ ಕೊನೆಯಲ್ಲಿ ಗ್ರಂಥರೂಪವಾಗಿದೆ. ಆ ವಿಧವಾಗಿ ದೇವರ ಧರ್ಮಗಳಿಂದ ಹೊಂದಿಸಲಾಗಿರುವ ಜ್ಞಾನವನ್ನು ಭಗವದ್ಗೀತೆಯೆಂದು ಹೇಳುತ್ತಿದ್ದೇವೆ. ಭಗವದ್ಗೀತೆ ಪ್ರಥಮ ದೈವ ಗ್ರಂಥವಾಗುವು ದಲ್ಲದೆ, ವಿಶ್ವವೆಲ್ಲದಕ್ಕೂ ಧರ್ಮಶಾಸ್ತ್ರವಾಗಿ ನಿಂತಿದೆ. ಇದು ಎಲ್ಲರಿಗೂ ಸ್ವಲ್ಪ

ಆಶ್ಚರ್ಯವನ್ನು ಉಂಟುಮಾಡುವ ವಿಷಯವಾದರೂ ಈ ಮಾತು ಸತ್ಯ. ಆ ದಿನ ಯೇಸು ಧರ್ಮಶಾಸ್ತ್ರವನ್ನು ನೆರವೇರಿಸುವುದಕ್ಕೆ ಬಂದಿದ್ದೇನೆಂದು ಹೇಳಿ, ಹೇಳಿದ ವಿಧವಾಗಿಯೇ ಧರ್ಮಶಾಸ್ತ್ರದಲ್ಲಿನ ಸಾರಾಂಶವನ್ನೇ ಹೇಳುತ್ತಾ, ಅದರಲ್ಲಿನ ಒಂದೊಂದು ವಿಷಯವನ್ನು ಜನರಿಗೆ ಬೋಧಿಸಿದ್ದಾನೆ. ಆದರೂ ಆತನು ಏನು ಹೇಳಿದ್ದಾನೆಂದು ನೋಡಿಕೊಳ್ಳುವ ಸ್ಥಿತಿಯಲ್ಲಿ ಮನುಷ್ಯರು ಇಲ್ಲ. ಆ ದಿನದಿಂದ ಇಂದಿನವರೆಗು ಹಾಗೇ ನಡೆಯುತ್ತಲೇ ಇದೆ.

ಇಜ್ರಾಯೇಲ್ ದೇಶದಲ್ಲಿ ಮೊದಲು ದೇವರ ದೂತನಾದ ಯೇಸು ಬಂದಿದ್ದಾನೆ. ಇದಕ್ಕೂ ಮೊದಲೇ ಹೇಳಿದ್ದೇನೆ. ಆತನು ಹೆಸರಿಗೆ ದೂತನೇ ಆಗಲೀ ಸ್ವತಃ ದೇವರೇ ಎಂದು ಹೇಳಿದ್ದೇನೆ. ಹಾಗೇ ಆತನು ಹೆಸರಿಗೆ ಪ್ರವಕ್ತನೇ ಆಗಲಿ, ಸಾಕ್ಷಾತ್ತು ಪ್ರವಕ್ತರಿಗಿಂತ ದೊಡ್ಡವನಾದ ಭಗವಂತನೆಂದು ಹೇಳಿದ್ದೇನೆ. ನಾನು ಹೇಳುವುದೇ ಅಲ್ಲದೆ ಒಂದು ಸಂದರ್ಭದಲ್ಲಿ ತಾನು ಪ್ರವಕ್ತರಿಗಿಂತ ದೊಡ್ಡವನೆಂದು ಸಹ ಹೇಳಿದ್ದಾನೆ. ಮತ್ತಾಯ ಸುವಾರ್ತೆ 11ನೇ ಅಧ್ಯಾಯದಲ್ಲಿ, 9ನೇ ವಚನದಲ್ಲಿ **"ಪ್ರವಕ್ತನಿಗಿಂತ ದೊಡ್ಡವನೆಂದು ನಿಮ್ಮೊಂದಿಗೆ ಹೇಳುತ್ತಿದ್ದೇನೆ"** ಎಂದು ಎಂದಿದ್ದಾನೆ. ಯೇಸು ಬಂದುಹೋದ ನಂತರ ಆರು ನೂರು (600) ವರ್ಷಗಳಿಗೆ ಜಿಬ್ರಯೇಲ್ ಅದೇ ದೇಶಕ್ಕೇ ಬಂದು ಮಹಮ್ಮದ್ ಪ್ರವಕ್ತನಿಗೆ 23 ವರ್ಷಗಳಿಂದ ದೇವರ ಜ್ಞಾನವನ್ನು ಹೇಳಿದ್ದಾನೆ. ಹಾಗೆ ಯೇಸು ನಂತರ ಜಿಬ್ರಯೇಲ್ ಗ್ರಹದಿಂದ ಹೇಳಲಾಗಿರುವ ಜ್ಞಾನ ಪ್ರವಕ್ತ ವೊಂದರ ಕೊನೆಯ ಹಂತದಲ್ಲಿ ಇತರರಿಂದ ಪ್ರವಕ್ತರವರು ಬರೆಯಿಸಿದಾಗ ಖುರ್‌ಆನ್ ಗ್ರಂಥವಾಗಿದೆ. ಮಹಮ್ಮದ್ ಪ್ರವಕ್ತರವರಿಗೆ ಓದು ಬರುವುದಿಲ್ಲ, ಆದ್ದರಿಂದ ಪಕ್ಕದಲ್ಲಿರುವವರಿಂದ ಬರೆಸುವುದು ನಡೆದಿದೆ. ಹೇಳಿರುವುದು ಜಿಬ್ರಯೇಲ್, ಕೇಳಿರುವುದು ಮಹಮ್ಮದ್ ಪ್ರವಕ್ತ, ಬರೆದಿರುವುದು ಮಹಮ್ಮದ್ ಪ್ರವಕ್ತ ಅನುಚರರು. ಈ ವಿಧವಾಗಿ ಮೂವರ ನಡುವೆ ಖುರ್‌ಆನ್ ಗ್ರಂಥ ತಯಾರಾಗಿದೆ. ಮೂವರಲ್ಲಿ ಮೊದಲನೆ ಜಿಬ್ರಯೇಲ್ ಮಹಾಜ್ಞಾನಿ ಆಗಿರುವುದರಿಂದ ದೂತ ಬಂದು ಹೇಳಿದ ಕಡೆ ಗ್ರಹವೂ ಸಹ ಹೇಳಬೇಕೆನ್ನುವ

ಉದ್ದೇಶದಿಂದ ಒಂದೇ ದೇಶದಲ್ಲಿ ಜಿಬ್ರಯೇಲ್ ಸಹ ಹೇಳುವುದು ನಡೆದಿದೆ. ಭಾರತದೇಶದಲ್ಲಿ ಮೊದಲು ಗ್ರಹದನಂತರ ದೂತ ಬಂದಿದ್ದಾನೆ. ಇಜ್ರಾಯೇಲ್ ದೇಶದಲ್ಲಿ ಮೊದಲು ದೂತ ಬಂದಿದ್ದಾನೆ. ನಂತರ ಗ್ರಹವಾದ ಜಿಬ್ರಯೇಲ್ ಬಂದಿದ್ದಾನೆ. ದೂತರಾಗಿ ಬಂದಿರುವವರು ಪ್ರತ್ಯಕ್ಷವಾಗಿ ಹೇಳಿದ ಜ್ಞಾನ ಭಗವದ್ಗೀತೆ, ಬೈಬಲ್‌ಆಗಿ ತಯಾರಾ ದಾಗ, ಕೇವಲ ಗ್ರಹ ಹೇಳಿರುವುದು ಮಾತ್ರ ಖುರ್‌ಆನ್ ಗ್ರಂಥವಾಗಿ ತಯಾರಾಗಿದೆ. ಯಾವ ವಿಧವಾಗಾದರೂ ಮೂರು ಗ್ರಂಥಗಳಲ್ಲಿ ದೇವರ ಧರ್ಮಗಳೇ ಇರುವುದರಿಂದ ಮೂರೂ ಭೂಮಿಮೇಲೆ ದೈವಗ್ರಂಥಗಳಾಗಿವೆ.

ಮೂರು ದೈವ ಗ್ರಂಥಗಳಲ್ಲಿ ಮೊದಲು ಹುಟ್ಟಿದ ಭಗವದ್ಗೀತೆ ಪ್ರಥಮ ದೈವ ಗ್ರಂಥವಾದಾಗ, ನಂತರ ಹುಟ್ಟಿದ ಬೈಬಲ್ ಮಧ್ಯಮ ದೈವ ಗ್ರಂಥವಾಗಿದೆ. ಕೊನೆಯಲ್ಲಿ ಹುಟ್ಟಿದ ಖುರ್‌ಆನ್ ಅಂತಿಮ ದೈವ ಗ್ರಂಥವಾಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರುವುದಕ್ಕೆ ಅವಕಾಶವಿದೆ. ಅದು ಏನೆಂದರೆ! ಭೂಮಿಮೇಲೆ ದೇವರು ಹೇಳಿದ ಗ್ರಂಥ ಒಂದಿದ್ದರೇ ಸರಿಹೋಗುವುದಿಲ್ಲವೇ? ಮೂರು ಇರುವುದರಿಂದ ಯಾವುದು ದೊಡ್ಡದ್ದೋ, ಯಾವುದು ಚಿಕ್ಕದೋ ಅರ್ಥವಾಗದೇ ಹೋಗುತ್ತದೆ ಅಲ್ಲವೆ! ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ನಿಮಗೆ ಬಂದಿರುವ ಪ್ರಶ್ನೆ ಒಳ್ಳೆಯದೆ. ಭಾರತದೇಶದಲ್ಲಿ ಹೇಳಿರುವ ಜ್ಞಾನ ಮೂರು ಸಾವಿರ ವರ್ಷಗಳಾದರೂ ಹೊರಗಿನ ದೇಶಗಳಿಗೆ ಹರಡದೇ ಹೋಗುವುದರಿಂದ ಇಜ್ರಾಯೇಲ್ ದೇಶದಲ್ಲಿ ಹೇಳುವುದು ನಡೆದಿದೆ. ಒಂದು ವಿಧವಾಗಿ ಮನುಷ್ಯರಲ್ಲಿನ ಭಕ್ತಿಯನ್ನು ಸೋಸುವುದಕ್ಕೆ ಮೂರು ಗ್ರಂಥಗಳು ಬರುವಹಾಗೆ ದೇವರೇ ಮಾಡಿದ್ದಾನೆಂದು ನಾವು ಅಂದುಕೊಳ್ಳಬಹುದು. ಮೂರು ಗ್ರಂಥಗಳಾಗಿ ದೇವರ ಜ್ಞಾನವಿರುವದರಿಂದ ನಿಜವಾದ ಶ್ರದ್ಧೆ ಇರುವವನಿಗೆ, ನಿಜವಾದ ಭಕ್ತಿ ಇರುವವನಿಗೆ ಮೂರು ಗ್ರಂಥಗಳಲ್ಲಿನ ಜ್ಞಾನ ಒಂದೇ ಎಂದು, ಒಬ್ಬ ದೇವರದೆಯೆಂದು ತಿಳಿಯುತ್ತದೆ. ಮೇಲಕ್ಕೆ ಜ್ಞಾನವನ್ನು ಮಾತನಾಡುತ್ತಾ ಭಕ್ತಿಯಾಗಿ ಕಾಣಿಸಿದರೂ ಅಂತರಂಗದಲ್ಲಿ ಮೂರು ಗ್ರಂಥಗಳ ಮೇಲೆ ಒಂದೇ

ಭಾವ ಇಲ್ಲದವರಿಗೆ ಅವು ಬೇರೆಬೇರೆ ವಿಧಾನಗಳು ಬೋಧಿಸುವಹಾಗೆ ಕಾಣಿಸುತ್ತದೆ. ಆದ್ದರಿಂದ ಕೆಲವರು ಒಂದು ಗ್ರಂಥವನ್ನು ಆಶ್ರಯಿಸಿ ಉಳಿದ ಎರಡು ಗ್ರಂಥಗಳನ್ನು ವಿರೋಧಿಸುತ್ತಾ, ಭೇದ ಭಾವದಿಂದ ಮಾತನಾಡುತ್ತಿರುತ್ತಾರೆ. ಅಂಥವರು ಮೂರು ಗ್ರಂಥಗಳನ್ನು ಮೂರು ಮತಗಳ ಬೋಧನೆಗಳಾಗಿ ವರ್ಣಿಸಿಕೊಂಡು ಉಳಿದವರಿಗೂ ಸಹ ಅದೇ ಬೋಧಿಸುತ್ತಿದ್ದಾರೆ. ದೇವರು ಹೇಳಿರುವುದು ಒಂದಾದರೆ, ಮನುಷ್ಯರು ಮೂರಾಗಿ ಮಾಡಿಕೊಳ್ಳುವುದರಿಂದ ಅವರಗೆ ಜ್ಞಾನದಲ್ಲಿ ಪರಿಪಕ್ವತೆ ಇಲ್ಲವೆಂದು ತಿಳಿದುಹೋಗುತ್ತಿದೆ. ಯಾರ ಜ್ಞಾನ ಅವರಿಗೆ ದೊಡ್ಡದಾಗಿ ಕಾಣಿಸಿದಾಗ ದೇವರು ಹೇಳಿದ ಮಾರ್ಗವನ್ನು ಬಿಟ್ಟು ಪಕ್ಕದಾರಿಯಲ್ಲಿ ಹೋಗುತ್ತಾ ತನ್ನದೇ ಸರಿಯಾದ ಮಾರ್ಗವೆಂದು ಕೊಳ್ಳುತ್ತಿದ್ದಾರೆ.

ದೇವರು ಯಾರದು ಎಷ್ಟು ಭಕ್ತಿಯೊ ಅವರಿಗೇ ತಿಳಿಯುವುದಕ್ಕೆ ತನ್ನ ಜ್ಞಾನವನ್ನು ಮೂರು ಗ್ರಂಥಗಳಾಗಿ ಭೂಮಿಮೇಲೆಗೆ ಕಳಿಸಿದ್ದಾನೆ. ಇದೆಲ್ಲವೂ ಒಂದು ಪಥಕದ ಪ್ರಕಾರ ಮಾಡಿದ ಕೆಲಸವೆಂದು ಅರ್ಥವಾಗುತ್ತಿದೆ. ಮೂರು ಗ್ರಂಥಗಳಾಗಿ ದೇವರು ಕೊಟ್ಟರೂ ಅವುಗಳಲ್ಲಿ ಹಿಂದೆ ಬಂದ ಎರಡು ಗ್ರಂಥಗಳು ಮೊದಲು ಬಂದಿರುವ ಗ್ರಂಥದಲ್ಲಿನ ಜ್ಞಾನ ನಿಜವಾದದ್ದೆಂದು ಸಾಕ್ಷಿ ಹೇಳುವುದಕ್ಕೆ ಬಂದಿವೆಯೆಂದೂ, ಹಿಂದೆ ಎರಡು ಗ್ರಂಥಗಳು ಮೊದಲು ಬಂದಿರುವ ಗ್ರಂಥವನ್ನು ಇದು ನಿಜವಾದ ದೈವ ಗ್ರಂಥವೆಂದು ಧೃಢಪಡಿಸುವುದಕ್ಕೆ ಬಂದಿರುವವೇ ಯಾಗಲೀ, ಆ ಗ್ರಂಥಗಳಲ್ಲಿನ ಜ್ಞಾನ ದೊಡ್ಡದೆಂದು ಹೇಳುವುದಕ್ಕೆ ಅಲ್ಲವೆಂದು, ದೇವರು ಉಳಿದ ಎರಡು ಗ್ರಂಥಗಳಲ್ಲಿ ತಿಳಿಸಿದ್ದಾನೆ. ಬೈಬಲ್‌ನಲ್ಲಿ ಮತ್ತಯಿ ಸುವಾರ್ತೆ ಐದನೇ ಅಧ್ಯಾಯದಲ್ಲಿ 17ನೇ ವಾಕ್ಯದಲ್ಲಿ ಅದೇ ವಿಷಯವನ್ನೇ ಯೇಸು ಹೇಳಿದ್ದಾನೆ. ಭಗವದ್ಗೀತೆಯನ್ನು ಧೃಢಪಡಿಸುವುದಕ್ಕೆ ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ ಐದನೇ ಅಧ್ಯಾಯ 17ನೇ ವಚನವಿದೆಯೆಂದು ಯಾರಿಗೂ ತಿಳಿಯದು. ಕೆಲವರಿಗೆ ನನ್ನ ಮಾತು ಇಷ್ಟವಾಗದೆ ಹೋಗಬಹುದು. ಅಂಥವರು ತಮಗೆ ತಾವೇ ಪ್ರಶ್ನಿಸಿಕೊಂಡು 17ನೇ ವಚನವೊಂದರ ವಿವರ ತಿಳಿದುಕೊಳ್ಳಬೇ

ಕೆನ್ನುತ್ತಿದ್ದೇನೆ. ಕೆಲವರು ಹಿಂದೂಮತದಲ್ಲಿನ ಭಗವದ್ಗೀತೆಯನ್ನು ದೊಡ್ಡದಾಗಿ ಮಾಡಿ, ಉಳಿದ ಗ್ರಂಥಗಳನ್ನು ಕಡಿಮೆ ಮಾಡುತ್ತಿದ್ದಾರೆಂದು ಸಹ ಅನ್ನಬಹುದು, ನಾನು ಇರುವ ಸತ್ಯವನ್ನು ಹೇಳುತ್ತಿದ್ದೇನಾಗಲೀ, ಎಲ್ಲ ಗ್ರಂಥಗಳಲ್ಲಿನ ಸಾರಾಂಶ ಒಂದೇ ಎಂದು ನನಗೆ ತಿಳಿದಿದೆ. ದೇಶದಲ್ಲಿ ಯಾರಿಗಾದರೂ ಮತಗಳ ಹುಚ್ಚು ಇರಬಹುದಾಗಲೀ ಇಲ್ಲಿ ಅಂಥದ್ದು ಯಾವ ಕೋನದಲ್ಲಿಯೂ ಕಾಣಿಸುವುದಿಲ್ಲ. ಪ್ರಥಮ ದೈವ ಗ್ರಂಥವನ್ನು ದ್ವಿತೀಯ, ಅಂತಿಮ ದೈವ ಗ್ರಂಥಗಳು ಎರಡೂ ಧೃಢಪಡಿಸುತ್ತಿವೆಯೆಂದು ಆಯಾ ಗ್ರಂಥಗಳಲ್ಲಿನ ವಿಷಯಗಳನ್ನು ಎತ್ತಿ ತೋರಿಸುತ್ತಿದ್ದೇನೆ.

ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಆರನೇ ಸೂರಾದಲ್ಲಿ 92ನೇ ವಾಕ್ಯದಲ್ಲಿ ಹೀಗಿದೆ ನೋಡಿ. **"ಇದೂ (ಖುರ್‌ಆನ್) ಸಹ ನಾವು ಅವತರಿಸಿದ ಗ್ರಂಥವೇ. ಎಷ್ಟೋ ಶುಭಪ್ರದವಾದದ್ದು. ತನಗಿಂತ ಮೊದಲಿರುವ ಗ್ರಂಥಗಳನ್ನು ಧೃಡೀಕರಿಸುವುದು"** ಎಂದು ಇದೆ. ಇದರ ಪ್ರಕಾರ ಖುರ್‌ಆನ್‌ಗಿಂತ ಮೊದಲು ಇರುವವು ಪ್ರಥಮ, ಮಧ್ಯಮ ದೈವ ಗ್ರಂಥಗಳಾದ ಭಗವದ್ಗೀತೆ, ಬೈಬಲ್ ಇವೆ. ಆ ಎರಡು ಗ್ರಂಥಗಳನ್ನು ಖುರ್‌ಆನ್ ಗ್ರಂಥ ತನ್ನ ಜ್ಞಾನದಿಂದ ಧೃಡೀಕರಿಸುತ್ತಿದೆ. ಈ ಎರಡು ಗ್ರಂಥಗಳು ಸತ್ಯವೆಂದು ಹೇಳುವುದೇ ಧೃಡೀಕರಣ ಎಂದು ತಿಳಿಯಬೇಕು. ಎರಡನೆಯ ಗ್ರಂಥ ಮೊದಲನೆ ಗ್ರಂಥವನ್ನು ಬಲಪಡಿಸುತ್ತಿದೆ. ಆದ್ದರಿಂದ ಮೂರು ಗ್ರಂಥಗಳಲ್ಲಿ ಮೊದಲ ಗ್ರಂಥವನ್ನು ಉಳಿದ ಎರಡು ಗ್ರಂಥಗಳು ಸಮರ್ಥಿಸುತ್ತಿವೆ. ಮೊದಲ ಗ್ರಂಥ ಬಂದಾಗ ಉಳಿದ ಎರಡು ಗ್ರಂಥಗಳೂ ಇಲ್ಲ, ಆದ್ದರಿಂದ ಅವುಗಳ ಪ್ರಸ್ತಾವನೆ ಅದರಲ್ಲಿ ಇಲ್ಲ. ಆದರೂ ಮೊದಲ ಗ್ರಂಥದಲ್ಲಿನ ವಿಷಯಗಳೇ ಉಳಿದ ಎರಡು ಗ್ರಂಥಗಳಲ್ಲಿಯೂ ಇವೆ. ಗ್ರಂಥಗಳಾಗಲೀ, ಅವುಗಳನ್ನು ಹೇಳಿದ ಪ್ರವಕ್ತರಾಗಲೀ, ಎಲ್ಲಿಯೂ ವಿಭೇದವನ್ನು ಹೊಂದಿರುವಹಾಗೆ ಕಾಣಿಸಲಿಲ್ಲ. ಆದರೇ ಯಾರಿಗೋಸ್ಕರ ಈ ಗ್ರಂಥಗಳನ್ನು ದೇವರುಕೊಟ್ಟಿದ್ದಾನೋ, ಯಾರಿಗೋಸ್ಕರ ದೇವರು ತನ್ನ ಗ್ರಂಥಗಳಲ್ಲಿ ಜ್ಞಾನವನ್ನು ಹೊಂದಿಸಿದ್ದಾನೋ,

ಅವರೇ ಈ ದಿನ ಮೂರು ಗ್ರಂಥಗಳ ಆಧಾರದಿಂದ ಮೂರು ಮತಗಳನ್ನು ಸೃಷ್ಠಿಸಿಕೊಂಡು, ತಮ್ಮನ್ನು ತಾವು ಮೂರು ಗುಂಪುಗಳಾಗಿ ವಿಭಜಿಸಿಕೊಂಡಿದ್ದಾರೆ. ದೇವರು ಹೇಳಿರುವುದೊಂದಾದರೇ ಮನುಷ್ಯ ಮಾಡಿರುವುದು ಮತ್ತೊಂದಾಗಿ ಇದೆ.

ದೇವರು ಮೂರು ಗ್ರಂಥಗಳನ್ನು ಮೂರು ಸಮಯಗಳಲ್ಲಿ ಕೊಟ್ಟಿದ್ದಾನೆ. ಹಾಗೆ ಕೊಟ್ಟಿರುವವನು ಉಳಿದ ಎರಡು ಗ್ರಂಥಗಳನ್ನು ನೋಡಿದ ಪ್ರಜೆಗಳೆಲ್ಲರೂ ಮೊದಲು ಹೇಳಿದ ಗ್ರಂಥವನ್ನು ಅನುಸರಿಸೆಂದು ಹೇಳಿದ್ದಾನೆ. ಎಲ್ಲದಕ್ಕೂ ಸಂಪೂರ್ಣ ದಾರಿ ಪ್ರಥಮ ದೈವ ಗ್ರಂಥವೇ ಎಂದು ಸೂಚನೆ ಮಾಡಿದ್ದಾನೆ. ಆದರೂ ದೇವರು ಮಾಡಿದ ಸೂಚನೆಯನ್ನು ಮನುಷ್ಯ ಯಾವ ಮಾತ್ರ ಗ್ರಹಿಸದೆ, ಹಿಂದೆ ಬಂದಿರುವ ಎರಡು ಗ್ರಂಥಗಳನ್ನು ಆಧಾರ ಮಾಡಿಕೊಂಡು, ಬೇರೆಬೇರೆ ಮತಗಳನ್ನು ಸೃಷ್ಠಿಸಿಕೊಂಡು, ಬೈಬಲ್‌ನ್ನು ಆಶ್ರಯಿಸಿದವರೆಲ್ಲರೂ ಕ್ರೈಸ್ತವರೆಂದು, ಖುರ್‌ಆನ್ ಗ್ರಂಥವನ್ನು ಆಶ್ರಯಿಸಿದವರೆಲ್ಲರೂ ಮುಸ್ಲೀಮ್‌ರೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ಮುಸ್ಲೀಮರ ದೇವರು ಅಲ್ಲಾ ಎಂದೂ, ಕ್ರೈಸ್ತವರ ದೇವರು ಯೆಹೋವಾಯೆಂದೂ ಹೇಳಿಕೊಳ್ಳುತ್ತಾ ಒಂದೇ ದೇವರನ್ನು ಎರಡಾಗಿ ಸೀಳಿಸಿಕೊಂಡಿದ್ದಾರೆ. ಇವರು ಹೀಗಿರುವಾಗ ಭಗವದ್ಗೀತೆಯನ್ನು ಆಶ್ರಯಿಸಿದವರೆಲ್ಲರೂ ಹಿಂದುಗಳೆಂದು ಹೇಳಿಕೊಳ್ಳುತ್ತಾ ನಮ್ಮ ದೇವರು ಇಂಥವನೆಂದು ಹೇಳದೆ ಯಾರಿಗೆ ಇಷ್ಟಬಂದವರನ್ನು ಅವರು ಪೂಜಿಸುತ್ತಾ ಕೊನೆಗೆ ತಮ್ಮ ದೇವರು ಯಾರೆನ್ನುವ ವಿಷಯ ಸಹ ಮರೆತುಹೋಗಿ ಒಬ್ಬೊಬ್ಬರು ಒಬ್ಬೊಬ್ಬರನ್ನು ತಮ್ಮ ದೇವರೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದರಲ್ಲಿ ಕೆಲವರು ಪ್ರಾಣಿಗಳನ್ನು ಸಹ ತಮ್ಮ ದೇವತೆಗಳಾಗಿ ಹೇಳಿಕೊಂಡು, ಕೆಲವರು ಮನುಷ್ಯರನ್ನು, ಕೆಲವರು ಕ್ಷುದ್ರದೇವತೆಗಳನ್ನು ತಮ್ಮ ದೇವತೆಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಮೊದಲು ಸರ್ವ ಪ್ರಪಂಚದಲ್ಲಿ ಶ್ರೇಷ್ಟವಾದ ಜ್ಞಾನವಿದ್ದು ನಾವು ಇಂದೂಗಳು (ಜ್ಞಾನಿಗಳು) ಅನಿಸಿಕೊಂಡವರು ಈ ದಿನ ಜ್ಞಾನಶೂನ್ಯರಾಗಿ ಹೋಗಿದ್ದಾರೆ. ಈ ವಿಧವಾಗಿ ಒಂದೇ ಜಾತಿ ಮನುಷ್ಯರು ಮೂರು ಮತಗಳಾಗಿ ವಿಭಜಿಸಲ್ಪಟ್ಟಿದ್ದಾರೆ.

ಹಾಗೆ ಮೂರು ಮತಗಳಾಗಿ ಕಾಣಿಸುವವರನ್ನು ನಿನ್ನ ಮತಗ್ರಂಥ ಯಾವುದು ಎಂದು ಕೇಳಿದರೇ ಬೈಬಲ್‌ನ್ನೋ, ಭಗವದ್ಗೀತೆಯನ್ನೋ, ಖುರ್‌ಆನ್ ಎಂದೋ ಹೇಳುತ್ತಿದ್ದಾರೆ. ಯಾವುದೋ ಒಂದು ಗ್ರಂಥವನ್ನು ಮತ ಗ್ರಂಥವಾಗಿ ಹೇಳಿಕೊಂಡರೂ ಫರವಾಗಿಲ್ಲ ಆದರೆ, ಆ ಗ್ರಂಥದಲ್ಲಿ ಇರುವಂತಾದರೂ (ಹೇಳಿದಂತಾದರೂ) ಎಲ್ಲಾದರೂ ಆಯಾ ಮತಗಳ ಮನುಷ್ಯರು ಇದ್ದಾರಾ ಎಂದರೇ, ಹಾಗೆ ಸಹ ಇಲ್ಲ. ಗ್ರಂಥದಲ್ಲಿ ಹೇಳಿದವುಗಳನ್ನು ಬಿಟ್ಟು ಮತ ಹಿರಿಯರು ಹೇಳಿದ ವಿಷಯಗಳನ್ನೇ ಹೆಚ್ಚಾಗಿ ಆಚರಿಸುತ್ತಿರುತ್ತಾರೆ. ಇದೇನೆಂದು ಕೇಳಿದರೆ ಇದು ನಮ್ಮ ಮತಾಚಾರ ಎನ್ನುತ್ತಾರೆ. ಆ ಮತಾಚಾರ ಏನಾದರೂ ಅವನ ಜೀವನಕ್ಕೆ ಕೆಲಸಕ್ಕೆ ಬರುತ್ತದಾ ಎಂದು ನೋಡಿದರೆ ಹಾಗೂ ಸಹ ಯಾವ ಉಪಯೋಗವೂ ಇರುವುದಿಲ್ಲ. ಗ್ರಂಥದಲ್ಲಿ ಇಲ್ಲದಿರುವವು, ಜ್ಞಾನ ಅಲ್ಲದಿರುವವು, ಮೂಢತ್ವವನ್ನು ತಿಳಿಸುವವಾದರೂ ಮತಾಚಾರಗಳು ಕಾಣಿಸುತ್ತಿರುವವು. ಅದೇ ವಿಧವಾಗಿ ದೇಶವೆಲ್ಲಾ ಯಾವುದೋ ಒಂದು ಮತದಲ್ಲಿ ಲಗ್ನವಾಗಿ, ಇದು ನಮ್ಮ ಮತ ಎನ್ನುವ ಅಭಿಮಾನ ಹೊಂದಿ, ಇತರ ಮತಗಳ ಮೇಲೆ ಅಸೂಯೆಯನ್ನು ಹೊಂದಿದ್ದಾರೆ. ದೇವರು ಹೇಳಿದ ಮೂರು ಗ್ರಂಥಗಳಿಗೆ ಪೂರ್ತಿ ವಿರುದ್ಧವಾಗಿರುವುದೆ ಮತವೆಂದು ತಿಳಿಯಬೇಕು. ಒಂದು ಗ್ರಂಥವನ್ನು ಅನುಸರಿಸುವವರು ಒಂದು ಮತವಾಗಿ ಕಾಣಿಸಿದರೂ, ವಾಸ್ತವಕ್ಕೆ ಅವನ ಗ್ರಂಥಕ್ಕೂ ಅವರಿಗೂ ಯಾವ ಸಂಬಂಧವಿರುವುದಿಲ್ಲ. ಪ್ರತಿ ಮತದವರು ನಾವು ನಮ್ಮ ಗ್ರಂಥವನ್ನು ಅನುಸರಿಸಿದ್ದೇವೆಂದು ಹೇಳಿಕೊಳ್ಳುತ್ತಿದ್ದರೂ, ಅವರು ಪ್ರತ್ಯೇಕವಾಗಿ ಗ್ರಂಥವನ್ನು ಅತಿಕ್ರಮಿಸಿ ನಡೆಯುತ್ತಿರುತ್ತಾರೆ. ಉದಾಹರಣೆಗೆ ಹಿಂದುಗಳ ವಿಷಯಕ್ಕೆ ಬಂದರೆ ಕೆಲವರು ಮಹರ್ಷಿಗಳು ಗಡ್ಡ ಬೆಳೆಸಿ, ಕೂದಲನ್ನು ಬೆಳಸಿ, ಕಾಷಾಯವಸ್ತ್ರಗಳು ಧರಿಸಿರುತ್ತಾರೆ. ಆದರೆ ಮಹರ್ಷಿ ಆದವನಾಗಲೀ, ಜ್ಞಾನಿ ಆದವನಾಗಲೀ, ಸನ್ಯಾಸಿ ಆದವನಾಗಲೀ ಹಾಗೆ ಇರಬೇಕೆನ್ನುವ ನಿಯಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಎಲ್ಲಿಯೂ ಇಲ್ಲ. ಆದರೂ ಹಿಂದುಗಳ

ದೈವ ಗ್ರಂಥ ಭಗವದ್ಗೀತೆಯಂತೆ ಹೇಳಿಕೊಳ್ಳುತ್ತಾ, ಎಲ್ಲೋ ಪುರಾಣ ಗ್ರಂಥಗಳಲ್ಲಿ ಬರೆದ ವಿಷಯವನ್ನು ಅನುಸರಿಸುತ್ತಿರುತ್ತಾರೆ. ಅವರ ಜುಟ್ಟು ಗಡ್ಡಗಳ ವಿಷಯವಾಗಲೀ, ಕಾಷಾಯ ವಸ್ತ್ರಧಾರಣೆಯಾಗಲೀ, ಹೊರಗೆ ಆಚರಣೆಗಳು ಯಾವೇ ಆಗಲೀ, ಭಗವದ್ಗೀತೆಗೆ ಸಂಬಂಧವಿರುವುದಿಲ್ಲ. ಹಾಗೇ ಮುಸ್ಲೀಮ್‌ರ ವಿಷಯಕ್ಕೆ ಬಂದು ನೋಡಿದರೆ, ಮುಸ್ಲೀಮ್‌ರ ಗ್ರಂಥ ಖುರ್‌ಆನ್ ಎಂದು ಹೇಳುತ್ತಿದ್ದರೂ, ಅವರ ಹೊರಗಿನ ಆಚರಣೆಗಳಲ್ಲಿ, ಅಲಂಕಾರಗಳಲ್ಲಿ ಯಾವುದೂ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ಇರುವುದಿಲ್ಲ. ಅವರು ಆಚರಿಸುವ ಆಚರಣೆಗಳೆಲ್ಲವೂ ಹದೀಸು ಗ್ರಂಥದೊಳಗಿನವೇ ಹೆಚ್ಚಾಗಿರುತ್ತವೆ. ಹಿಂದೂಗಳು ಪುರಾಣಗಳನ್ನು ಬಿಟ್ಟು ಭಗವದ್ಗೀತೆಯನ್ನು ಒಂದನ್ನೇ ಆಧಾರ ಮಾಡಿಕೊಂಡರೇ ಕೊನೆಗೆ ದೈವಮಾರ್ಗದಲ್ಲಿ ನಡೆಯಬಲ್ಲರು. ಅದೇ ವಿಧವಾಗಿ ಮುಸ್ಲೀಮ್‌ರು ಹದೀಸುಗಳನ್ನು ಬಿಟ್ಟು ದೇವರು ಕೊಟ್ಟಿರುವ ಖುರ್‌ಆನ್ ಗ್ರಂಥವನ್ನು ಅನುಸರಿಸಿದರೆ ಅವರು ಸಹ ದೈವ ಮಾರ್ಗದಲ್ಲಿ ನಡೆಯಬಲ್ಲರು. ಆದರೇ ಮತಗಳು ಮನುಷ್ಯರನ್ನು ದೈವ ಗ್ರಂಥಗಳ ಪ್ರಕಾರ ನಡೆಯಲು ಬಿಡುತ್ತಿಲ್ಲ.

ಮನುಷ್ಯನಲ್ಲಿ ಮತ ಇರುವವರೆಗೂ ಅದು ದೇವರ ಮಾರ್ಗಕ್ಕೆ ಆತಂಕವಾಗಿ, ದೇವರು ಹೇಳಿದ ಜ್ಞಾನವನ್ನು ತಿಳಿಯದಂತೆ ಮಾಡುತ್ತಿರುತ್ತದೆ. ಮತ ಎನ್ನುವ ಮಾಯೆ ನೀವು ಸರಿಯಾದ ದೇವರ ಮಾರ್ಗದಲ್ಲಿಯೇ ಪ್ರಯಾಣಿಸುತ್ತಿದ್ದೀಯೆಂದೆನಿಸುತ್ತಾ, ತನಗೆ ಏನೂ ತಿಳಿಯದೆ ಪಕ್ಕ ಮಾರ್ಗದಲ್ಲಿ ನಡೆಸುತ್ತಿರುತ್ತದೆ. ಎಂದಾದರೆ ಮನುಷ್ಯ ಮತದ ಬಗ್ಗೆ ಅಪ್ರಮತ್ತನಾಗಿ, ನಾನು ಇಂತಹ ಮತಸ್ಥನೆನ್ನುವ ಧ್ಯಾಸವನ್ನು ಬಿಟ್ಟು, ಮುಸ್ಲೀಮ್ ಖುರ್‌ಆನ್ ಗ್ರಂಥವನ್ನು ಓದಿ ಅದನ್ನು ಅನುಸರಿಸಿದರೆ ತಪ್ಪದೆ ದೇವರನ್ನು ಸೇರಬಲ್ಲನು. ಹಾಗೇ ಹಿಂದೂ ಆದವನು ಸಹ ನಾನು ಇಂತಹ ಮತಸ್ಥನೆನ್ನುವ ಭಾವವನ್ನು ಬಿಟ್ಟು, ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯನ್ನು ಓದಿ ಅರ್ಥ ಮಾಡಿಕೊಂಡು ಅದರ ಪ್ರಕಾರ ನಡೆದಾಗ ಆತನು ನಿಜವಾಗಿ ದೈವ ಮಾರ್ಗದಲ್ಲಿ ನಡೆದಂತೇ ಆಗುತ್ತದೆ. ಅದರಿಂದ ಇದೇ ಜನ್ಮದಲ್ಲಿ ಕರ್ಮವನ್ನು ಜಯಿಸಿ ಮುಕ್ತಿಯನ್ನು

ಹೊಂದಬಲ್ಲನು. ಯಾರಾದರಾಗಲೀ ಈ ಭೂಮಿಮೇಲೆ ಮತಾತೀತವಾಗಿ ಇದ್ದೂ, ದೇವರು ಗ್ರಂಥಗಳಿಂದ ತಿಳಿಸಿದ ಜ್ಞಾನವನ್ನು ತಿಳಿದುಕೊಳ್ಳುತ್ತಾ, ಮೂರು ದೈವ ಗ್ರಂಥಗಳ ಮೇಲೆ ಒಂದೇ ಅಭಿಪ್ರಾಯ ಇದ್ದು ಭೇದ ಇಲ್ಲದೆ ಇರುತ್ತಾರೊ, ಆಗ ನಿಜವಾದ ದೈವತ್ವವನ್ನು ತಿಳಿದು ಮೋಕ್ಷವನ್ನು ಹೊಂದಬಲ್ಲರು. ಪ್ರಥಮ ದೈವ ಗ್ರಂಥವೇ ಭಗವದ್ಗೀತೆಯೆಂದೂ, ದ್ವಿತೀಯ ದೈವ ಗ್ರಂಥ ಬೈಬಲ್ ಎಂದೂ, ಅಂತಿಮ ದೈವ ಗ್ರಂಥ ಖುರ್‌ಆನ್ ಎಂದೂ ನೀನು ತಿಳಿದುಕೊಳ್ಳುವುದೇ ಅಲ್ಲದೆ ಇತರರಿಗೂ ಸಹ ತಿಳಿಸುತ್ತಾ ಮೂರನ್ನೂ ಸಮಾನವಾಗಿ ನೋಡಬೇಕು. ಹಾಗೇ ಪ್ರಥಮ ದೈವ ಗ್ರಂಥವನ್ನು ಧರ್ಮ ಶಾಸ್ತ್ರವೆಂದೂ, ಉಳಿದ ಗ್ರಂಥಗಳಲ್ಲಿಯೂ ಸಹ ತಿಳಿಸಿದ್ದಾರೆಂದೂ, ಅದು ಸಂಪೂರ್ಣ ಧರ್ಮಶಾಸ್ತ್ರವೆಂದು ತಿಳಿದು ಅನುಸರಿಸಿದವನು ಧನ್ಯನಾಗುತ್ತಾನೆ, ದೇವರಲ್ಲಿ ಸೇರಿಹೋಗುವನು.

ನಾನು ಪದ್ಧತಿಯಾಗಿ ದೇವರ ಜ್ಞಾನವನ್ನು ತಿಳಿದು ಮೊದಲಿನಿಂದ ಪ್ರಥಮದೈವ ಗ್ರಂಥವೆಂದು ಹೆಸರುಹೊಂದಿದ ಭಗವದ್ಗೀತೆಯನ್ನು ಅನುಸರಿಸುತ್ತಾ, ಅದು ಸಂಪೂರ್ಣ ಧರ್ಮಶಾಸ್ತ್ರವೆಂದು ತಿಳಿದು, ಎಲ್ಲ ಮತಗಳವರಿಗೆ ಸಮಾನವಾಗಿ ಜ್ಞಾನ ಹೇಳಿದರೆ, ನಾನು ಹಿಂದುವಲ್ಲವೆಂದೂ ತಮ್ಮ ಮತವನ್ನು ತಾವೇ ಗುರುತಿಸಲಾರದ ಹಿಂದುಗಳು ನನ್ನನ್ನು ಪರಮತಗಳನ್ನು ಬೋಧಿಸುವವ ನಾಗಿ ಆರೋಪಣೆಗಳು ಮಾಡಿದ್ದಾರೆ. ಅಂಥವರಿಗೆ ನಾನು ಹೇಳುವ ಬೋಧನೆಗಳಿಗೆ ಪ್ರಜೆಗಳು ಹೇಗೆ ಸ್ಪಂದಿಸುತ್ತಿದ್ದಾರೋ ತಿಳಿಯುವುದಕ್ಕೆ ಈ ಮಧ್ಯ ನನಗೆ ಬಂದಿರುವ ಪತ್ರಗಳನ್ನು ಕೆಳಗೆ ಜೋಡಿಸುತ್ತಿದ್ದೇನೆ ನೋಡಿರಿ. ಅವುಗಳನ್ನು ನೋಡಿದ ನಂತರವಾದರೂ ನನ್ನಲ್ಲಿನ ಶ್ರೇಷ್ಠತ್ವವನ್ನು ಗ್ರಹಿ ಸಬಲ್ಲರೆಂದು ಅಂದುಕೊಳ್ಳುತ್ತಾ ಮುಗಿಸುತ್ತಿದ್ದೇನೆ.

**ಪಿ. ಆದಿನಾರಾಯಣ**

ಮುದ್ದಿರೆಡ್ಡಿಪಲ್ಲಿ, ಇಂದೂಪುರಂ (ಹಿಂದೂಪುರಂ).

ಶ್ರೀಶ್ರೀಶ್ರೀ ಪ್ರಬೋಧಾನಂದ ಯೋಗೀಶ್ವರರಿಗೆ, ಸಾಕಾರದಲ್ಲಿ ಕಾಣಿಸುವ ನಿರಾಕಾರ ದೈವಕ್ಕೆ ಎಷ್ಟೋ ಜನ್ಮಗಳ ಪುಣ್ಯಫಲದಿಂದ ದೊರಕಿದ ದೈವ ಸಮಾನರಿಗೆ...

ನನ್ನ ಮನಃ ಪೂರ್ವಕವಾಗಿ ನಮಸ್ಕರಿಸಿ ಬರೆಯುವ ಪತ್ರ. ಈ ಶರೀರದ ಹೆಸರು ಆದಿನಾರಾಯಣ. ಈಗ ಇರುವುದು ಮುದ್ದಿರೆಡ್ಡಿಪಲ್ಲಿ ಇಂದೂಪುರಂ (ಹಿಂದೂಪುರಂ) ಈ ಶರೀರದ ತಾಯಿ ತಂದೆಯರ ಹೆಸರು ಸುಬ್ಬರಾಯುಡು, ನಾಗಮ್ಮ. ಆಗ ನಾವಿದ್ದ ಊರು ಕೋಟಂಪಲ್ಲಿ, ಚೆನ್ನೇಕೊತ್ತಪಲ್ಲಿ ಹತ್ತಿರ ನನಗೆ 7,8,9 ವರ್ಷಗಳಿಂದ ನಡೆದಿರುವವು ಚೆನ್ನಾಗಿ ನೆನಪಿವೆ. ನಮ್ಮ ಮನೆಗೆ ಸ್ವಲ್ಪ ಜನ ಸ್ವಾಮೀಜಿಗಳಾಗಲೀ, ಗುರುಗಳಾಗಲೀ, ಹರಿಕಥೆ ದಾಸರಾಗಲೀ, ನಟೀನಟರಾಗಲೀ, ತೊಗಲು ಗೊಂಬೆ ಆಟ ಆಡುವವರಾಗಲೀ ನಮ್ಮ ಮನೆಗೆ ಬಂದು ನಮ್ಮ ಅಪ್ಪನೊಂದಿಗೆ ಮಾತನಾಡಿ ಎಷ್ಟು ದಿನಗಳು ಬೇಕೊ ಅಷ್ಟು ದಿನಗಳು ನಮ್ಮ ಮನೆಯಲ್ಲಿದ್ದು ಅವರ ಕಾರ್ಯಕ್ರಮಗಳು ಪೂರ್ತಿ ಆದ ನಂತರ ಹೊರಟು ಹೋಗುತ್ತಿದ್ದರು. ಅಂದಿನಿಂದ ನಮ್ಮ ಮನೆಯಲ್ಲಿ ತತ್ವಗಳ ವಿಷಯವಾಗಲಿ, ಪದ್ಯಗಳ ಅರ್ಥವಾಗಲಿ, ವೇಮನ ಶತಕವಾಗಲಿ, ನಾರಾಯಣ ಶತಕವಾಗಲಿ ಪಾರಾಯಣ ಮಾಡುತ್ತಿದ್ದರು. ಅಂದಿನಿಂದ ಈ ಪ್ರಪಂಚದಲ್ಲಿ ಏನೋ ಇದೆಯೆಂದು ಈ ಪ್ರಪಂಚವನ್ನು ಕುರಿತು ತಿಳಿದುಕೊಳ್ಳಬೇಕೆಂದು ಇತ್ತು. ಒಂದುಬಾರಿ ಗೋವಾದಿಂದ ಒಬ್ಬ ಸ್ವಾಮೀಜೀ ಬಂದಿದ್ದಾರೆ. ಆಗ ನಮ್ಮ ತಂದೆ ಹತ್ತಿರ ಆ ಸ್ವಾಮೀಜೀ ವಾರದ ದಿನಗಳು ನಮ್ಮ ಮನೆಯಲ್ಲೇ ಇದ್ದು ದಿನಾಲೂ ಸತ್ಸಂಗ ಮಾಡಿ, ತಾನು ಮತ್ತೆ ಊರಿಗೆ ಹೋಗುವಾಗ ನನ್ನನ್ನು ಹತ್ತಿರಕ್ಕೆ ಕರೆದು ಗೋವಾಗೆ ಬರುತ್ತೀಯಾ? ನನ್ನಂತೆ ಸ್ವಾಮೀಜೀ ಆಗುತ್ತೀಯಾ ಎಂದು ನನ್ನನ್ನು ಕೇಳುತ್ತಿದ್ದರು. ಆಗ ನಾನು ನಮ್ಮ ಅಪ್ಪ ಹೋಗೆಂದರೆ ಬರುತ್ತೇನೆ ಸ್ವಾಮಿ ಎಂದು ಹೇಳುತ್ತಿದ್ದೆನು. ಆ ವಿಧವಾಗಿ ಎಷ್ಟು ಜನ ಸ್ವಾಮೀಜಿಯರು ಬಂದರೂ ನಮ್ಮ ಮನೆಯಲ್ಲಿಯೇ ಇದ್ದು ಸತ್ಸಂಗಗಳು ಮಾಡಿ ಹೋಗುತ್ತಿದ್ದರು. ನಮ್ಮ ಮನೆಯಲ್ಲಿ ಒಂದು ಪದ್ಧತಿ ಇತ್ತು. ಅದು

ಏನೆಂದರೆ ಪ್ರತಿ ದಿನ ಸಾಯಂಕಾಲ ನಾರಾಯಣ ಶತಕ ಓದದೇ ಊಟ ಮಾಡುತ್ತಿರಲಿಲ್ಲ. ನಾರಾಯಣ ಶತಕ ಪೂರ್ತಿ ಆದ ನಂತರವೇ ಪ್ರತಿ ಒಬ್ಬರೂ ಊಟ ಮಾಡಬೇಕು. ಇದು ಒಂದು ನಿಯಮವಾಗಿ ಇತ್ತು. ನಂತರ ನನಗೆ 12 ವರ್ಷಗಳಿರುವಾಗ ಅಮ್ಮ ಸತ್ತುಹೋಗುವುದೂ, ಅಪ್ಪನಿಗೆ ಎಷ್ಟು ಜ್ಞಾನ ತಿಳಿದರೂ ಕುಡಿಯುವ ಚಟಕ್ಕೆ ವಶವಾಗಿ ಅಮ್ಮನ ಬಾಧೆಯಲ್ಲಿ ಇದ್ದುಹೋಗುವುದು, ನಮ್ಮನ್ನು ಕುರಿತು, ಅಂದರೆ ಏಳು ಜನ ಮಕ್ಕಳು ನಮ್ಮ ಅಪ್ಪನ ತಾಯಿ (ಅಜ್ಜಿ) ಇಷ್ಟು ದೊಡ್ಡ ಕುಟುಂಬವನ್ನು ಕುರಿತು ಗಮನಹರಿಸುತ್ತಿರಲಿಲ್ಲ. ಆ ಚಿಕ್ಕ ವಯಸ್ಸಿನಿಂದಲೇ ಕುಟುಂಬದ ಜವಾಬ್ದಾರಿ ನಾನೇ ನೋಡಿಕೊಳ್ಳಬೇಕಾಗಿ ಬಂದಿದೆ. ನಮ್ಮ ಅಣ್ಣನೂ ಸಹ ನಾನು ಹೇಳಿದರಾಗಲಿ ಕೆಲವು ವಿಷಯಗಳು ತಿಳಿದುಕೊಳ್ಳುತ್ತಿರಲಿಲ್ಲ. ಆದ್ದರಿಂದ ಎಲ್ಲ ಕೆಲಸಗಳೂ ನನಗೇ ಹೇಳುತ್ತಿದ್ದರು.

ಕೋಟಂಪಲ್ಲಿ ಯಿಂದ 1972ರಲ್ಲಿ ಮುದ್ದಿರೆಡ್ಡಿಪಲ್ಲಿಗೆ ಬರುವುದು, ಇಲ್ಲಿ ಮಗ್ಗವನ್ನು ಕಲಿತು ಮೂವರು ತಂಗಿಯರಿಗು ಮದುವೆಗಳು ಮಾಡುವುದು, ನಾವು ಮದುವೆ ಮಾಡಿಕೊಳ್ಳುವುದು ಒಂದು ಮನೆ ಕಟ್ಟಿಕೊಳ್ಳುವುದು, ಹೀಗೆ ಸಂಸಾರ ಜೀವನ ಸಾಗಿಹೋಗುತ್ತಿದ್ದ ಸಮಯದಲ್ಲಿ ಅಪ್ಪ ಸತ್ತುಹೋಗುವುದು, ಅಪ್ಪ ಸತ್ತುಹೋದ ಸ್ವಲ್ಪ ದಿನಗಳಿಗೆ ನನಗೆ ಯಾಕ್ಸಿಡೆಂಟ್ ಆಗುವುದು, ಯಾಕ್ಸಿಡೆಂಟ್ ಆಗುವುದರಿಂದ ನಾನು ಮನೆಯಲ್ಲೇ ಆರು ತಿಂಗಳು ಇರಬೇಕಾಯಿತು. ಆಗ ಎಲ್ಲ ಗ್ರಂಥಗಳೂ, ಅಷ್ಟಾದಶ ಪುರಾಣಗಳೂ, ಪ್ರಪಂಚ ಪುಸ್ತಕಗಳು ಎಷ್ಟೋ ಓದುವುದು ನಡೆದಿದೆ. ಎಷ್ಟು ಪುಸ್ತಕಗಳು ಓದಿದರೂ ಭಗವಂತನನ್ನು ಕುರಿತು, ಪರಮಾತ್ಮನನ್ನು ಕುರಿತು ಯಾವುದೂ ಸರಿಯಾಗಿ ಅರ್ಥವಾಗದೇ ಇತ್ತು. ಈ ಗುಡಿ ಗೋಪುರಗಳು ಅಷ್ಟೊತ್ತಿಗೆ ಬಹಳ ತಿರುಗಾಡುವುದು ನಡೆದಿದೆ. ಎಲ್ಲಿಗೆ ಹೋದರೂ ಈ ಪ್ರಪಂಚವನ್ನು ಕುರಿತು ಏನೂ ಅರ್ಥವಾಗುತ್ತಿರಲಿಲ್ಲ. ಆಗಲೇ ಅಂದರೇ 1986ರಲ್ಲಿ ಭಗವದ್ಗೀತೆ ಓದುವುದು ನಡೆದಿದೆ. ಭಗವದ್ಗೀತೆಯನ್ನು ನಾಲ್ಕು, ಐದು ಬಾರಿ ಓದಿದರೂ ಅರ್ಥವಾಗುತ್ತಿರಲಿಲ್ಲ. ಭಗವದ್ಗೀತೆಯಲ್ಲಿ ಸಹ ವಿಧವಿಧಗಳ ಅರ್ಥಗಳಿಂದ

ಯಾವುದೂ ಸರಿಯಾಗಿ ಅರ್ಥವಾಗದೇ ಇರುತ್ತಿತ್ತು. ಆ ಸಮಯದಲ್ಲೇ ಅಂದರೆ 1988ನೇ ಸಂವತ್ಸರದಲ್ಲಿ ಬ್ರಹ್ಮಕುಮಾರಿ ಸಮಾಜದವರು ನಮ್ಮ ಮುದ್ದಿರೆಡ್ಡಿಪಲ್ಲಿಯಲ್ಲಿ ಯಾವುದೋ ಸರ್ವಿಸ್ ಇಟ್ಟಿದ್ದಾರೆಂದು ನಮ್ಮ ಮನೆಯಲ್ಲಿ ಮಗ್ಗ ನೇಯುವ ಗೋವಿಂದ ಎನ್ನುವಾತನು ಬಂದು ಹೇಳುವುದು, ದೇವರು ನಿರಾಕಾರನಂತೆ, ಆಕಾರವಿರುವವನು ದೇವರು ಅಲ್ಲವಂತೆ, ಪರಮಾತ್ಮನೇ ಈ ಸೃಷ್ಠಿಯೊಳಕ್ಕೆ ಬಂದಿದ್ದಾನೆನ್ನುವುದು, ನಾನು ಗೋವಿಂದನಿಗೆ 10 ರೂಪಾಯಿಗಳು ಕೊಟ್ಟು ಒಂದು ಪುಸ್ತಕ ತೆಗೆದುಕೊಂಡು ಬಾ ಎಂದು ಹೇಳಿ ಕಳಿಸುವುದು, ಆತನು ಹೋಗಿ 10 ರೂಪಾಯಿಗಳಿಗೆ ಎರಡು ಪುಸ್ತಕಗಳು ಸಣ್ಣವು ತೆಗೆದುಕೊಂಡು ಬರುವುದು ನಡೆದಿದೆ. ಒಂದು ಪುಸ್ತಕದ ಹೆಸರು ಪರಮಾತ್ಮ ಪರಿಚಯ, ಎರಡನೇ ಪುಸ್ತಕದ ಹೆಸರು ಜೀವನವನ್ನು ವಜ್ರತುಲ್ಯಂ ಮಾಡಿಕೊಳ್ಳುವುದು ಹೇಗೆ ಎನ್ನುವ ಪುಸ್ತಕಗಳನ್ನು ನಾನು ಓದುವುದು, ನಿರಾಕಾರ ಪರಮಾತ್ಮ ಒಬ್ಬ ದಾದಾಲೇಕ್‌ರಾಜ್ ಎನ್ನುವ ಶರೀರದೊಳಕ್ಕೆ ಪ್ರವೇಶವಾಗಿ ಜ್ಞಾನ ಕೊಡುತ್ತಿದ್ದಾರೆಂದು ಅವರು ಹೇಳುವುದು, ನಾನು ಆ ಸಂಸ್ಥೆಗೆ ಹೋಗುವುದು ನಡೆದಿದೆ. ಏಕೆ ಅಂದರೆ ಅಲ್ಲಿ ನಿರಾಕಾರನು ಒಂದು ಶರೀರ ಆಧಾರ ಮಾಡಿಕೊಂಡು ಜ್ಞಾನ ಕೊಡುತ್ತಿದ್ದಾನೆಂದರೆ ಅದು ನಿಜವೆಂದು ಹೋಗುವುದು ನಡೆದಿದೆ. ಅಲ್ಲಿಂದ ಆ ಜ್ಞಾನ ಕೇಳುತ್ತಾ, ಈ ಪ್ರಪಂಚಕ್ಕೆ ಭಿನ್ನವಾದ ಜ್ಞಾನವಾದ್ದರಿಂದ ಆ ಜ್ಞಾನದಲ್ಲಿಯೇ ಇರುವುದು ನಡೆದಿದೆ. ಆದರೆ ಅಲ್ಲಿಯೂ ಸಹ ಅರ್ಥವಾಗದ ಕೆಲವು ವಿಷಯಗಳು ತಿಳಿದಿವೆ. ಅವು ಯಾವವು ಎಂದರೆ ಪರಮಾತ್ಮ ಬಂದು ಒಂದು ಜೀವನ ಕಾಲ ಜ್ಞಾನ ಕೊಡುತ್ತಾನೆಂದು, ನಂತರ ನಮ್ಮೆಲ್ಲರನ್ನು ತನ್ನ ಜೊತೆಯಲ್ಲೇ ಮನೆಗೆ ಕರೆದುಕೊಂಡು ಹೋಗುತ್ತಾನೆಂದು, ಈ ಜ್ಞಾನ 70 ವರ್ಷಗಳು ಇರುತ್ತದೆಂದು, ಈ ಜ್ಞಾನ 70 ವರ್ಷಗಳ ನಂತರ ಎಲ್ಲರನ್ನೂ ಪರಂಧಾಮ ಎನ್ನುವ ಮನೆಗೆ ಕರೆದುಕೊಂಡು ಹೋಗಿ ಮತ್ತೆ ಈ ಜ್ಞಾನ ಯಾರಾದರೇ ಕೇಳಿದ್ದಾರೋ ಅವರನ್ನು ಸತ್ಯಯುಗಕ್ಕೆ, ತ್ರೇತಾಯುಗಕ್ಕೆ ತೆಗೆದುಕೊಂಡು ಹೋಗಿ ದೇವತೆಗಳಾಗಿ ಮಾಡುತ್ತಾನೆಂದು ಹೇಳಿದ್ದಾರೆ. ಈ ಜ್ಞಾನದೊಳಕ್ಕೆ ಬರುವವರು ಮಾತ್ರವೇ ಸತ್ಯ, ತ್ರೇತಾಯುಗದೊಳಕ್ಕೆ ಬಂದು

ದೇವತೆಗಳಾಗಿ ಹುಟ್ಟಿ ಸಾಧಾರಣ ಮನುಷ್ಯರಾಗಿ ಬದಲಾಗಿ, ದ್ವಾಪರಯುಗದಲ್ಲಿ ರಾಜರಾಗಿ, ಕಲಿಯುಗದಲ್ಲಿ ಅಜ್ಞಾನಿಗಳು ಆದ ನಂತರ ಮತ್ತೆ ಪರಮಾತ್ಮ ಬಂದು, ಮತ್ತೆ ಜ್ಞಾನವನ್ನು ಹೇಳಿ, ಪುನಃ ಮನೆಗೆ ಕರೆದುಕೊಂಡು ಹೋಗುತ್ತಾನೆ, ಇದೇ ಕಲ್ಪ ನಡೆಯುತ್ತದೆಂದು ಹೇಳುತ್ತಿದ್ದಾರೆ. ಇಲ್ಲಿಗೆ 77 ವರ್ಷಗಳು ಆಗಿವೆ. ಅವರು ಹೇಳಿದ 70 ವರ್ಷಗಳಿಗೆ ಈ ಜ್ಞಾನ ನಿಂತುಹೋಗಬೇಕು. ಸತ್ಯಯುಗ ಪ್ರಾರಂಭವಾಗುವುದಕ್ಕೆ ಉಳಿದಿರುವುದು 23ವರ್ಷಗಳೇ! ಈಗಾಗಲೇ ಸತ್ಯಯುಗ ಪ್ರಾರಂಭವಾಗಬೇಕಾಗಿದೆ. ಆದರೇ ಆಗಲಿಲ್ಲ, ಸತ್ಯಯುಗ ಬರಲಿಲ್ಲ. ಅಲ್ಲಿ ಸಂಸ್ಥೆಯಲ್ಲಿ ನಿಯಮಗಳು, ಪದ್ಧತಿಗಳು ಎಲ್ಲಾ ಬದಲಾಗಿಹೋಗಿವೆ. ಏನು ಈ ವಿಧವಾಗಿ ಆಗಿದೆ ಎಂದು ಕೇಳಿದರೆ ಹೇಳುವವರೇ ಇಲ್ಲ. ಇನ್ನೂ ಓಂಶಾಂತಿ ಕುರಿತು ಹೇಳಬೇಕೆಂದರೆ ಒಂದು ದೊಡ್ಡ ಪುಸ್ತಕ ಆಗುತ್ತದೆ. ಇದು ನಾನು ನಿಮ್ಮೊಂದಿಗೆ ಬೇಟಿಯಾದಾಗ ಎಷ್ಟು ಮೋಸ ನಡೆಯುತ್ತಿದೆಯೆಂದು, ಮಾಯೆ ಯಾವ ವಿಧವಾಗಿ ಲಕ್ಷಗಳ ಜನರನ್ನು ಮೋಸ ಮಾಡುತ್ತಿದೆಯೆಂದು ವಿವರವಾಗಿ ಮಾತನಾಡುತ್ತೇನೆ.

ಈ ಸಮಯದಲ್ಲಿಯೇ ನಾನು ಪ್ರಬೋಧಾನಂದ ಯೋಗೀಶ್ವರರವರ ಗ್ರಂಥಗಳು ಓದುವುದು ನಡೆದಿದೆ. ನಾಲ್ಕು ಗ್ರಂಥಗಳು ಓದಿದ ನಂತರ ಮುಖ್ಯವಾಗಿ ತ್ರೈತ ಸಿದ್ಧಾಂತ ಭಗವದ್ಗೀತೆ ಓದಿದ ನಂತರ ಈ ಸೃಷ್ಠಿ ರಹಸ್ಯಗಳು ಎಲ್ಲಾ ಯಾರಿಗಾದರೇ ತಿಳಿದಿದೆಯೋ ಅವರನ್ನು ಹೊರತು ಪಡಿಸಿ ಮತ್ಯಾರೂ ಈ ಗ್ರಂಥಗಳನ್ನು ಬರೆಯಲಾರರೆಂದು ಅರ್ಥವಾಗಿದೆ. ತ್ರೈತ ಸಿದ್ಧಾಂತ ಭಗವದ್ಗೀತೆ ಓದಿದನಂತರ ನಾನು ಮೊದಲು ಓದಿದ ಭಗವದ್ಗೀತೆ ಅರ್ಥವೇ ಆಗಿರಲಿಲ್ಲ. ಆದರೆ ಈ ಭಗವದ್ಗೀತೆ ಓದಿದ ನಂತರ ಅರ್ಥವಾಗಿರುವುದು ಏನೆಂದರೆ, ಈ ಪ್ರಪಂಚವನ್ನು, ಆತ್ಮವನ್ನು, ಜೀವಾತ್ಮವನ್ನು ಸೃಷ್ಠಿಸಿರುವುದು ಪರಮಾತ್ಮನೇ ಎಂದು, ಒಟ್ಟು ಪ್ರಪಂಚ ವಿಷಯವೆಲ್ಲಾ ಜೀವಿಯ ವಿಷಯಗಳು, ಆತ್ಮ ವಿಷಯ, ಪ್ರಕೃತಿ ವಿಷಯ, ಪರಮಾತ್ಮ ವಿಷಯ, ಬ್ರಹ್ಮಯೋಗ ಎಂದರೆ ಏನು, ಕರ್ಮಯೋಗ ಎಂದರೇ ಏನು, ಭಕ್ತಿಯೋಗ ಎಂದರೆ ಏನು ಎಲ್ಲಾ

ಅರ್ಥವಾಗಿವೆ. ಜೀವಿಯನ್ನು ಮುಕ್ತಿಗೆ ತೆಗೆದುಕೊಂಡುಹೋಗುವ ಮಾರ್ಗ ಪೂರ್ತಿಯಾಗಿ ಅರ್ಥವಾಗಿದೆ. ಅದೇ ತ್ರೈತಸಿದ್ಧಾಂತ ಭಗವದ್ಗೀತೆಯಿಂದ ಈ ಪ್ರಪಂಚದಲ್ಲಿ ಅದೇ ಜೀವಿಯು, ಅದೇ ಆತ್ಮ, ಅದೇ ಪರಮಾತ್ಮ ಕ್ಷರನು, ಅಕ್ಷರನು, ಪುರುಷೋತ್ತಮನಾಗಿ ಇದ್ದಾರೆಂದು ಅವರೊಂದಿಗೆ ಪ್ರಕೃತಿ ಇಷ್ಟೇ ಪ್ರಪಂಚ ಎಂದು ಅರ್ಥವಾಗಿದೆ.

ಜನನ ಮರಣ ಸಿದ್ಧಾಂತ ಗ್ರಂಥ ಓದಿದನಂತರ ಜನನ ಮರಣ ಸಿದ್ಧಾಂತ ಎಂದರೆ ಏನು? ಎಂದು ಅರ್ಥವಾಗಿದೆ. ಜನನ ಮರಣ ರಹಸ್ಯ ಅರ್ಥವಾಗಿದೆ. ಸಮಾಧಿ ಗ್ರಂಥವನ್ನು ಓದಿದ ನಂತರ ಸಮಾಧಿ ಎಂದರೆ ಏನು, ಮೃತ ಶರೀರ ಎಂದರೆ ಏನು? ಜೀವಿಯು ಎಂದರೆ ಏನು, ಸಮಾಧಿ ಅನ್ನುವುದು ಯಾವುದು? ಎಂದು ಅರ್ಥವಾಗಿದೆ. ತ್ರೈತಾರಾಧನೆ ಗ್ರಂಥದಿಂದ ತ್ರೈತವೆಂದರೆ ಮೂರು ಎಂದು ಸೂರ್ಯ, ಚಂದ್ರ, ನಕ್ಷತ್ರಗಳೆನ್ನುವ ವಿಷಯ ತ್ರೈತಾರಾಧನೆ ವಿಷಯ, ತ್ರೈತಾರಾಧನೆ ಯಾವ ವಿಧವಾಗಿ ಮಾಡಬೇಕೆನ್ನುವ ವಿಷಯ ತಿಳಿದಿದೆ. ಪ್ರಬೋಧ, ಸುಬೋಧ ಗ್ರಂಥಗಳಲ್ಲಿ ಎಷ್ಟೋ ರಹಸ್ಯಗಳನ್ನು ತಿಳಿದುಕೊಳ್ಳುವುದು ನಡೆದಿದೆ. ಯಜ್ಞಗಳು ಅನ್ನುವ ಗ್ರಂಥದಲ್ಲಿ ಯಜ್ಞವೆಂದರೆ ಏನು, ಯಜ್ಞಗಳು ಎಷ್ಟು, ಬಾಹ್ಯ ಯಜ್ಞ, ದ್ರವ್ಯ ಯಜ್ಞ, ಜ್ಞಾನ ಯಜ್ಞ ಈ ಮೂರು ಯಜ್ಞಗಳನ್ನು ಕುರಿತು ಪೂರ್ತಿಯಾಗಿ ಅರ್ಥವಾಗಿದೆ. ಪ್ರವಕ್ತರು ಯಾರು? ಗ್ರಂಥವನ್ನು ಓದಿದಾಗ ಪರಮಾತ್ಮ ಎಂದರೆ ಯಾರು, ಭಗವಂತನೆಂದರೆ ಯಾರು, ಪ್ರವಕ್ತರೆಂದರೆ ಯಾರು ಅರ್ಥವಾಗಿದೆ. ಸೃಷ್ಟಿಕರ್ತ ಕೋಡ್ – 963 ಅನ್ನುವ ಗ್ರಂಥವನ್ನು ಓದಿದಾಗ **ಪರಮಾತ್ಮ – 9, ಆತ್ಮ – 6, ಜೀವಾತ್ಮ – 3** ಎಂದು ಈ ಪ್ರಪಂಚ ಮಾಯೆ ಕೋಡ್ – 666 ಎಂದು ಚೆನ್ನಾಗಿ ಅರ್ಥವಾಗಿದೆ. ಮತಾತೀತ ದೇವರ ಮಾರ್ಗ ಅನ್ನುವ ಗ್ರಂಥ ಓದಿದಾಗ ದೇವರೆಂದರೆ ಯಾರು, ಮತ ಎಂದರೆ ಏನು, ಮನುಷ್ಯ ಇಟ್ಟುಕೊಂಡಿರುವುದೇ ಮತ, ಮತಕ್ಕೆ ಅತೀತವಾಗಿರುವುದು, ಪ್ರಪಂಚದಲ್ಲಿ ಎಲ್ಲರ ಮತಗಳಿಗೂ ಸಂಬಂಧವಿಲ್ಲದ ಜ್ಞಾನವೇ ಮತಾತೀತ ಜ್ಞಾನ ಎಂದು ಅರ್ಥವಾಗಿದೆ. ಗುರುಪ್ರಾರ್ಥನಾ ಮಂಜರಿ

ಅನ್ನುವ ಗ್ರಂಥ ಓದಿದ ನಂತರ ಗುರುವು ಎಂದರೆ ಯಾರು, ಪ್ರಪಂಚದಲ್ಲಿ ಗುರುಗಳು ಅನ್ನುವವರು ಎಷ್ಟು ಜನ ಇರುತ್ತಾರೆ, ಗುರುವು ಅನ್ನುವವರು ಪ್ರಪಂಚಕ್ಕೆ ಒಬ್ಬರೇ ಇರುತ್ತಾರೆಂದು, ಪರಮಾತ್ಮ ಮನುಷ್ಯನಾಗಿ ಬಂದಾಗ ಆತನೇ ಗುರುವೆಂದೂ, ಪರಮಾತ್ಮ ಬಂದು ಗುರುವಾಗಿ ಇದ್ದು ಜ್ಞಾನ ಕೊಟ್ಟು ಹೋದ ನಂತರ ಸಹ ಗುರುವು ಒಬ್ಬರೇ ಎಂದು, ಉಳಿದವರೆಲ್ಲಾ ಬೋಧಕರೇ ಎಂದು, ಗುರು ಎಂದರೆ ಊರಲ್ಲಿ ಇರುವವರೇ ಗುರುವೆಂದು ತಿಳಿದಿದೆ. ಅಷ್ಟೇ ಅಲ್ಲದೇ ಗುರುವಿಗೆ ಮಹಿಮೆಗಳು ಇರುತ್ತವಾ, ಗುರುವನ್ನು ಯಾರು ಗುರುತಿಸುತ್ತಾರೆ, ಯಾರು ಗುರುತಿಸುವುದಿಲ್ಲ, ಗುರುವಿಗೆ ಶಿಷ್ಯರು ಇರುತ್ತಾರಾ, ಇರುವುದಿಲ್ಲವಾ, ಗುರುವನ್ನು ದೂಷಿಸಿದವರಿಗೆ ಗುರು ಏನು ಮಾಡುತ್ತಾನೆ. ಅವರಿಗೆ ಏನಾದರೂ ಆದರೇ ಅದು ಗುರುವಿನಿಂದ ಅಲ್ಲದೆ ಗುರುವನ್ನು ಗುರುತಿಸಿದ ಅವರಿಂದ ಮಾತ್ರವೇ ಆಗುತ್ತದೆಂದು ಅರ್ಥವಾಗಿದೆ. ಹಾಗೇ ಪ್ರಬೋಧಾನಂದ ನಾಟಕಗಳಾಗಲಿ, ಗಾದೆಗಳ ಜ್ಞಾನವಾಗಲಿ, ನಮ್ಮ ಹಬ್ಬಗಳು ಆಗಲಿ, ನಮ್ಮ ಸಾಂಪ್ರದಾಯಗಳಾಗಲಿ, ಪ್ರಬೋಧ ತರಂಗಗಳಾಗಲಿ, ದೇವಾಲಯ ರಹಸ್ಯಗಳಾಗಲಿ, ಆತ್ಮಲಿಂಗಾರ್ಥವಾಗಲಿ, ಆಧ್ಯಾತ್ಮಿಕ ಪ್ರಶ್ನೆಗಳು ಉತ್ತರಗಾಳಾಗಲಿ, ಬೈಗಳಲ್ಲಿನ ಜ್ಞಾನ ಆಶೀರ್ವಾದಗಳಲ್ಲಿನ ಅಜ್ಞಾನ, ಪ್ರವಕ್ತರು ಯಾರು, ಕಲಿಯುಗ ಎಂದಿಗೂ ಯುಗಾಂತವಾಗದು ಅನ್ನುವ ಗ್ರಂಥಗಳಾಗಲೀ, ಆಯಾ ಗ್ರಂಥಗಳ ಪ್ರತ್ಯೇಕತೆಗಳು, ಅವುಗಳಲ್ಲಿರುವ ರಹಸ್ಯ ಅರ್ಥವಾಗಿದೆ. ಮುಖ್ಯವಾಗಿ **'ಗುತ್ತಾ'** ಅನ್ನುವ ಗ್ರಂಥದಲ್ಲಿ ಜೀವಾತ್ಮನನ್ನಾಗಲೀ, ಆತ್ಮನನ್ನಾಗಲೀ, ಪರಮಾತ್ಮನನ್ನಾಗಲೀ ನಮ್ಮ ಕೈಯಲ್ಲೇ ತೋರಿಸಿದ್ದಾರೆಂದು ಗುತ್ತಾ ಅನ್ನುವ ಗ್ರಂಥದಲ್ಲಿ ಗುರುವನ್ನು ತಿಳಿದುಕೊಂಡಿದ್ದೇನೆ. ಗುರುವು ಸಾಧಾರಣ ವ್ಯಕ್ತಿಯಾಗೇ ಇದ್ದು ಅಸಾಧಾರಣ ಜ್ಞಾನ ಕೊಡುತ್ತಾ ಇರುತ್ತಾರೆಂದು ಇವೇ ಅಲ್ಲದೆ ಒಂದೊಂದು ಗ್ರಂಥದಲ್ಲಿ ಒಂದೊಂದು ರಹಸ್ಯ ಎಲ್ಲ ಗ್ರಂಥಗಳಲ್ಲಿ ಈ ಪ್ರಪಂಚ ರಹಸ್ಯ ಪ್ರಕೃತಿಯಾಗಲೀ, ಜೀವಿಯಾಗಲೀ, ಆತ್ಮವಾಗಲೀ ಪರಮಾತ್ಮವಾಗಲೀ ಅರ್ಥವಾಗಿದೆ. ಅದ್ವೈತ ಎಂದರೆ ಏನು, ವಿಶಿಷ್ಠಾದ್ವೈತವೆಂದರೆ ಏನು, ದ್ವೈತ ಎಂದರೆ ಏನು, ಪುರಾಣ ವೆಂದರೆ ಏನು, ವೇದಗಳೆಂದರೆ ಏನು ಎಲ್ಲಾ ಅರ್ಥವಾಗಿವೆ. ಮುಖ್ಯವಾಗಿ

ಅರ್ಥವಾಗಿರುವುದು ಏನೆಂದರೇ ಪ್ರಪಂಚವೇ ತ್ರೈತ ತ್ರೈತವೆಂದರೆ ಪ್ರಪಂಚ. ಇದು ಯಾರಾದರೇ ತಿಳಿದುಕೊಳ್ಳುತ್ತಾರೋ ಅವರು ಸೇರಬೇಕಾದ ಜಾಗ ಯಾವುದಾದರೇ ಇದೆಯೋ ಅಲ್ಲಿಗೇ ಸೇರುತ್ತಾರೆಂದು ಅರ್ಥವಾಗಿದೆ. ಇಷ್ಟು ಅರ್ಥವಾಗುವಹಾಗೆ ಮಾಡಿಸಿದ ಪ್ರಬೋಧಾನಂದ ಯೋಗೀಶ್ವರರವರಿಗೆ ಕೋಟಿ ಶತಕೋಟಿ ವಂದನೆಗಳು. ಇಲ್ಲಿಗೆ ಮುಗಿಸುತ್ತಿದ್ದೇನೆ, ಇನ್ನೂ ನಿಮ್ಮೊಂದಿಗೆ ಬೇಟಿಯಾದಾಗ, ಆ ಅದೃಷ್ಟ ಬಂದಾಗ ನೇರವಾಗಿ ಮಾತನಾಡುವ ಸಮಯ ಬಂದಾಗ ಮಾತನಾಡುತ್ತೇನೆ. ಆ ಸಮಯಕ್ಕೋಸ್ಕರ ಎದುರು ನೋಡುತ್ತಾ ಇರುವ ಜೀವಿಯು ಜೀವಾತ್ಮ...

ನಮಸ್ಕಾರಗಳು
ಪಿ. ಆದಿನಾರಾಯಣ

*****

**ಯಂ. ರಾಜೇಶ್ವರ್**
ಹೈದರಾಬಾದ್.

01) ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರವರು ರಚಿಸಿದ ತ್ರೈತ ಸಿದ್ಧಾಂತ ಭಗವದ್ಗೀತೆ, ಇಲ್ಲಿಯವರೆಗು ಬಂದಿರುವ ಭಗವದ್ಗೀತೆ ಗಳೆಲ್ಲವುಕ್ಕಿಂತ ಸವಿವರವಾಗಿ ಜೀವಾತ್ಮ, ಆತ್ಮ ಮತ್ತು ಪರಮಾತ್ಮ ತತ್ತ್ವಗಳು ಸುಲಭಶೈಲಿಯಲ್ಲಿ, ಅರ್ಥವಂತವಾದ ರೀತಿಯಲ್ಲಿ ವಿವರಿಸಲ್ಪಟ್ಟಿವೆ.

02) ಸ್ವಾಮಿಯವರು ರಚಿಸಿದ ಪ್ರತಿ ಗ್ರಂಥವೂ ಸಂಚಲನಾತ್ಮಕವೆ. ಇಲ್ಲಿಯವರೆಗು ಯಾರೂ ತಿಳಿಸದ ಆತ್ಮ ಜ್ಞಾನಕ್ಕೆ ಸಂಬಂಧಿಸಿದ ಮರ್ಮಗಳನ್ನು ಮತ್ತು ಎಷ್ಟೋ ರಹಸ್ಯಗಳನ್ನು ನಮ್ಮೆಲ್ಲರಿಗೂ ತಿಳಿಸುವುದು ಮಾನವರು ಮಾಡಿಕೊಂಡ ಮಹಾಭಾಗ್ಯ.

03) ಬೈಬಲ್, ಭಗವದ್ಗೀತೆ ಮತ್ತು ಖುರ್ಆನ್ ಗ್ರಂಥಗಳಲ್ಲಿ ದೇವರು ಹೇಳಿದ ಆತ್ಮಜ್ಞಾನವೇ ಇದೆಯೆಂದು, ಕಾಲಗಮನದಲ್ಲಿ ಮಾಯೆ ಪ್ರಭಾವದಿಂದ

ಯಾವ ಮತದವರೂ ದೇವರ ಜ್ಞಾನವನ್ನು ಸರಿಯಾಗಿ ಅವಗಾಹನೆ ಮಾಡಿಕೊಳ್ಳದೆ ಹೋಗಿದ್ದಾರೆಂದು, ಮತಗಳಿಗೆ ಅತೀತವಾದ ಪಥ ಒಂದೇ ಎಂದು, ಅದೇ ದೇವರ ಜ್ಞಾನವನ್ನು ತಿಳಿಸುತ್ತದೆಂದು ಸ್ವಾಮಿಯವರ ರಚನೆಗಳಿಂದಲೇ ನನಗೆ ಅರ್ಥವಾಗಿದೆ.

04) ದೇವರು ಸೂಕ್ಷ್ಮವೆಂದು, ಕರ್ಮ ಸಹ ಸೂಕ್ಷ್ಮವೆಂದು, ಸೂಕ್ಷ್ಮ ಬುದ್ಧಿಗೇ ದೇವರ ಜ್ಞಾನ ತಿಳಿಯುತ್ತದೆಂದು, ಕರ್ಮದಲ್ಲಿ ಭಾವ ಮುಖ್ಯವೆಂದು ತಿಳಿದುಕೊಂಡೆನು.

05) ದೇವರೇ ಸಾಕಾರವಾಗಿ ಮಾನವ ರೂಪದಲ್ಲಿ ಅವತರಿಸಿದ ಭಗವಂತನೇ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು.

06) ಶಾಸ್ತ್ರಗಳು ಆರು ಎಂದು ಅವುಗಳಲ್ಲಿ ಬ್ರಹ್ಮವಿದ್ಯಾಶಾಸ್ತ್ರವೇ ದೊಡ್ಡದು, ವಿಶೇಷವಾದದ್ದೆಂದು ಸ್ವಾಮಿಯವರ ರಚನೆಗಳಿಂದಲೇ ನನಗೆ ಸುಬೋಧಕವಾಗಿದೆ. ನಲವತ್ತೈದಕ್ಕೆ ಮೇಲಾಗಿ ರಚಿಸಿದ ರಚನೆಗಳೆಲ್ಲವುಗಳಲ್ಲಿ ಅದ್ಭುತವಾದ ಆತ್ಮಜ್ಞಾನವೇ ನಿಕ್ಷಿಪ್ತವಾಗಿದೆ. ದೈವಜ್ಞಾನವನ್ನು ಶಾಸ್ತ್ರ ಪ್ರಮಾಣವಾಗಿ, ಸಹೇತುಕವಾಗಿರುವುದಾಗಿ ಮನುಷ್ಯನಿಗೆ ಉದಯಿಸುವ ಎಲ್ಲ ಪ್ರಶ್ನೆಗಳಿಗು ಸರಿಯಾದ ಸಮಾಧಾನವನ್ನು ಕೊಡುವುದಾಗಿ ಸಮಗ್ರವಾಗಿ ಸಂಪೂರ್ಣವಾಗಿ ಸುಸಂಪನ್ನಮಯ ಮಾಡಿದ್ದಾರೆ ಸ್ವಾಮಿಯವರು.

07) ಬ್ರಹ್ಮಯ್ಯನವರು ಕಾಲಜ್ಞಾನದಲ್ಲಿ ಎಲ್ಲ ಮತಗಳನ್ನು ಏಕ ಮಾಡುವ ಆನಂದ ಗುರುವು ಅವತರಿಸುತ್ತಾನೆಂದು ತಿಳಿಸಿದ್ದಾರೆ. ಜಾತಿ, ಮತ, ಕುಲ, ಸ್ತ್ರೀ ಪುರುಷ ಬೇಧ ಇಲ್ಲದೆ ಸರ್ವರು ಎಲ್ಲರೂ ಪ್ರಬೋಧಾನಂದ ಆಶ್ರಮ ಚೆನ್ನಪೊಡಮಲ ಗ್ರಾ॥, ತಾಡಿಪತ್ರಿ ಮಂ॥ ಅನಂತಪೂರ್ ಜಿಲ್ಲೆಯಲ್ಲಿ ಪ್ರತಿ ಪೌರ್ಣಮಿ ದಿನ ಸ್ವಾಮಿ ನಿರ್ವಹಿಸುವ ಸತ್ಸಂಗದಲ್ಲಿ ಪಾಲ್ಗೊಳ್ಳುತ್ತಾರೆ. ನಾನು ಸಹ ಪ್ರತಿ ಪೌರ್ಣಮಿ ಸತ್ಸಂಗದಲ್ಲಿ ಪಾಲ್ಗೊಳ್ಳುತ್ತಿದ್ದೇನೆ. ಬ್ರಹ್ಮಯ್ಯರವರು ತಿಳಿಸಿದ ಆ ಆನಂದ ಗುರುವೇ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು.

08) ಭಾರತದೇಶ ಸುಸಂಪನ್ನರಾದ ಅತ್ಮಜ್ಞಾನಿಗಳಿಗೆ ನಿಲಯ. ನಮ್ಮೆಲ್ಲರದೂ ಇಂದೂ ಮತವೆಂದು, ಕಾಲಗಮನದಲ್ಲಿ ಹಿಂದು ಮತವಾಗಿ ಬದಲಾಗಿದೆಯೆಂದು, ಹಿಂದು ಅನ್ನುವ ಪದಕ್ಕೆ ಎಂತಹ ಅರ್ಥ ಇಲ್ಲವೆಂದು, ಅಸಲಾದ ಪದ "ಇಂದೂ" ಎಂದರೆ ಅತ್ಮಜ್ಞಾನಿಯೆಂದು ಸ್ವಾಮಿಯವರ ರಚನೆಗಳಿಂದಲೇ ನನಗೆ ಅವಗತವಾಗಿದೆ. ಈ ಅಸಲು ಸಿಸಲಾದ ಆತ್ಮಜ್ಞಾನ ಒಂದೇ ಹಿಂದೂ ಮತವನ್ನು ಪರಿರಕ್ಷಿಸಿ, ಸಮೈಖ್ಯ ಪಡಿಸುತ್ತದೆ, ಸಂಘಟಿತ ಮಾಡುತ್ತದೆ. ನಮ್ಮೆಲ್ಲರನ್ನು ಸತ್ಯದಕಡೆಗೆ ನಡೆಸುತ್ತದೆ.

09) ಮಾನವ ಜೀವನ ಸತ್ಯಾನ್ವೇಷಣೆಯಲ್ಲಿ ಇರುವವರೆಲ್ಲರಿಗೂ ನನ್ನ ಮನವಿ ಏನೆಂದರೆ! ಸ್ವಾಮಿಯವರು ರಚಿಸಿದ ಗ್ರಂಥಗಳೆಲ್ಲವನ್ನೂ ಓದಿ ಅವಗಾಹನೆ ಮಾಡಿಕೊಂಡರೇನೇ ಸತ್ಯ ಸುಬೋಧಕವಾಗುತ್ತದೆ. ಆಗಲೇ ಸಂಪೂರ್ಣ ಆತ್ಮಜ್ಞಾನಿಗಳಾಗುತ್ತೇವೆ. ಈ ಅಸಲು ಸಿಸಲಾದ ಆತ್ಮಜ್ಞಾನ ಒಂದೇ ನಮ್ಮ ಕರ್ಮಗಳೆಲ್ಲವನ್ನೂ ಸುಟ್ಟುಹಾಕಿ ಜೀವನ ಮರಣ ಚಕ್ರದಿಂದ ಬಿಡಿಸಿ ಮೋಕ್ಷಕ್ಕೆ ದಾರಿ ತೋರಿಸುತ್ತದೆ. ಜನ್ಮವನ್ನು ಸಾರ್ಥಕ ಮಾಡುತ್ತದೆ. ಅದಕ್ಕೇ ನಾವೆಲ್ಲರೂ ಈ ಗ್ರಂಥಗಳೆಲ್ಲವನ್ನೂ ಓದುತ್ತಾ, ಅವಗಾಹನೆ ಬೆಳಿಸಿಕೊಳ್ಳುತ್ತಾ, ಗ್ರಹಿಸಿದ ಸತ್ಯವನ್ನು ಇತರರಿಗೆ ಹಂಚಿಕೊಳ್ಳುತ್ತಾ ಹೋದರೆ ಅದೇ ನಿಜವಾದ ದೈವಸೇವೆ ಆಗುತ್ತದೆ. ಬನ್ನಿ! ದೈವಸೇವೆಯಲ್ಲಿ ಹೆಚ್ಚಾಗಿ ಪಾಲ್ಗೊಳ್ಳಿ. ಮಾನವ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಿ!

ಇಂತಿ<br>ದೈವಜ್ಞಾನ ಜಿಜ್ಞಾಸಿ<br>(ಯಂ. ರಾಜೇಶ್ವರ್)

*****

**ಯಂ. ಎ. ವೆಂಕಟೇಶ್ವರ್ಲು**

ತುಗ್ಗಲಿ ಮಂ॥, ಕರ್ನೂಲ್ ಜಿಲ್ಲೆ.

ಇಂದೂ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ, ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ತ್ರೈತ ಸಿದ್ಧಾಂತ ಎಂದರೆ ಮೂರು ಆತ್ಮಗಳಾದ ಜೀವಾತ್ಮ, ಆತ್ಮ, ಪರಮಾತ್ಮರ ವಿಷಯವನ್ನು ಕುರಿತು ಹೇಳಿರುವುದು.

ಜೀವಾತ್ಮ ಶರೀರದಲ್ಲಿ ಏಳನೆಯನಾಡೀಕೇಂದ್ರದಲ್ಲಿ ಒಂದು ಚುಕ್ಕೆಯಾಗಿ ಇದೆಯೆಂದು ತಿಳಿದುಕೊಂಡಿದ್ದೇನೆ. ಹಾಗೇ ಆತ್ಮ ಸಹ ಶರೀರವೆಲ್ಲಾ ವ್ಯಾಪಿಸಿದೆ ಯೆಂದು ತಿಳಿದುಕೊಂಡಿದ್ದೇನೆ. ಹಾಗೇ ಪರಮಾತ್ಮ ನನ್ನಲ್ಲಿದ್ದು ಹೊರಗೆ ಪ್ರಪಂಚವೆಲ್ಲಾ ವ್ಯಾಪಿಸಿದೆಯೆಂದು ತಿಳಿದುಕೊಂಡಿದ್ದೇವೆ.

ಈ ಜ್ಞಾನದೊಳಕ್ಕೆ ಬಾರದ ಮುನ್ನ ಪೂಜಾ ವಿಧಾನದಲ್ಲಿ, ದೀಪಾರಾಧನೆ ವೊಂದರ ಪ್ರಾಮುಖ್ಯತೆ ಏನೋ ಪೂರ್ತಿಯಾಗಿ ನನಗೆ ತಿಳಿಯದು. ಈ ಜ್ಞಾನ ಈಗ ತಿಳಿದುಕೊಳ್ಳುವುದರಿಂದ ಪೂರ್ತಿ ವಿವರ ತಿಳಿದಿದೆ. ಅದು ಪ್ರಣತಿ ಎಂದರೆ ಶರೀರ, ಎಣ್ಣೆ ಎಂದರೆ ಕರ್ಮಯೆಂದು, ಎರಡು ಬತ್ತಿಗಳು ಎಂದರೆ ಜೀವಾತ್ಮ, ಆತ್ಮಗಳೆಂದು, ಅಗ್ನಿ ಎಂದರೆ ಜ್ಞಾನ ಎಂದು ತಿಳಿಯಿತು.

ಮಂಗಳಹಾರತಿ ವಿವರ ಸಹ ತಿಳಿಯಲಾಗಿದೆ. ಮಂಗಳ ಎಂದರೆ ಶುಭ ಎಂದು ಹಾರತಿ ಎಂದರೆ ಮಿಶ್ರಮ ಎಂದು ತಿಳಿಯಲಾಗಿದೆ. ಅದು ಹೇಗೆ ಕರ್ಪೂರ ಅನ್ನುವ ನಾಮದೊಂದಿಗೆ ಆಕಾರ ಹೊಂದಿದ್ದು, ಈ ಆಕಾರ ಹೊಂದಿರುವಂತಹ ಕರ್ಪೂರ ಹೊರಗೆ ಅಗ್ನಿಯಿಂದ ಹೇಗಾದರೆ ಮಿಶ್ರಮವಾಗಿ ಹೋಗುತ್ತಿದೆಯೋ ಅದೇ ವಿಧವಾಗಿ ಜೀವಾತ್ಮ ಆದ ನಾನು ಸಹ ಜ್ಞಾನವೆನ್ನುವ ಅಗ್ನಿಯನ್ನು ಸಂಪಾದಿಸಿ ಕರ್ಪೂರದಂತೆ ಮಿಶ್ರಮದೊಂದಿಗೆ ಸೇರಿಹೋಗುತ್ತೇ ನೆಂದು ತಿಳಿದುಕೊಂಡಿದ್ದೇವೆ.

ಇಂತಿ,

ದೇವರ ಮಗ

(ಯಂ. ಎ. ವೆಂಕಟೇಶ್ವರ್ಲು)

**ಸಿ. ಯೋಗೀಂಧರ್**

ಗುತ್ತಿ.

ಮಹಾರಾಜಶ್ರೀ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರವರಿಗೆ ಗುರುದೇವರ ಪಾದಪದ್ಮಗಳಿಗೆ ನಮ್ಮ ನಮಸ್ಕಾರಗಳು...

ನಮ್ಮ ವ್ಯವಹಾರಿಕ ನಾಮ ಸಿ. ಯೋಗೀಂಧರ್. ನಾವು ಇಲ್ಲಿಯವರೆಗು ಅಂದರೆ ನಮ್ಮ ಮಿತ್ರನು ಶ್ರೀ ಆದಿಶೇಷಯ್ಯನವರು ನಿಮ್ಮನ್ನು ಕುರಿತು ತಿಳಿಸುವವರೆಗೂ ಆಧ್ಯಾತ್ಮಿಕವಾಗಿ ಬೆಳೆಯಬೇಕೆಂದು ಎಷ್ಟೋ ಪ್ರಯತ್ನಗಳನ್ನು ಮಾಡುತ್ತಾ ಬಂದಿದ್ದೇನೆ. ಎಷ್ಟೋ ಗ್ರಂಥಗಳನ್ನು ಓದಿದ್ದೇನೆ. ಆದರೆ ಎಲ್ಲ ವಿಷಯಗಳು ಅರ್ಥವಾದಂತೇ ಇವೆಯಾಗಲೀ ಅದರಲ್ಲಿ ಇನ್ನೂ ಏನೋ ಸ್ವಲ್ಪ ವಿವರ ಬೇಕಾಗಿದೆ ಅನ್ನುವ ಅನುಮಾನ ಇತ್ತು. ತ್ರೈತ ಸಿದ್ಧಾಂತ ಪರಿಚಯದ ನಂತರ ಸಹ ಎಷ್ಟೋ ಅನುಮಾನಗಳು ಬಂದಿವೆ. ಕೆಲವು ಹಿರಿಯರ ವಿವರಣೆಗಳ ನಂತರ ಯಾವುದು ಸತ್ಯ ಯಾವುದು ಅಸತ್ಯ, ಯಾವುದು ಆಚರಣಾತ್ಮಕ, ಯಾವುದು ಅಭೂತಕಲ್ಪನೆ ಹೀಗೆ ಎಷ್ಟೋ ವಿಷಯಗಳು ನಿಮ್ಮ ಗ್ರಂಥಗಳಿಂದ ಮತ್ತು ನಿಮ್ಮ ಪ್ರಸಂಗಗಳಿಂದ ನಮ್ಮೊಂದರ ಜ್ಞಾನ ಪರಿಧಿ ಬೆಳೆಸಿಕೊಳ್ಳುವುದು ನಡೆದಿದೆ. ಗುರುಗಳೇ! ನಿಮ್ಮ ದಯೆಯಿಂದ ಮೊಟ್ಟ ಮೊದಲು ಎಲ್ಲರಮೇಲೆ ಗೌರವ ಬೆಳೆದಿದೆ. ಇನ್ನೂ ಎಷ್ಟೋ ಹೇಳಬೇಕೆಂದಿದೆ. ಆದರೆ ವಾಕ್ಯ ನಿರ್ಮಾಣ ಮಾಡಲಾರದೇ ಹೋಗುತ್ತಿದ್ದೇನೆ.

ನಿಮ್ಮಿಂದ, ನಿಮ್ಮ ಗ್ರಂಥಗಳಿಂದ ಯಾವುದು ಸರಿಯಾದುದೋ, ಯಾವುದು ಸರಿಯಲ್ಲವೋ ತಿಳಿದುಕೊಂಡು ಶಾಂತವನ್ನು ಹೊಂದಿ, ವಿತಂಡವಾದಗಳನ್ನು ಬಿಟ್ಟು ಜ್ಞಾನಿಗಳ ಉಪದೇಶಗಳಿಂದ ಸಾಧನೆ ನಿರಂತರವಾಗಿ

ನಡೆಯುವಹಾಗೆ ಪ್ರಯತ್ನ ಮಾಡುತ್ತಿದ್ದೇನೆ. ಇದರಲ್ಲಿ ವಾಕ್ಯ ನಿರ್ಮಾಣದಲ್ಲಿ ತಪ್ಪುಗಳಿದ್ದರೆ ಕ್ಷಮಿಸಿರಿ...

ಧನ್ಯವಾದಗಳು...

ಇಂತಿ,
ನಿಮ್ಮ ವಿಧೇಯ,
ಸಿ. ಯೋಗೀಂಧರ್

*****

**ವಿಶ್ವನಾಥ್**
ತುಗ್ಗಲಿ.

ಪ್ರಪಂಚದಲ್ಲಿ ಜೀವಿಸುತ್ತಿರುವ ಪ್ರತಿಯೊಂದು ಜೀವರಾಶಿಗೂ ಸಂಬಂಧಿಸಿ ದಂತಹಾ ಎಷ್ಟೋ ಜ್ಞಾನವನ್ನು, ಈ ಜ್ಞಾನದಿಂದ ಕರ್ಮಗಳನ್ನು ಸುಟ್ಟುಹಾಕುವ ವಿಧಾನವಿದೆಯೆಂಬ ಸತ್ಯವನ್ನು ತಿಳಿಸುತ್ತಾ ಮುಖ್ಯವಾಗಿ ಅಜ್ಞಾನದಲ್ಲಿ ಇರುವ ಜನರಿಗೆ ಜ್ಞಾನದ ಬೆಳಕನ್ನು ಪ್ರಸಾದಿಸುತ್ತಿರುವಂತಹ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಪಾದಪದ್ಮಗಳಿಗೆ ನಮಸ್ಕರಿಸುತ್ತಾ ಬರೆಯುವುದು.

ದೇವರು ಎಂದಾಗಲಿ, ಜ್ಞಾನ ಎಂದಾಗಲಿ ನನಗೆ ಏನೂ ತಿಳಿಯದು. ಎಲ್ಲಿ ಆಗಲಿ ವಿಗ್ರಹಾರಾಧನೆ ಅಥವಾ ಕೈ ಮುಗಿಯುವಂತವುಗಳನ್ನು ಸಹ ಮಾಡುವವನಲ್ಲ. ಎಲ್ಲ ನಾವು ಮಾಡಿದರೇನೆ ಕೆಲಸಗಳು ನಡೆಯುತ್ತವೆಂದೂ, ಇವೆಲ್ಲವನ್ನೂ ಯಾರೂ ಪ್ರತ್ಯೇಕಿಸಿ ಮಾಡಿ ಇಡುವುದಿಲ್ಲ ಅಂದುಕೊಳ್ಳುತ್ತಿದ್ದೆನು. ನಮ್ಮ ಕುಟುಂಬದಲ್ಲಿರುವವರೆಲ್ಲರು ದೇವರು ಇದ್ದಾನೆಂದು ಕನಿಷ್ಟ ಯಾವಾಗಲೊ ಒಂದುಸಾರಿ ಕೂಡ ಪೂಜೆಗಳು ಮಾಡದೇ ಹೋದರೆ ಹೇಗೆ ಅನ್ನುತ್ತಿದ್ದರು.

ದೇವರೇ ಇಲ್ಲ ಎಂದು ಇಷ್ಟು ಅಜ್ಞಾನದಲ್ಲಿರುವ ನನಗೆ ಇಷ್ಟು ಬೇಗನೇ ಎಷ್ಟೋ ಬೆಲೆಯುಳ್ಳಂತಹ ಜ್ಞಾನ ತಿಳಿದುಕೊಳ್ಳುವುದಕ್ಕೆ ಅರ್ಹತೆ ಪಡೆದಿರುವುದಕ್ಕೆ ಬಹಳ ಆನಂದವಾಗಿ ಇದೆ.

ಮೊಟ್ಟಮೊದಲ ಬಾರಿ ಜ್ಞಾನವೆನ್ನುವ ದಾರಿಯೊಳಕ್ಕೆ ಪ್ರಯಾಣಮಾಡಿರುವುದು ತ್ರೈತಸಿದ್ಧಾಂತದಿಂದಲೇ. ನಮ್ಮ ತಂದೆ ತ್ರೈತ ಸಿದ್ಧಾಂತ ಭಗವದ್ಗೀತ ಗ್ರಂಥವನ್ನು ತಂದುಕೊಂಡಿದ್ದಾನೆ. ಈ ಗ್ರಂಥ ಬಹಳ ಅರ್ಥದಿಂದ ತುಂಬಿಕೊಂಡಿದೆಯೆಂದು ಹೇಳಿದ್ದಾನೆ. ಆಗ ಆ ಗ್ರಂಥವನ್ನು ತೆಗೆದು ನೋಡಿ ಏನು ಭಗವದ್ಗೀತೆಯೋ ಏನೋ ಎಂದು ಟೈಮ್‌ಪಾಸ್ ಮಾಡುವುದಕ್ಕೆ ಸ್ವಲ್ಪ ನೋಡಿದ್ದೇನೆ! ಟೈಮ್‌ಪಾಸ್‌ಗಾಗಿ ನೋಡಿದ ಆ ಗೀತೆಯೇ ನನ್ನ ಹಣೆಬರಹವನ್ನು ಬದಲಾಯಿಸುವುದೆಂದು ಆಗ ತಿಳಿದಿದೆ.

ಮುಖ್ಯವಾಗಿ ಶ್ರೀಶ್ರೀಶ್ರೀ ಯೋಗೀಶ್ವರರು ಹೇಳಿದ ವಿಷಯದಲ್ಲಿ ಒಂದು ಸಂತೋಷ ಬೇರೆ ಆನಂದ ಬೇರೆ ಎಂದು. ಆ ವಿಷಯ ಅವರವರ ಅನುಭವಕ್ಕೆ ಮಾತ್ರವೇ ತಿಳಿಯುತ್ತದೆಂದಿದ್ದಾರೆ. ಪ್ರಪಂಚ ವಿಷಯದಿಂದ ಉಂಟಾಗುವುದು ಸಂತೋಷ, ಜ್ಞಾನ ವಿಷಯದಲ್ಲಿ ಜೀವಿಗೆ ಉಂಟಾಗುವುದು ಆನಂದ.

ಈ ಆನಂದ ವಿಷಯದಲ್ಲಿ ನನ್ನ ಅನುಭವಕ್ಕೆ ಬಂದಿರುವಂತಹ ಗೀತಾ ಶ್ಲೋಕಗಳಲ್ಲಿ ಒಂದು

**ಶ್ಲೋ॥ ಅಪಿಚೇನಸಿ ಪಾಪೇಭ್ಯ ಸ್ಸರೇಭ್ಯಂ ಪಾಪಕೃತ್ತಮಂ**
**ಸರ್ವಂ ಜ್ಞಾನಪ್ಲವೇನೈನ ವುಜನಂ ಸಂತರಿಷ್ಯಸಿ.**

**ಭಾವಾರ್ಥ :–** ಅಖಿಲ ಪಾಪಾತ್ಮರಲ್ಲಿ ನೀನೆಷ್ಟು ಅಧಮ ಪಾಪಹಿತನಾದರಾಗಲಿ ಪಾಪವೆನ್ನುವ ಸಮುದ್ರವನ್ನು ಜ್ಞಾನವೆನ್ನುವ ಚಿಕ್ಕ ಹಡಗಿನಿಂದ ದಾಟಬಲ್ಲೆ ಎಂದು ತಿಳಿದು ಬಂದಿದೆ.

ಇಂತಹ ಮೂರ್ಖರಾದ ನಮಗೆ ಅಣುಅಣುವಿನಲ್ಲಿ ವ್ಯಾಪಿಸಿದ ದೇವರು ಇಂತಹ ಸುಲಭ ವಿಧಾನವನ್ನು ತಿಳಿಸಿದ್ದಾನಲ್ಲವೆ! ಎಂದು ಜೀವಾತ್ಮನಾಗಿರುವ ನನಗೆ ಆನಂದವೆಂದರೆ ಇದು ಎಂದು ತಿಳಿದಿದೆ. ಎಲ್ಲಾ ನಾನೇ ಎಂದುಕೊಳ್ಳುವ ನನಗೆ ನೀನು ಬೇರೆ, ನಿನ್ನ ಶರೀರ ಬೇರೆ ಅದರಲ್ಲಿ ನಿನ್ನನ್ನು ನಡೆಸುವವರು ಬೇರೆ ಎಂದು ಈ ಜ್ಞಾನದೊಳಗೆ ಬರುವುದರಿಂದಲೇ ತಿಳಿದುಕೊಂಡಿದ್ದೇನೆ. ಜ್ಞಾನ ವಿಷಯದಲ್ಲಿ ಹಿಂದುಳಿದ ನಮಗೆ ಗುತ್ತಿಯಲ್ಲಿ ಪ್ರತಿ ಭಾನುವಾರ ಶಂಕರಣ್ಣ ಮತ್ತು ಆದಿಶೇಷಯ್ಯ ಸಾರ್‌ಅವರು ಜ್ಞಾನ ವಿಷಯದಲ್ಲಿ ಮುಂದಕ್ಕೆ ಹೋಗುವುದಕ್ಕೆ ಸಹಕರಿಸುತ್ತಿದ್ದಕ್ಕೆ ಬಹಳ ಆನಂದವಾಗಿದೆ.

ಇಂತಿ

ಪ್ರಸ್ತುತ ಈ ಶರೀರದ ಹೆಸರು ವಿಶ್ವನಾಥ್. ಇದರಲ್ಲಿ ನಿವಾಸವಿದ್ದ ಜೀವಾತ್ಮ ಆದ ನನ್ನನ್ನು ನನ್ನ ಪಕ್ಕದವನು ಯಾವಾಗಲೂ ಜ್ಞಾನ ಮಾರ್ಗದಲ್ಲಿ ಪ್ರಯಾಣಿಸುವ ಹಾಗೆ ಮಾಡೆಂದು ಕೋರಿಕೊಳ್ಳುತ್ತಾ ಇಲ್ಲಿಗೆ ಮುಗಿಸುತ್ತಿದ್ದೇನೆ.

*****

**ಕೆ.ಷೇಕ್ಷಾವಲಿ**

ಗುತ್ತಿ.

ಪೂಜ್ಯರು (ಗೌರವಾನ್ವಿತರು)

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರವರಿಗೆ

ನಿಮ್ಮ ಪಾದಪದ್ಮಗಳಿಗೆ ಸವಿನಯವಾಗಿ ನಮಸ್ಕರಿಸಿ ಬರೆಯುವುದು.

ಕೆ. ಷೇಕ್ಷಾವಲಿ ಎನ್ನುವ ನಾನು ಗುತ್ತಿ ಗ್ರಾಮದ ವ್ಯಕ್ತಿ. ನಾನು ಅಂದುಕೊಳ್ಳದಂತೆ ಒಂದು ದಿನ ಶ್ರೀ ಆದಿಶೇಷಯ್ಯ (ಟೀಚರ್) ಅವರ ಮನೆಯಲ್ಲಿ ಸತ್ಸಂಗಕ್ಕೆ ಹಾಜರಾಗುವುದು ನಡೆದಿದೆ. ನಂತರ ಕ್ರಮತಪ್ಪದೆ ಹಾಜರಾಗುತ್ತಾ ಬರುವುದು ನಡೆದಿದೆ.

17–11–2013 ಪೌರ್ಣಮಿ ದಿನಾಂಕ ನಾನು ನಿಮ್ಮ ಮಂದಿರಕ್ಕೆ ಬಂದು ನಿಮ್ಮ ಅಮೂಲ್ಯ ಪ್ರಸಂಗವನ್ನು ಕೇಳಿ ನಿಮ್ಮನ್ನು ಭೇಟಿಮಾಡುವುದು ಸಹ ನಡೆದಿದೆ.

ನಾನು ಪ್ರತಿ ಮತವನ್ನು, ಅವರ ಪವಿತ್ರ ಗ್ರಂಥಗಳನ್ನು ಗೌರವಿಸುತ್ತೇನೆ. ನೀವು ರಚಿಸಿದ ಕೆಲವು ಗ್ರಂಥಗಳೂ ಸಹ ಓದುತ್ತಿದ್ದೇನೆ. ಎಲ್ಲ ಮತಗಳ ಸಾರವನ್ನು ನಿಮ್ಮ ಗ್ರಂಥಗಳಿಂದ ಎಂತಹ ತಪ್ಪು, ವಿರುದ್ಧ ಅರ್ಥವಿಲ್ಲದೆ ತಿಳಿದುಕೊಳ್ಳುವುದು ನಡೆಯುತ್ತಿದೆ. ನಮ್ಮ ತಾಯಿ, ನನ್ನ ಹೆಂಡತಿ ಸಹ ನಿಮ್ಮ ಗ್ರಂಥಗಳನ್ನು ಓದುತ್ತಿದ್ದಾರೆ.

ದೇವರು ಒಬ್ಬನೇ ಎಂದು, ಅದು ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾ ಗಲಿ, ಖುರ್‌ಆನ್‌ನಲ್ಲಾಗಲಿ ಇದೆಯೆಂದು ನನ್ನ ನಂಬಿಕೆ. ಮತ ಎನ್ನುವುದು ಮನುಷ್ಯರ ನಡುವೆ ಅಡ್ಡಗೋಡೆಯಂತೆ ನಿಂತರೆ, ತ್ರೈತ ಸಿದ್ಧಾಂತದ ಪ್ರಕಾರ ಎಲ್ಲ ಮತಗಳ ಸಾರಾಂಶ ಒಂದೇ ಎಂದು ನಿಮ್ಮಿಂದ ಈದಿನ ಎಷ್ಟೋ ಜನರಿಗೆ ತಿಳಿಯುತ್ತಿದೆ.

ಭವಿಷ್ಯತ್ತಿನಲ್ಲಿ ನಿಮ್ಮಿಂದ ತಿಳಿಯುತ್ತಿರುವ ಜ್ಞಾನವನ್ನು ಪ್ರತಿಯೊಬ್ಬರು ತಿಳಿದುಕೊಳ್ಳಬೇಕೆಂದು, ಮತವೆನ್ನುವ ಮುಸುಗಿನಲ್ಲಿ ಮುಚ್ಚಲ್ಪಟ್ಟು ಮೂಢರಲ್ಲಿ ಮೂಢರಾಗಿ ಕರ್ಮಚಕ್ರದಲ್ಲಿ ನರಳುವ ಬಹಳ ಜನ ಅಜ್ಞಾನರಿಗೆ ತ್ರೈತ ಸಿದ್ಧಾಂತದಿಂದ ಮೋಕ್ಷ ಉಂಟಾಗುವ ದಿನ ಆದಷ್ಟು ಬೇಗನೇ ಬರಬೇಕೆಂದು ನನ್ನ ಪ್ರಾರ್ಥನೆ.

ನಿಮ್ಮ ಗ್ರಂಥಗಳನ್ನು ಓದುವುದು ನನ್ನ ಅದೃಷ್ಟ ಎಂದು ಭಾವಿಸುತ್ತಿದ್ದೇನೆ. ನನ್ನೊಂದಿಗೆ ಮತ್ತೆ ಕೆಲವರಿಗೆ ಈ ಅದೃಷ್ಟವನ್ನು ಒದಗಿಸುವುದಕ್ಕೆ ನನ್ನ ಶಕ್ತಿ ಮೀರಿ ಪ್ರಯತ್ನಿಸುತ್ತೇನೆ.

ಇಂತಿ

ಕೆ. ಷೇಕ್ಷಾವಲಿ

*****

**ಮೇಕಲ ಚಿನ್ನಬಾಲಯ್ಯ**

ಓಂ ತ್ರೈತ ಸಿದ್ಧಾಂತ ಆದಿಕರ್ತ, ಸಂಚಲನಾತ್ಮಕ ರಚಯಿತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಗೌರವಾನ್ವಿತರು, ಪೂಜ್ಯರಾದ ಸ್ವಾಮಿ ಅವರಿಗೆ,

ಹಲವು ಜನ್ಮಗಳಿಂದ ಬಂದಿರುವ ನನ್ನ ಶರೀರದ ಹೆಸರು ಮೇಕಲ ಚಿನ್ನಬಾಲಯ್ಯ. ನಾನು ಮೊಟ್ಟಮೊದಲನೆ ಬಾರಿ ನಿಮ್ಮ ಗ್ರಂಥಗಳು ಓದುವುದಕ್ಕೆ ಪ್ರೇರೇಪಿಸಿದ ಮತ್ತು ಪರಿಚಯ ಮಾಡಿರುವ ಗುತ್ತಿ ಶಾಖೆಯಿಂದ ಬರುವ ಶ್ರೀ ಆದಿಶೇಷಯ್ಯ ಮತ್ತು ಶ್ರೀ ಚಕ್ರಿನಾಯಕ್‌ರವರಿಗೆ ಕೃತಜ್ಞತೆಗಳನ್ನು ತಿಳಿಸುತ್ತಿದ್ದೇನೆ. ಆ ನಂತರ ನಾನು ನೀವು ರಚಿಸಿದ ಮೊದಲನೆ ಗ್ರಂಥ "ಜನನ ಮರಣ ಸಿದ್ಧಾಂತ"ವನ್ನು ತೆಗೆದುಕೊಂಡು ಓದುವುದು ನಡೆದಿದೆ. ಆ ಗ್ರಂಥದಲ್ಲಿ ನೀವು ಜನನವನ್ನು ಕುರಿತು ವಿವರಿಸಿದ ವಿಧಾನ ಓದಿದ ಮೇಲೆ ಇದು ಯಾರೋ ಡಾಕ್ಟರ್‌ಗಳು, ಸೈಂಟಿಸ್ಟ್‌ಗಳು ಬರೆದಿರುವುದು ಅಲ್ಲ. ಇದರಲ್ಲಿನ ವಿಷಯಗಳು ಯಾವುದೋ ಶಕ್ತಿ ಯಿಂದ ಹೊರಬಂದಿರುವವೆನ್ನುವ ಆಲೋಚನೆ ಬರುವುದು ನಡೆದಿದೆ. ಆ ನಂತರ ಮರಣ ಹೇಗೆ ಸಂಭವಿಸುತ್ತದೋ, ಮರಣದಲ್ಲಿನ ವಿಧಗಳು ಓದಿದ ನಂತರ ಮಹಾ ಅದ್ಭುತವಾಗಿ ಅನಿಸಿತು. ಮತ್ತೆ ನಾನು **"ದೆವ್ವಗಳ-ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥ ಪಠಿಸುವು ದರಿಂದ ಸೂಕ್ಷ್ಮ ಎಂದರೆ ಏನೋ? ಸ್ಥೂಲ ಎಂದರೆ ಏನೋ, ನಮ್ಮ ಶರೀರದಲ್ಲಿ ತಿಳಿದುಕೊಳ್ಳುವುದರಿಂದ, ಅಲ್ಲಿಯವರೆಗು ನಾನು ಸೈನ್ಸ್ ಹೆಚ್ಚಾಗಿ ನಂಬುವ ನಾನು, ದೆವ್ವ ಎಂದರೆ ಯಾರು? ದೇವರು ಎಂದರೆ ಯಾರು? ಅನ್ನುವ ವಿಷಯಗಳ ಬಗ್ಗೆ ಪೂರ್ತಿ ವಿವರ ತಿಳಿದುಕೊಳ್ಳುವುದು ನಡೆದಿದೆ.

ಆ ನಂತರ ಈ ಗ್ರಂಥಗಳು ರಚಿಸಿದ ಯೋಗೀಶ್ವರರು ಎಲ್ಲಿ ಇರುತ್ತಾರೆ? ಹೇಗೆ ಇರುತ್ತಾರೆ? ಅನ್ನುವ ಪ್ರಶ್ನೆಗಳು ಬರುವುದು ತಿಳಿದುಕೊಳ್ಳುವುದು ಜರುಗಿದ ನಂತರ ನಿಮ್ಮ ಆಶ್ರಮ ಮತ್ತು ನೀವು ಕೊಡುವ (ಪ್ರತಿ ತಿಂಗಳ ಪೌರ್ಣಮಿ) ಜ್ಞಾನ ಸಂದೇಶಕ್ಕೆ ಬರಬೇಕೆನ್ನುವ ಕೋರಿಕೆ ಉಂಟಾಗುವುದು ನಡೆದಿದೆ. ಆ ನಂತರ ಅಲ್ಲಿಗೆ ಬರುವುದಕ್ಕೆ ಸಾದ್ಯವಾಗದಿರುವುದರಿಂದ "ಪ್ರಬೋಧ ಸೇವಾ

ಸಮಿತಿ"ಗೆ ನನ್ನ ಪರವಾಗಿ 300 ರೂಪಾಯಿಗಳನ್ನು ಕೊಟ್ಟು ಸಭ್ಯನಾಗಿ ಸೇರಿದ ನಂತರದ ತಿಂಗಳಿಗೆ ನಿಮ್ಮೊಂದರ ದರ್ಶನ ಭಾಗ್ಯ ಮತ್ತು ಜ್ಞಾನ ಸಂದೇಶ (ದಶ–ದಿಕ್ಕುಗಳು) ಕೇಳುವುದು ನಡೆದಿದೆ.

ನನಗೆ ಊಹೆ ತಿಳಿದಾಗಿನಿಂದ ದೇವರು, ದೆವ್ವದ ಮೇಲೆ ಅನೇಕ ಅಪೋಹಗಳು, ಸಂದೇಹಗಳು ಇದ್ದವು. ನಿಮ್ಮ ಗ್ರಂಥಗಳನ್ನು ಓದುವುದರಿಂದ ನಿಜವಾಗಿಯೇ ದೇವರು ಇದ್ದಾನೆಂದು, ದೆವ್ವ ಸಹ ಇದೆಯೆಂದು ನಾನು ನಡೆದುಕೊಳ್ಳುವ, ಪೂಜಿಸುವ, ಆರಾಧಿಸುವ ದೇವರುಗಳೆಲ್ಲಾ "ದೇವತೆಗಳು" ಅನ್ನುವ ನಂಬಿಕೆ ಧೃಢವಾಗಿ ಬಂದಿತು. ನೀವು ರಚಿಸಿದ ಮತ್ತು ವಿವರಿಸಿದ ಗ್ರಂಥವಾದ "ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು"ಲ್ಲಿ ಮಳೆ ಹೇಗೆ ಸುರಿಯುತ್ತದೆ. ನೀರು ಆವಿಯಾಗುವುದು ಯಾವಾಗ ನಡೆಯುತ್ತದೆ? ಬತ್ತಿಹೋಗುವುದು ಯಾವಾಗ ನಡೆಯುತ್ತದೆ? ಇದೆಲ್ಲಾ ಪಂಚ ಭೂತಗಳಲ್ಲಿನ ಉಪ ಭೂತಗಳಲ್ಲಿ ಒಬ್ಬರಾದ "ಮೇಘಗಳ" ಕೆಲಸ ಎಂದು ಓದಿದ ನಂತರ ಪ್ರಸ್ತುತ ಸೈನ್ಸ್ ಉಪಾಧ್ಯಾಯನಾಗಿರುವ ನನಗೆ ಬಹಳ ಆಶ್ಚರ್ಯ ಉಂಟಾಗಿ ಅದರಲ್ಲಿನ ಸತ್ಯಕ್ಕೆ, ಅಲ್ಲಿಯವರೆಗೂ ಸಮುದ್ರಗಳಲ್ಲಿ ನೀರು ಆವಿಯಾಗಿ ಮೇಘಗಳಾಗಿ ಬದಲಾಗಿ ತಂಪಾದ ನಂತರ ಮಳೆಗಳು ಸುರಿಯುತ್ತವೆ ಯೆಂದು ವಿದ್ಯಾರ್ಥಿಗಳಿಗೆ ಹೇಳುವ ನನಗೆ ದಿಕ್ಕುತೋಚದ ಪರಿಸ್ಥಿತಿ ಎಂದು, ಇದರಲ್ಲಿನ ವಿಷಯಗಳು ಸೈನ್ಸ್‌ಗೇ ತಿಳಿಯದ "ಸೂಪರ್‌ಸೈನ್ಸ್" ಎಂದು ಅವಗತವಾಗುವುದು ನಡೆದಿದೆ.

ನನಗೆ ಕಳೆದ 10 ಸಂವತ್ಸರಗಳಿಂದ ಮದ್ಯವನ್ನು ಸೇವಿಸುವ ಅಭ್ಯಾಸವಿತ್ತು. (ಆಗಾಗ) ನಿಮ್ಮ ಗ್ರಂಥಗಳನ್ನು ಓದಿದ ನಂತರ ಆ ಮದ್ಯವನ್ನು ಸೇವಿಸುವುದನ್ನು ಕುರಿತು ಅಂದುಕೊಂಡರೇನೇ, ನನ್ನಲ್ಲಿ ತಿಳಿಯದೇ ನಡುಕ (ಭಯ) ಬಂದಂತೆ ಅನಿಸುವ ಭಾವನೆ ಉಂಟಾಗುತ್ತದೆ. ಏಕೆಂದರೆ ಮಿತ್ರದ್ರೋಹ, ನಂಬಿಕೆ ದ್ರೋಹವಾದರೂ ಮಾಡಬಹುದೇನೋ ಆದರೆ "ಆತ್ಮದ್ರೋಹ" ಮಾಡಬಾರದು. ಈ ಜನ್ಮದಲ್ಲಾದರೂ ಮತ್ತು ನನಗೆ ಉಂಟಾಗುವ ಅನೇಕ

ಜನ್ಮಗಳಲ್ಲಾದರೂ ಅನ್ನುವ ಭಾವನೆ ಮನಸ್ಸಿನಲ್ಲಿ ನಾಟಿಕೊಂಡು ಹೋಗುವುದು ನಡೆದಿದೆ. ನೀವು ರಚಿಸಿದ "ತ್ರೈತಾರಾಧನೆ" ಗ್ರಂಥದಲ್ಲಿ "ನಿನ್ನ ಮುಖದಲ್ಲಿ ನಾಮ, ಬೊಟ್ಟುಗಿಂತ ಆದಿ, ಸೋಮ, ಮಂಗಳ ವಾರಗಳಲ್ಲಿ ಮಾಡುವ ಆರಾಧನೆಯೇ ಮುಖ್ಯವೆಂದು, ನಿಜವಾದ ಇಂದೂ ಎಂದು ತಿಳಿಸುವುದು ಮತ್ತು ಆದಿವಾರ ಸೃಷ್ಠಿಗೆ ಗುರುತಾದ ಸೂರ್ಯ ಭಗವಾನನನ್ನು, ಸೋಮವಾರ ಜ್ಞಾನಕ್ಕೆ ಚಿಹ್ನೆಯಾದ ಚಂದ್ರನಿಗೆ, ಮಂಗಳವಾರ ಮೋಕ್ಷಕ್ಕೆ ಮಾರ್ಗವಾದ ನಕ್ಷತ್ರ (ನಛತ್ರ–ಛತ್ರ ಇಲ್ಲದವನು) ವನ್ನು ಆರಾಧಿಸೆಂದು ಹೇಳಿದ ವಿಷಯ, ಪೂರ್ವಜರು ಪಾಟಿಸಿದ್ದಾರೆ. ಈಗ ಹಿಂದುಗಳಾ (ಅಜ್ಞಾನಿಗಳಾ)ಗಿ ಬದಲಾಗಿ ಪಾಟಿಸುತ್ತಿಲ್ಲವೆಂದು ಹೇಳಿದ ವಿಷಯ ನೋಡುತ್ತಿದ್ದರೆ ನಿಜವಾಗಿ ಆ ದೇವದೇವರೇ ಇಳಿದುಬಂದು ಜ್ಞಾನ ಸಂದೇಶವನ್ನು ಕೊಡುತ್ತಿದ್ದಾನೆನ್ನುವ ಸಂದೇಹ ಉಂಟಾಗುತ್ತಿದೆ. ಯಾವುದು ಏನಾದರೂ ಇಂದಿಗಾದರೂ ದೇವರ ಜ್ಞಾನದೊಳಗೆ ಹೆಜ್ಜೆ ಇಡುವುದಕ್ಕೆ ನನಗೆ ದ್ವಾರವನ್ನು ಏರ್ಪಾಟು ಮಾಡಿರುವ ನಿಮ್ಮೊಂದರ ಗ್ರಂಥಗಳಿಗೆ ನನ್ನ ಶತಕೋಟಿ ವಂದನೆಗಳು ತಿಳಿಸಿಕೊಳ್ಳುತ್ತಿದ್ದೇನೆ. ಹಾಗೇ "ಇಂದೂ ಸಾಂಪ್ರದಾಯಗಳು" ಅನ್ನುವ ಗ್ರಂಥ ಪಠಿಸುವಾಗ ಮದುವೆ ಅನ್ನುವ ಸಾಂಪ್ರದಾಯ ಪೂರ್ವ ಹೇಗೆ ಇರುತ್ತಿತ್ತು ಈಗ ಹೇಗೆ ಭ್ರಷ್ಟವಾಗಿ ಹೋಗಿದೆ ಅನ್ನುವ ಜ್ಞಾನ ಮಹಾ ಅದ್ಭುತವಾಗಿ ತೋಚಿತು. ನಿಜವಾಗಿ ನನಗೆ ಈ ಜ್ಞಾನ ತಿಳಿದ ನಂತರ ಮದುವೆ ನಡೆಯದಂತೆ ಇದ್ದಿದ್ದರೆ ಇಂದೂ ಸಾಂಪ್ರದಾಯಬದ್ಧವಾಗಿ ಮಾಡಿಕೊಂಡು ಆ ದೇವದೇವರ ಜ್ಞಾನ ಇನ್ನೂ ಮೆರಗುಗೊಳಿಸಿಕೊಳ್ಳುತ್ತಿದ್ದೆನು.

ಈಗ ನನ್ನ ವಯಸ್ಸು 32 ವರ್ಷಗಳು. ಇಲ್ಲಿಯವರೆಗು ನಮಗೆ ಸ್ಪಂದಿಸುತ್ತಿರುವ ಇತಿಹಾಸಗಳು ಆದ ರಾಮಾಯಣ, ಮಹಾಭಾರತ, ಭಾಗವತ ಯಾವ ಗ್ರಂಥಗಳೂ ಓದಲಿಲ್ಲ. ಆದರೆ ನನಗೆ ಮೊಟ್ಟಮೊದಲ ಬಾರಿ ಅಸಲಾದ, ವಿಶ್ವವನ್ನು ಸೃಷ್ಠಿಸಿದ ಪರಮಾತ್ಮ ಜ್ಞಾನ ಆದಿನ "ಶ್ರೀಕೃಷ್ಣ" ಭಗವಂತನು (ದೇವರು) ಹೇಳಿದ 'ಭಗವದ್ಗೀತೆಯ'ನ್ನು ಈ ದಿನ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ

ಯೋಗೀಶ್ವರರಾದ ನೀವು ರಚಿಸಿದ "ತ್ರೈತ ಸಿದ್ಧಾಂತ ಭಗವದ್ಗೀತೆ" ರೂಪದಲ್ಲಿ ಓದುವ ಭಾಗ್ಯ ಪಡೆದಿರುವುದಕ್ಕೆ ನನಗೆ ನಾನು ಮಾಡಿಕೊಂಡ 'ಪೂರ್ವಜನ್ಮ ಸುಕೃತವೇ' ಅನ್ನುವ ಭಾವನೆ ನನ್ನಲ್ಲಿ ಮುದ್ರಿಸಲ್ಪಟ್ಟಿದೆ. ಏಕೆಂದರೇ ಉಳಿದ ಗ್ರಂಥಗಳು ಓದಿದ್ದರೆ ನೀವು ಹೇಳುವವುಗಳನ್ನು ನಂಬುವುದಕ್ಕೆ ನನಗೆ ಬಹಳ ಸಮಯ ಬೇಕಾಗುತ್ತಿತ್ತು. ನಾನು ಮೊದಲು ನಿಮ್ಮೊಂದರ ಗ್ರಂಥಗಳು ಓದಿದ ತಿಂಗಳಿಗೇ ಇದೇ ನಿಜವಾದ ದೇವರ ಜ್ಞಾನವೆಂದೂ, ಈ ಜ್ಞಾನ ಪ್ರಚಾರ ಮಾಡುವುದರಿಂದ ಪ್ರತ್ಯಕ್ಷವಾಗಿ ದೇವರ ಸೇವೆಯಲ್ಲಿ ಇದ್ದಹಾಗೇ ಅನ್ನುವ ಭಾವನೆ ಉಂಟಾಗುವುದು ನಡೆದಿದೆ.

ನಿಜವಾದ ದೇವರ ಸೇವೆಯೆಂದರೆ ಯಜ್ಞಗಳು, ಯಾಗಗಳು, ವೇದಾದ್ಯಯನ ಅಲ್ಲವೆಂದು "ದೇವರ ಧರ್ಮಗಳು ಪ್ರಚಾರ ಮಾಡುವುದೇ" ಎಂದು ನಿಮ್ಮ ಗ್ರಂಥಗಳಿಂದ ತಿಳಿದುಕೊಳ್ಳುವುದು ನಡೆದಿದೆ. ಈಗಿನಿಂದ ನಾನು ಖರ್ಚುಮಾಡುವ ಅನ್ಯದೇವತಾರಾಧನೆ, ಪೂಜೆಗಳಿಗೆ, ದಾನಗಳು ಕೊಡುವ ಹಣವೆಲ್ಲಾ ದೇವರ ಜ್ಞಾನ ಪ್ರಚಾರಕ್ಕೇ ವಿನಿಯೋಗಿಸಿ ಮತ್ತೆ ಕೆಲವರನ್ನು "ಇಂದೂಗಳಾ"ಗಿ ಬದಲಾಯಿಸುವುದಕ್ಕೆ ನನ್ನ ಸರ್ವಶಕ್ತಿಯಿಂದ ಕೃಷಿ ಮಾಡುತ್ತೇನೆಂದು ಮನವಿ ಮಾಡಿಕೊಳ್ಳುತ್ತಿದ್ದೇನೆ. ಹೀಗೆ ಬರೆದುಕೊಳ್ಳುತ್ತಾ ಹೋದರೆ ನೀವು ರಚಿಸಿದ ಪ್ರತಿ ಗ್ರಂಥ ಒಂದು ಆಣಿಮುತ್ತು! ಒಂದು ವಜ್ರ!! ಅದರಲ್ಲಿನ ವಿಷಯಗಳು ಚರ್ಚಿಸಿಕೊಳ್ಳುತ್ತಾ ಹೋದರೆ ನನಗೆ ಎಷ್ಟೋ ಪುಟಗಳು ಬೇಕು. ಆದ್ದರಿಂದ ನನಗೆ ನಿಮ್ಮೊಂದರ ಗ್ರಂಥಗಳ ಮೇಲೆ, ಆತ್ಮ ಸಂದೇಶಗಳ ಮೇಲೆ ಪತ್ರ ಬರೆಯುವುದಕ್ಕೆ, ನನ್ನಲ್ಲಿನ ಭಾವಗಳನ್ನು ಸ್ವೇಚ್ಛವಾಗಿ ಹೊರಗೆ ಹೇಳಿಕೊಳ್ಳುವುದಕ್ಕೆ ಅವಕಾಶ ಕಲ್ಪಿಸಿದ ನಿಮಗೆ ಶತಕೋಟಿ ವಂದನೆಗಳು ತಿಳಿಸಿಕೊಳ್ಳುತ್ತಾ ಮುಗಿಸುತ್ತಿದ್ದೇನೆ.

ಇಂತಿ

ಮೇಕಲ ಚಿನ್ನಬಾಲಯ್ಯ

*****

**ಯಂ. ಮದ್ದಿಲೇಟಿ**

ಗುತ್ತಿ.

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಪಾದ ಪದ್ಮಗಳಿಗೆ ನಮಸ್ಕಾರಗಳು

"ಜ್ಞಾನ" ಎಂದರೆ ತಿಳಿದುಕೊಳ್ಳುವುದು ಎಂದು ಅರ್ಥ. ಜ್ಞಾನ ಈ ಧರಣಿಯಲ್ಲಿ ಎರಡು ವಿಧಗಳಾಗಿ ಇದೆ. ಒಂದು ಪ್ರಾಪಂಚಿಕ ಜ್ಞಾನ, ಎರಡು ಬ್ರಹ್ಮ ಜ್ಞಾನ. ಮೇಲಿನ ಎರಡರಲ್ಲಿ ಮೊದಲನೆಯದು ಅಂದರೆ ಪ್ರಾಪಂಚಿಕ ಜ್ಞಾನ ಬಹಳ ಜನರಿಗೆ ತಿಳಿದಿದೆ ಆದರೆ ಬ್ರಹ್ಮಜ್ಞಾನ ಬಹಳ ಜನರಿಗೆ ತಿಳಿದಿಲ್ಲ, ಪಂಡಿತರು, ಗುರುಗಳೆಂದು ಹೇಳಿಕೊಳ್ಳುತ್ತಿರುವವರಿಗೂ ಸಹ ಬ್ರಹ್ಮಜ್ಞಾನ ಆಳವಾಗಿ ತಿಳಿಯದು. ಇದರಿಂದ ಬಹಳ ಜನರಿಗೆ ಬ್ರಹ್ಮಜ್ಞಾನ ತಿಳಿಯದ ಒಂದು ಜಡ ಪದಾರ್ಥವಾಗಿ ಉಳಿದುಹೋಗಿದೆ. ಇದರ ರಹಸ್ಯ ತಿಳಿದುಕೊಳ್ಳುವವರು ಬಹಳ ಅಪರೂಪವಾಗಿ ಇದ್ದಾರೆ. ಆದ್ದರಿಂದ ಈ ರಹಸ್ಯವನ್ನು ತಿಳಿದುಕೊಳ್ಳಲು ಯಾರೂ ಪ್ರಯತ್ನಿಸುತ್ತಿಲ್ಲ. ಏಕೆಂದರೆ! ಈ ರಹಸ್ಯ ಬಿಚ್ಚಿ ಹೇಳುವವರು ದೊರಕದಂತಿರುವು ದರಿಂದ ಈ ಜ್ಞಾನ ಮುಡಿ ಬಿಚ್ಚದ ಮೂಟೆಯಂತೆ ಇದೆ. ಮುಡಿ ಬಿಚ್ಚದ ಮೂಟೆಯಲ್ಲಿ ಏನೋ ಇದೆಯೆಂದು ಯಾರಿಗೆ ಅವರು ಊಹಿಸಿಕೊಂಡು ಹೇಳಿಕೊಳ್ಳುತ್ತಿದ್ದಾರೆ. ಇದರಿಂದ ಬ್ರಹ್ಮಜ್ಞಾನ ತಿಳಿಯದ ಒಂದು ನಿಗೂಢವಾದ ರಹಸ್ಯವಾಗಿ ಇದೆ. ಧನರಾಶಿಗಳಿದ್ದರೂ ಲೋಭಿ ತನ್ನ ಧನವನ್ನು ವಿನಿಯೋಗಿ ಸುವುದಕ್ಕೆ ಹೇಗೆ ಸಮ್ಮತಿಸುವುದಿಲ್ಲವೋ ಅದೇ ವಿಧವಾಗಿ ಬ್ರಹ್ಮಜ್ಞಾನ ಅರ್ಥ ತಿಳಿಯದೆ ಉಳಿದುಹೋಗಿದೆ.

ಅಂಧನಾದ ಮನುಷ್ಯ ಪ್ರಕೃತಿ ಸೌಂದರ್ಯವನ್ನು ಯಾವ ವಿಧವಾಗಿಯೂ ನೋಡಲಾರನು. ಭಗವಂತನ ಜ್ಞಾನವೂ ಸಹ ಮರೆಯಲ್ಲಿ ಬಿದ್ದು ಹೋಗಿದೆ. ಈ ವಿಧವಾಗಿ ಅಸಲು ಸಿಸಲಾದ ದೇವರ ಇರುವಿಕೆ ಪ್ರಶ್ನಾರ್ಥಕವಾಗಿ ಬದಲಾಗಿದೆ. ಇದರಿಂದ ಪ್ರಜೆಗಳು ಮೂಢ ನಂಬಿಕೆಗಳ ಸುಳಿಗುಂಡದಲ್ಲಿ ಹೊದ್ದಾಡುತ್ತಿದ್ದಾರೆ. ಶಿಲೆಗಳಿಗೆ ಕೈಮುಗಿದು ಚಿತ್ತ ಕೆಡಿಸಿ

ಕೊಳ್ಳುತ್ತಿದ್ದಾರೆ. ಇಂತಹ ಸಮಯದಲ್ಲಿ ಅಸಲು ಸಿಸಲಾದ ದೇವರು ತಿಳಿಯದೆ ಪರ ಮತದೊಳಗೆ ಹೋಗುತ್ತಿದ್ದಾರೆ. ಅಲ್ಲಿಯೂ ಸಹ ದೇವರ ಮಾರ್ಗ ಪ್ರಶ್ನಾರ್ಥಕವಾಗಿ ಬದಲಾಗಿದೆ. ಮತ ಬದಲಾದರೂ, ದೇವರ ಪಥ ತಿಳಿಯದೆ ಅಸಲು ದೇವರು ಎಲ್ಲೂ ಇಲ್ಲವೆಂದು ಒಂದು ನಿರ್ವೇದದಲ್ಲಿ ಬಿದ್ದು ಹೋಗುತ್ತಿದ್ದಾರೆ.

ಇಂತಹ ಸಮಯದಲ್ಲಿ ಕತ್ತಲು ಆವರಿಸಿ ಅಜ್ಞಾನಾಂಧಕಾರದಲ್ಲಿ ಇರುವ ಭರತ ಭೂಮಿಗೆ ಜ್ಞಾನ ಸೂರ್ಯನಾಗಿ ಆವಿರ್ಭವಿಸಿದ್ದಾರೆ. ಜ್ಞಾನ ಪ್ರದಾತ, ತ್ರೈತ ಸಿದ್ಧಾಂತ ಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು. ನಿಜವಾದ ದೇವರ ಮಾರ್ಗ ತಿಳಿಸುವುದಕ್ಕೆ "ನಾನು" ಅವತರಿಸಿದ್ದೇನೆಂದು ಹೇಳಿ ಪರಮಾತ್ಮ ಮಾರ್ಗವನ್ನು ಪಂಡಿತರಿಗು, ಪಾಮರರಿಗು ಅರ್ಥವಾಗುವ ರೀತಿಯಲ್ಲಿ ಹೇಳುತ್ತಾ ನಿಜವಾದ ದೇವರು "ನಿರಾಕಾರನೆಂದು", ಆತನಿಗೆ ರೂಪ, ನಾಮ, ಕ್ರಿಯೆ ಇಲ್ಲವೆಂದು ಆತನು ಸರ್ವಾಂತರ್ಯಾಮಿ (omni present) ಎಂದು ಹೇಳುತ್ತಾ, ಸರ್ವ ಜೀವರಾಶಿಗಳಲ್ಲಿ ಆತನು ಇದ್ದಾನೆಂದು ಆತನು ತಿಳಿಸಿದ್ದಾರೆ. ಸರ್ವಮತಗಳ ಸಾರ "ಗೀತೆ"ಯಲ್ಲಿ ಇದೆಯೆಂದು ಗೀತೆಯನ್ನು ಪಠಿಸು! ಪರಮಾತ್ಮನನ್ನು ಸೇರಿಕೋ! ಎಂದು ತಿಳಿಸಿದ್ದಾನೆ. ಪ್ರಕೃತಿ, ಪರಮಾತ್ಮರು, ಸಕಲ ಜೀವರಾಶಿಗಳಿಗೆ ಜನನೀ ಜನಕರೆಂದು ಆತನು ಉದ್ಬೋಧಿಸಿದ್ದಾರೆ. ಭಗವದ್ಗೀತೆ ಪಠನದಿಂದ ದೇವರು ಹೇಳಿದ ಜ್ಞಾನ ಎಲ್ಲಾ ಅದರಲ್ಲಿ ಇದೆಯೆಂದು, ಗೀತೆಯನ್ನು ಪಠಿಸುವುದರಿಂದ ನಿನ್ನನ್ನು ನೀನು ತಿಳಿದುಕೊಳ್ಳುತ್ತೀಯೆಂದು ನಿನ್ನಲ್ಲಿನ ಜೀವಾತ್ಮ, ಆತ್ಮ, ಪರಮಾತ್ಮರನ್ನು ನೀನು ತಿಳಿದುಕೊಂಡರೇ ನಿನ್ನ ಕರ್ಮ ಫಲವನ್ನು ನೀನು ಕಳೆದುಕೊಂಡು ನೀನು ಪರಮಾತ್ಮನಲ್ಲಿ ಐಕ್ಯವಾಗುತ್ತೀಯೆಂದು ಆತನು ತಿಳಿಸಿದ್ದಾರೆ. ಮೋಕ್ಷ ಪ್ರಾಪ್ತಿ ಗೋಸ್ಕರ ನಿನ್ನನ್ನು ನೀನು ತಿಳಿದುಕೋ (know yourself) ಆಗಲೇ ಪರಮಾತ್ಮನನ್ನು ಸೇರುವುದಕ್ಕೆ ಮಾರ್ಗ ಸುಗಮವಾಗುತ್ತದೆ. ಮೂರು ಆತ್ಮಗಳ ವಿವರವೇ ತ್ರೈತ ಸಿದ್ಧಾಂತ ಎಂದು ಆತನು ತಿಳಿಸಿದ್ದಾರೆ. ಸಕಲ ಸೃಷ್ಟಿಗೆ

ಒಬ್ಬನೇ ಒಬ್ಬ ಸೃಷ್ಟಿಕರ್ತ ಇದ್ದಾನೆ. ಆತನೇ ಪರಮಾತ್ಮ. ಇಂದೂ ಧರ್ಮ, ಅಂದು ಇಂದು ಇದೆಯೆಂದು ತಿಳಿಸಿದ ತ್ರೈತ ಸಿದ್ಧಾಂತ ಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಪಾದಪದ್ಮಗಳಿಗೆ ಸಾಷ್ಟಾಂಗ ನಮಸ್ಕಾರಗಳು ತಿಳಿಸುತ್ತಾ ಮುಗಿಸುತ್ತಿದ್ದೇನೆ.

**ಪದ್ಯ :–** ಸಕಲ ಜೀವರಾಶಿಗಳಿಗೂ, ಜನನಿ ಜನಕರು
ಪ್ರಕೃತಿ, ಪರಮಾತ್ಮರು, ಸರ್ವಮತಗಳ
ಸಾರ ಗೀತೆಯಲ್ಲಿ ಇದೆ ಗೀತೆಯನ್ನು ಪಠಿಸು
ಪರಮಾತ್ಮನನ್ನು ಸೇರಿಕೋ!
ಮದ್ದಿವಾರಿ ಮಾತು ಒಳ್ಳೆಯ ಮಾತು!!

ಇಂತಿ
ಮದ್ದಿಲೇಟಿ

*****

**ಕೆ.ವಿ.ರವಿ ಶಂಕರ್ ಶ್ರಾವಣ್**
ಗುತ್ತಿ.
ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಪಾದಪದ್ಮಗ್ರಳಿಗೆ ನಮಸ್ಕರಿಸಿ ಬರೆಯುವುದು ಏನೆಂದರೆ!

ಇಲ್ಲಿಯವರೆಗು ಕಳೆದ ಜೀವನದಲ್ಲಿ ಎಲ್ಲಾ ಪ್ರಶ್ನೆಗಳಾಗಿ ಇದ್ದವು. ಅವು ಕೆಲವು ನಿಮಗೆ ವಿವರಿಸುತ್ತೇನೆ.

1. ಇಷ್ಟು ಜನ ದೇವತೆಗಳನ್ನು ಪ್ರಾರ್ಥಿಸಬೇಕಾ ಎಂದು ನನ್ನಲ್ಲಿ ಆತ್ಮ ಪ್ರಶ್ನಿಸುತ್ತಾ ಇರುತ್ತಿತ್ತು, ಎಲ್ಲಿಯೂ ನನಗೆ ಸರಿಯಾದ ಸಮಾಧಾನ ಸಿಗಲಿಲ್ಲ.

2. ಸತ್ತುಹೋದವರಿಗೆ ದಿನ (ಕರ್ಮಕಾಂಡ)ಗಳು ಏಕೆ ಮಾಡಬೇಕು ಎಂದು ನನ್ನಲ್ಲಿ ಪ್ರಶ್ನೆ ಯಾವಾಗಲೂ ವೇಧಿಸುತ್ತಾ ಇರುತ್ತಿತ್ತು.

3. ಗಂಡ ಸತ್ತುಹೋದ ವಿಧವೆಯನ್ನು ನೋಡಿದರೆ ಅಪಶಕುನವೆಂದು ಭಾವಿಸುತ್ತಾರೆ ಅಲ್ಲವೆ ಹಾಗೆ ಏಕೆ ಭಾವಿಸುತ್ತಿದ್ದಾರೆ? ಅದು ತಪ್ಪಾ? ಸರಿನಾ? ಪ್ರಶ್ನೆಯಾಗಿ ಉಳಿದುಹೋಗಿದೆ.

4. ಅಮಾವಾಸ್ಯೆ ದಿನದಲ್ಲಿ ಯಾವ ಕೆಲಸ ಮಾಡಬೇಡ, ಎಲ್ಲಿಗೂ ಹೋಗಬೇಡ ಎಂದು ಹಿರಿಯರು ಹೇಳುತ್ತಾ ಇರುತ್ತಾರೆ. ನನ್ನಲ್ಲಿ ಮಾತ್ರ ಏಕೆ ಮಾಡಬಾರದು, ಏಕೆ ಹೋಗಬಾರದು ಎಂದು ಪ್ರಶ್ನೆಯಾಗಿಯೇ ಇರುತ್ತಿತ್ತು. ಆ ಹಿರಿಯರು ಮಾತ್ರ ಇಂತಹ ಕಾರಣ ಎಂದು ಖಚಿತವಾಗಿ ಹೇಳಲಾರದೇ ಹೋಗಿದ್ದಾರೆ.

5. ಶಿವಲಿಂಗವನ್ನು ಕುರಿತು ಶಿವನು ಆತನೇ, ಶಂಕರನೂ ಆತನೇ ಎಂದು ಅಂದುಕೊಂಡಿದ್ದೆ, ಮೇಲಿನ ಪ್ರಶ್ನೆಗಳಿಗೆ ನನಗೆ ಈ ಜನ್ಮದಲ್ಲಿಯೇ ಪರಿಷ್ಕಾರ ಲಭಿಸುತ್ತದಾ ಎಂದು ಅಂದುಕೊಳ್ಳುತ್ತಿದ್ದೆನು.

6. ನನಗೆ 14 ವರ್ಷಗಳ ವಯಸ್ಸಿನಲ್ಲಿ ಊರಿನ ಹೊರಗೆ ಹೊಲಕ್ಕೆ ಹೋಗಿ ಬಂಡಿಯಲ್ಲಿ ಕಟ್ಟಿಗೆಗಳು ಹಾಕಿಕೊಂಡು ಮನೆಗೆ ಬರುತ್ತಿರುವಾಗ ಗುಡ್ಡದ ಕೆಳಗೆ ರಕ್ಷಣೆಗಾಗಿ ಹಾಕಿದ ಒಂದು ಕಲ್ಲಿನ ಕಟ್ಟಡ ಸುಮಾರು 6 ಅಡಿಗಳ ಮೇಲೆ ಇರುತ್ತದೆ. ಆ ಕಟ್ಟಡವನ್ನು ಒಬ್ಬ ದೊಡ್ಡ ಆಜಾನುಬಾಹನು ಬಹಳ ಸಾಧಾರಣವಾಗಿ ದಾಟುವುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಭಯವೂ ಸಹ ಉಂಟಾಯಿತು. ಆ ಕಟ್ಟಡವನ್ನು ಸಾಧಾರಣವಾಗಿ ದಾಟಿ ನಡೆದು ಹೋದಂತೆ ಹೋಗುವುದು ನನ್ನ ಕಣ್ಣಿಂದ ನೋಡಿ ಎಲ್ಲರಿಗೂ ಹೇಳಿದಾಗ ಎಲ್ಲರೂ ದೆವ್ವವಿರಬಹುದು ಎಂದು ಹೇಳಿದರು. ಆತನು ಯಾರೋ ಏನೋ ನನಗೆ ತಿಳಿಯದು. ಇದೂ ಸಹ ಪ್ರಶ್ನೆಯಾಗೇ ಉಳಿದುಹೋಗಿದೆ. ನೀವು ತಿಳಿಸಿದ ಇಷ್ಟು ದೊಡ್ಡ ಜ್ಞಾನ ತೆಲುಗಿನಲ್ಲಿ ಬರುವುದು ಮತ್ತು ಗುತ್ತಿಯಲ್ಲಿ ನಾನು ಇರುವುದು ಎಷ್ಟೋ ಜನ್ಮಗಳ ಅದೃಷ್ಟವಾಗಿ ಭಾವಿಸುತ್ತಿದ್ದೇನೆ.

ನಿಮ್ಮ ಆಶೀರ್ವಾದ ಇರುವುದರಿಂದಲೇ ನನಗೂ ಈ ಜ್ಞಾನ ಲಭಿಸಿದೆಯೆಂದು ನನ್ನ ಭಾವನೆ. ಗತದಲ್ಲಿ ಸಾಯಿಲೀಲಾಮೃತ, ಗುರುಚರಿತ್ರೆ ಎಷ್ಟೋ ಬಾರಿ ಪಾರಾಯಣ ಮಾಡುತ್ತಿದ್ದೆನು, ಅವುಗಳನ್ನು ಕೋರಿಕೆಗಳಿಗಾಗಿಯೇ ಪಾರಾಯಣ ಮಾಡುತ್ತಿದ್ದೆನು. ಅವುಗಳಲ್ಲಿ ಸಹ ಪ್ರಶ್ನೆಗಳು ಬರುತ್ತಿದ್ದವು. ಆದರೆ ಸಮಾಧಾನ ಸಿಗಲಿಲ್ಲ. ಗುತ್ತಿಯಲ್ಲಿ ಪ್ರತಿ ಭಾನುವಾರ, ಮಂಗಳವಾರ ಹೇಳುತ್ತಿರುವ ಸತ್ಸಂಗ ಕೇಳುತ್ತಿದ್ದರೆ ಎಂದಿಗೂ ಸತ್ಸಂಗ ಕೇಳದ, ಎಲ್ಲೂ ಹೇಳದ ದೊಡ್ಡ ದೈವಜ್ಞಾನ ನಮಗೆ ಲಭಿಸುತ್ತಿದೆ. ಇಷ್ಟು ವರ್ಷಗಳಿಗಾದರೂ ಈ ಜ್ಞಾನ ಲಭಿಸಿರುವುದಕ್ಕೆ ನಿಮಗೆ ಎಷ್ಟು ನಮಸ್ಕಾರಗಳು ಮಾಡಿದರೂ ಕಡಿಮೆಯೇ ಎಂದು ನನ್ನಲ್ಲಿನ ಭಾವನೆ. ಮೊದಲು ನಾನು ದೇವಾಲಯ ರಹಸ್ಯಗಳು, ಇಂದೂ ಸಂಪ್ರದಾಯಗಳು, ಗೀತಾಪರಿಚಯ, ಪ್ರವಕ್ತರು ಯಾರು?, ಕರ್ಮಪತ್ರ ಅನ್ನುವ ಗ್ರಂಥಗಳು ಓದಿದ್ದೇನೆ. ನನ್ನಲ್ಲಿ ಆತ್ಮ ತಿಳಿಸಿದ ಪ್ರಕಾರ ಈ ಸೃಷ್ಠಿಯಲ್ಲಿನ ದೊಡ್ಡ ದೊಡ್ಡ ರಹಸ್ಯಗಳು ಎಲ್ಲಾ ನೀವು ಒಂದೊಂದಾಗಿ ತಿಳಿಸುತ್ತಿದ್ದರೂ, ಈ ಮನುಷ್ಯರು ಏಕೆ ಅರ್ಥ ಮಾಡಿಕೊಳ್ಳದೇ ಹೋಗುತ್ತಿದ್ದಾರೋ ನನಗೆ ಅರ್ಥವಾಗುತ್ತಿಲ್ಲ. ಮರುಜನ್ಮ ಇಲ್ಲದಂತೆ ನನಗೆ ಈ ಜನ್ಮದಲ್ಲೇ ಮೋಕ್ಷವನ್ನು ಪ್ರಸಾದಿಸೆಂದು, ನನ್ನ ಕರ್ಮಗಳೆಲ್ಲ ಸುಟ್ಟುಹೋಗಬೇಕೆಂದು ಆ ಸಂಚಿತ ಕರ್ಮ ಸಹ ಇಲ್ಲದಂತೆ ಇರಬೇಕೆಂದರೆ ಬೇಕಾದ ಜ್ಞಾನಾಗ್ನಿಯನ್ನು ನನ್ನಲ್ಲಿನ (ಆತ್ಮಕ್ಕೆ) ಬುದ್ಧಿಗೆ ಶೇಕಡ ನೂರರಷ್ಟು ತಿಳಿಸಬೇಕೆಂದು ಕೋರಿಕೊಳ್ಳುತ್ತಾ ಸರ್ವ ಆತ್ಮಗಳಿಗೂ ಅಧಿಪತಿ ಆದ ನಿಮಗೆ ನನ್ನ ಹೃದಯಪೂರ್ವಕ ಪಾದಾಭಿವಂದನೆಗಳು ತಿಳಿಸಿಕೊಳ್ಳುತ್ತಿದ್ದೇನೆ.

ಇಂತಿ

ನಿಮ್ಮ ಭಕ್ತನಾದ

ಕೆ.ವಿ.ರವಿ ಶಂಕರ್ ಶ್ರಾವಣ್,

*****

**ಮಾರ್ಲ ಮನೋಹರ್**

ಗುತ್ತಿ.

ಅಜ್ಞಾನಂಧಕಾರ ಪ್ರಪಂಚದಲ್ಲಿ ಜ್ಞಾನ ಜ್ಯೋತಿಗಳು ಬೆಳಗಿಸಿ ಮೂಢರನ್ನು ಜ್ಞಾನಿಗಳನ್ನು, ಮಾಡಲು ದಯೆಮಾಡಿದ ಜ್ಞಾನಜ್ಯೋತಿ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಪಾದ ಪದ್ಮಗಳಿಗೆ ನಮಸ್ಕರಿಸಿ ಗುತ್ತಿಯಿಂದ ಜ್ಞಾನ ಜಿಜ್ಞಾಸಿ ಮಾರ್ಲ ಮನೋಹರ್ ಬರೆಯುವ ಪತ್ರ.

ಸ್ವಾಮಿ!

ಪ್ರಪಂಚಾವನಿಯಲ್ಲಿ ಭಾಗವಾದ ಈ ಪ್ರಾಂತದಲ್ಲಿ ಮೂಢತ್ವದಲ್ಲಿ ಜೀವನಗಳನ್ನು ನಡೆಸುತ್ತಿರುವ ಮೂಢರನ್ನು ಮೂರ್ಖರನ್ನು ಉದ್ಧರಿಸಲು, ನೀವು ನಿರ್ಮಿಸಿರುವ ವೇದಿಕೆ ತ್ರೈತ ಸಿದ್ಧಾಂತಿಕ ವೇದಿಕೆಯಿಂದ ಪ್ರತಿ ಒಬ್ಬರ ಮಸ್ತಿಷ್ಕದಲ್ಲಿ ಜ್ಞಾನ ಜ್ಯೋತಿಗಳನ್ನು ಬೆಳಗಿಸಿ ಅವರನ್ನು ಜ್ಞಾನ ಮಾರ್ಗದ ಕಡೆಗೆ ನಡೆಸುತ್ತಿರುವುದಕ್ಕೆ ಮೊದಲು ನಿಮಗೆ ನಮ್ಮ ಹೃದಯಪೂರ್ವಕ ಧನ್ಯವಾದಗಳು ತಿಳಿಸುತ್ತಿದ್ದೇನೆ. ಸೃಷ್ಠಿ ಆದಿಯಲ್ಲಿ ಜನ್ಮಿಸಿದ ಮಾನವನು ತನ್ನ ಜನ್ಮ ಏನೋ? ತನ್ನ ಜನ್ಮಕ್ಕೆ ಕಾರಣ ಏನೋ ತಿಳಿಯದೆ ಪರಮಾತ್ಮ ಜ್ಞಾನದ ಕಡೆಗೆ ಅಲ್ಲದೆ ಪ್ರಪಂಚ ಜ್ಞಾನದ ಕಡೆಗೇ ನಡೆಯುತ್ತಾ ತಮ್ಮ ಜನ್ಮಗಳೆಲ್ಲವೂ ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಅಸಲಾದ ಪರಮಾತ್ಮನನ್ನು ತಿಳಿದುಕೊಳ್ಳದೆ, ಹೇತುವಾದ, ನಾಸ್ತಿಕವಾದವಂತಹ ವಿಚಿತ್ರ ವಾದನೆಗಳೊಂದಿಗೆ ಆದಿ ದೇವರಾದ ಆ ಪರಮಾತ್ಮನನ್ನು ಕೀಳು ಭಾವದಿಂದ ನೋಡುತ್ತಿದ್ದಾರೆ. ಅಂತಹ ಮೂಢರನ್ನು ತಮ್ಮ ಬೋಧನೆಗಳಿಂದ ತಮ್ಮ ರಚನೆಗಳಿಂದ ಅವರಿಗೆ ನಿಜವಾದ ಪರಮಾತ್ಮ ಜ್ಞಾನವನ್ನು ಬೋಧಿಸಿ ಅವರನ್ನು ಜಾಗ್ರತೆ ಮಾಡಿರುವುದಕ್ಕೆ ನಿಮಗೆ ಮತ್ತೊಂದುಸಾರಿ ನಮ್ಮ ಹೃದಯಪೂರ್ವಕ ಕೃತಜ್ಞತಾಭಿವಂದನೆಗಳನ್ನು ತಿಳಿಸುತ್ತಿದ್ದೇನೆ. ಹೇತುವಾದ, ನಾಸ್ತಿಕವಾದ ನರನರದಲ್ಲೂ ಜೀರ್ಣಿಸಿಕೊಂಡ ನಾನು ಸಹ ಈ ಪ್ರಾಂತದಲ್ಲಿ ಪ್ರಬೋಧಕರಾದ ಶ್ರೀ ಆದಿಶೇಷಯ್ಯರವರ ಪ್ರಸಂಗಕ್ಕೆ ಪ್ರಭಾವಿತನಾಗಿ, ನಾನು ಪ್ರತಿವಾರ ಜ್ಞಾನ ತಿಳಿದುಕೊಳ್ಳುವುದಕ್ಕೆ,

ಶ್ರೀ ಆದಿಶೇಷಯ್ಯರವರ ಜ್ಞಾನಾಶ್ರಮಕ್ಕೆ ಬರುತ್ತಿದ್ದೇನೆ. ಈ ಪ್ರಾಂತದಲ್ಲಿ ಜ್ಞಾನಾಭಿವೃದ್ಧಿಗೆ ಸಹಕಾರ ಮಾಡುತ್ತಿರುವ ಶ್ರೀ ಆದಿಶೇಷಯ್ಯರವರಿಗೆ ನಾನು ನನ್ನ ಹೃದಯಪೂರ್ವಕ ಅಕ್ಷರಸಃ ವಂದನೆಗಳು ತಿಳಿಸುತ್ತಿದ್ದೇನೆ. ಹಾಗೇ ಪ್ರತಿ ವಾರ ತಾಡಿಪತ್ರಿಯಿಂದ ಗುತ್ತಿಗೆ ಬಂದು ತನ್ನ ಒಳ್ಳೆಯ ಪ್ರಸಂಗದಿಂದ ಸಂದರ್ಭೋಚಿತವಾದ ಉಪಮಾನಗಳೊಂದಿಗೆ ಗಾದೆಗಳೊಂದಿಗೆ ಪ್ರತಿ ಒಬ್ಬರೂ ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳುವಹಾಗೆ ಒಳ್ಳೆಯ ಜ್ಞಾನ ಬೋಧನೆ ಮಾಡುತ್ತಿರುವ ಶ್ರೀ ಶಂಕರಣ್ಣ ಅವರಿಗೆ ನಮ್ಮ ಹೃದಯಪೂರ್ವಕ ಕೃತಜ್ಞತಾಭಿವಂದನೆಗಳು ತಿಳಿಸುತ್ತಿದ್ದೇವೆ. ಒಟ್ಟಾರೆ ಎಲ್ಲಾ ವಾಸ್ತವ ಜ್ಞಾನ ತಿಳಿಸುತ್ತಾ ದೇವರು ಗುಡಿಗೋಪುರದಲ್ಲಿ ಇಲ್ಲ. ಈ ಸಮಸ್ತ ಸೃಷ್ಠಿಯಲ್ಲಿ ಆಕಾಶ ಭೂಮಿ ಮಧ್ಯೆ ಬಿಳಿಯವರ್ಣದಿಂದ ನಮ್ಮೆಲ್ಲರ ನಡುವೆ ಅವತರಿಸಿದವನೇ ನಿಜವಾದ ದೇವರು ಎಂದು ವಿಶೇಷವಾಗಿ ತಿಳಿಸಿದ ನಿಮಿಗೆ ಮತ್ತೊಂದುಸಾರಿ ನನ್ನ ಹೃದಯಪೂರ್ವಕ ಕೃತಜ್ಞತಾಭಿವಂದನೆಗಳು ತಿಳಿಸುತ್ತಾ ನಿಮ್ಮ ನಮ್ಮ ತ್ರೈತ ಸಿದ್ಧಾಂತ ವೇದಿಕೆ ಮತ್ತಷ್ಟು ಪುರೋಭಿವೃದ್ಧಿ ಕಡೆಗೆ ನಡೆಯಬೇಕೆಂದು ಕಾಂಕ್ಷಿಸುತ್ತಿದ್ದೇನೆ.

ಇಂತಿ

ನಿಮ್ಮ ಜ್ಞಾನ ಜಿಜ್ಞಾಸಿ (ಮಾರ್ಲ ಮನೋಹರ್)

*****

**ಎ.ವಿ. ರಂಗಾರಾವು**

ಗುತ್ತಿ.

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರವರಿಗೆ
ನನ್ನ ಹೃದಯಪೂರ್ವಕ ನಮಸ್ಕಾರಗಳು...

ನಾನು 30 ಸಂ॥ಗಳಿಂದ ಆಧ್ಯಾತ್ಮಿಕ ವಿಷಯಗಳು ಮತ್ತು ಗುರುಗಳು ಮತ್ತು ದೇವತೆಗಳನ್ನು ಮತ್ತು ಮಂತ್ರಗಳೊಂದರ ಮರ್ಮವನ್ನು

ತಿಳಿದುಕೊಳ್ಳುವುದಕ್ಕೆ ಎಷ್ಟೋ ಜನರೊಂದಿಗೆ ಚರ್ಚಿಸಿ ಅವುಗಳನ್ನು ತಿಳಿದುಕೊಳ್ಳುವುದು ನನಗೆ ಬಹಳ ಆಸಕ್ತಿ. ಬಹಳ ಜನರಿಂದ ದೈವ ಉಪದೇಶಗಳು ಮತ್ತು ಅವರ ವೀಡಿಯೊ ಮುಖಾಂತರ ಪ್ರಸಂಗಗಳು ಬಹಳ ಕೇಳಿದ್ದೇನೆ. ನಾನು ಒಬ್ಬ ಗುರುವಿನ ಹತ್ತಿರ ಆಧ್ಯಾತ್ಮಿಕ ವಿಷಯಗಳು ಮತ್ತು ಜ್ಯೋತಿಷ್ಯಶಾಸ್ತ್ರ ವಿಷಯಗಳು ಸುಮಾರು 3ಸಂ॥ ಕೇಳಿದ್ದೇನೆ. ನನಗೆ ಚಿಕ್ಕಂದಿನಿಂದ ಬಹಳ ಕಷ್ಟಗಳು ಇರುತ್ತಿದ್ದವು. ಅವುಗಳನ್ನು ದಾಟುವುದಕ್ಕೆ ಎಷ್ಟೋ ದೇವತೆಗಳ ಗುಡಿಗಳನ್ನು ತಿರುಗಾಡಿದ್ದೇನೆ. ದೈವಕಾರ್ಯಗಳು ಬಹಳ ಮಾಡಿದ್ದೇನೆ. ಎಷ್ಟೋ ಜನರೊಂದಿಗೆ ಈ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದೆನು. ಆದರೆ ನನಗೆ ಒಂದು ವಿಷಯ ಮಾತ್ರ ಅರ್ಥವಾಗುತ್ತಿರಲಿಲ್ಲ. ಏಕೆಂದರೆ ನಮ್ಮ ಗುರು ಆದವರು ನೀನು ಕಷ್ಟಗಳನ್ನು ಅನುಭವಿಸು, ಕರ್ಮವನ್ನು ದಗ್ಧ ಮಾಡಿಕೋ! ಅನ್ನುತ್ತಿದ್ದನು ಕಷ್ಟ ಬಂದಾಗ ನಾನು ಗುರುವು ಫೋಟೋ ನೋಡುತ್ತಿದ್ದೆನು. ಆತನು ಒಂದೇ ಒಂದು ಮಾತು ಹೇಳುತ್ತಿದ್ದನು. ನಿನ್ನ ಕರ್ಮವನ್ನು ಪೂರ್ತಿ ಮಾಡು ಅನ್ನುತ್ತಿದ್ದನು. ನಾನು ಎಷ್ಟು ಕಾಲ ಹೀಗೆ ನನ್ನ ಈ ಕರ್ಮವನ್ನು ಅನುಭವಿಸಬೇಕು ಇದಕ್ಕೆ ಮಾರ್ಗ ಇಲ್ಲವೇ ಅಂದುಕೊಳ್ಳುತ್ತಿದ್ದೆನು.

ನಾನು ಈ ನಡುವೆ ಇಂಗ್ಲೀಷ್ ಸ್ಪೋಕೆನ್ ಕ್ಲಾಸ್‌ಗಳಿಗೆ ಆದಿಶೇಷಯ್ಯ ಅನ್ನುವ ಟೀಚರ್ ಹತ್ತಿರಕ್ಕೆ ಹೋಗುತ್ತಿದ್ದೇನೆ. ಸಾರ್‌ರವರು ನನಗೆ ಜ್ಞಾನ ತಿಳಿದುಕೊಳ್ಳಬೇಕು ಆಗ ಈ ಕರ್ಮಗಳು ಮತ್ತು ಈ ದುಃಖಕ್ಕೆ ಮಾರ್ಗ ತಿಳಿಯುತ್ತದೆ ಅನ್ನುತ್ತಿದ್ದರು.

ನನಗೆ ಒಂದು ಪ್ರಶ್ನೆ ಉದಯಿಸಿತು. ಅದು ಏನೆಂದರೆ! ಜ್ಞಾನ ಎಂದರೆ ಏನು? ಜ್ಞಾನ ತಿಳಿದುಕೊಳ್ಳುವುದರಿಂದ ಈ ಕರ್ಮ ಹೇಗೆ ಹೋಗುತ್ತದೆ? ಎಂದು ಅಂದುಕೊಳ್ಳುತ್ತಿದ್ದೆನು. ಸಾರ್‌ರವರು "ಆದಿತ್ಯವಾರ ನಮ್ಮ ಮನೆಯಲ್ಲಿ ಕ್ಲಾಸ್‌ಗಳು ನಡೆಯುತ್ತವೆ, ನಿಮಗೆ ಸಮಯ ಸಿಕ್ಕರೆ ಬನ್ನಿ ಸಾರ್" ಎಂದು ಹೇಳಿದ್ದಾರೆ. ನಾನು ಕ್ಲಾಸ್‌ಗಳಿಗೆ ಹೋಗಿದ್ದೇನೆ. ಅಲ್ಲಿ ಆರಂಭದಲ್ಲಿ ನನಗೆ ಅರ್ಥವಾಗಲಿಲ್ಲ. ಅಸಲು ನನ್ನ ಪ್ರಶ್ನೆಗೆ ಸಮಾಧಾನಗಳು ಸಿಗುತ್ತವಾ ಇಲ್ಲಾ

ಅನ್ನುವ ಸಂದಿಗ್ದದಲ್ಲಿ ಬಿದ್ದಿದ್ದೇನೆ. ಆದರೆ ನೋಡೋಣ ಎಂದು ಭಾನುವಾರ ದಿನ ನನಗೆ ಎಷ್ಟು ಕಷ್ಟವಾದರೂ ನಾನು ಯಾವುದೋ ಒಂದು ಟೈಂನಲ್ಲಿ ಕ್ಲಾಸ್‌ಗೆ ಹೋಗುತ್ತಿದ್ದೆನು. ನನಗೆ ಲಾಸ್ಟ್ ಕ್ಲಾಸ್‌ನಲ್ಲಿ ನನ್ನ ಪ್ರಶ್ನೆಗೆ ಸಮಾಧಾನ ಸಿಕ್ಕಿದೆ. ನನ್ನ ಮನಸ್ಸಿಗೆ ಎಷ್ಟೋ ಸಂತೋಷ ಉಂಟಾಗಿದೆ, ಎಷ್ಟೋ ತೃಪ್ತಿ ಕೂಡ ಸಿಕ್ಕಿತು.

ನಾನು ಈಗ ಯಾವ ಕಷ್ಟ ಬಂದರೂ ಆ ಕಷ್ಟವನ್ನು ಹೃದಯಪೂರ್ವ ಕವಾಗಿ ಸ್ವೀಕರಿಸುತ್ತಿದ್ದೇನೆ. ಏಕೆಂದರೆ, ನನ್ನ ಕರ್ಮಗಳು ಎಲ್ಲವೂ ಪೂರ್ತಿ ಮಾಡಿಕೊಳ್ಳುತ್ತಿದ್ದೇನೆಂದು ನನಗೆ ಈ ಜನ್ಮದಲ್ಲೇ ಈ ಕರ್ಮಗಳು ಎಲ್ಲವೂ ಪೂರ್ತಿ ಮಾಡಿಕೊಂಡರೆ ಬರುವ ಜನ್ಮದಲ್ಲಾದರೂ ಇದಕ್ಕಿಂತ ಉತ್ತಮ ಜನ್ಮ ಬರುತ್ತದೆಂದು ಹೀಗೆ ಪ್ರತಿ ಜನ್ಮದಲ್ಲೂ ಈ ಕರ್ಮಗಳು ಪೂರ್ತಿ ಮಾಡಿಕೊಂಡರೆ ಆ ದೈವದಲ್ಲಿ ಐಕ್ಯವಾಗಬಹುದೆಂದು ನಾನು ನನ್ನ ಹೃದಯಪೂರ್ವಕವಾಗಿ ತಿಳಿಯುತ್ತಿದ್ದೇನೆ.

ಈ ವಿಷಯ ತಿಳಿದ ನಂತರ, ನಾನು ನನ್ನ ಹತ್ತಿರ ಇರುವ ಕೆಲವು ಮಂದಿ ಆಧ್ಯಾತ್ಮಿಕ ವಿಷಯಗಳ ಮೇಲೆ ಆಸಕ್ತಿ ಇರುವವರಹತ್ತಿರ ಈ ವಿಷಯ ಮತ್ತು ಸ್ವಾಮಿಯವರ ಗ್ರಂಥ ಕೊಟ್ಟು ಚರ್ಚಿಸಿದಾಗ ಅವರು ಬಹಳ ಅಸಕ್ತಿಯಿಂದ ಕೇಳಿ ಸಾರ್ ನಾವು ಸಹಾ ಆ ಕ್ಲಾಸ್‌ಗಳಿಗೆ ಬರುತ್ತೇವೆಂದು ಹೇಳುವುದು ನಡೆದಿದೆ.

ನಾನು ಸ್ವಾಮಿ ಅವರಿಗೆ, ಇಂತಹ ಮರ್ಮವನ್ನು ಪ್ರಜೆಗಳಿಗೆ ತಿಳಿಸಿರುವುದಕ್ಕೆ ಅವರಿಗೆ ನನ್ನ ಹೃದಯಪೂರ್ವಕ ನಮಸ್ಕಾರ ತಿಳಿಸಿಕೊಳ್ಳುತ್ತಿದ್ದೇನೆ.

ಇಂತಿ

ರಂಗಾರಾವು

*****

**ಜಿ. ಶೇಖರ್‌ರಾವು, ಜಿ. ಲಕ್ಷ್ಮಿಬಾಯಿ**
ಪಾಮಿಡಿ, ಅನಂತಪುರಂ ಜಿಲ್ಲೆ.
ಓಂ ಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರಾಯನಮಃ
ಪರಮ ಪೂಜ್ಯ ಶ್ರೀ ಗುರುದೇವರ ಪಾದಪದ್ಮಗಳಿಗೆ ಒಬ್ಬ ಭಕ್ತ ಪರಮಾಣುವು. ಸಮಸ್ಕರಿಸಿ ಬರೆಯುವುದು.

ಅಲ್ಪರನ್ನು ಜ್ಞಾನಿಗಳನ್ನಾಗಿ ಮಾಡುವುದಕ್ಕೆ ಹೊರಬಂದ ಓ ಗುರುರಾಯಾ! ನಿಮಗೆ ನಮ್ಮ ಹೃದಯಪೂರ್ವಕ ವಂದನೆಗಳು.

ನಿಮ್ಮೊಂದರ ಅನಂತವಾದ ಜ್ಞಾನ ಸಮುದ್ರದಲ್ಲಿಂದ ಹೊರಗೆ ಬಂದ ಬೆಳಕು ಕೆಲವು ಗ್ರಂಥಗಳಲ್ಲಿನ ಜ್ಞಾನರೂಪದಲ್ಲಿ ನಮ್ಮ ತಲೆಗೆ ಏರಿದೆ. ನಮ್ಮ ಜೀವನ 40 ಸಂ॥ ಗಳ ಕಾಲ ವೃಥಾ ಆಗಿಹೋಗಿದೆಯೆಂದು ನಿರಾಸೆ ನಿಸ್ಪೃಹಗಳಲ್ಲಿ ಮುಳುಗಿ ಇನ್ನು ಈ ಜೀವನ ವ್ಯರ್ಥ, ಬದುಕುವುದಕ್ಕೆ ಯಾವ ಅಧಿಕಾರ ಇಲ್ಲ ಎಂದು ನಿರ್ಣಯಿಸಿಕೊಂಡು ಬಲವನ್ಮರಣ ಹೊಂದುವುದಾ ಇಲ್ಲವೆ ಈ ಮಾನವ ಸಮಾಜವನ್ನು ಬಿಟ್ಟು ದೂರವಾಗಿ ಹೋಗುವುದಾ ಎಂದು ಸಂದಿಗ್ದದಲ್ಲಿ ಮುಳುಗಿ ನಿಜವಾದ ಜ್ಞಾನವನ್ನು (ಆತ್ಮ ವಿದ್ಯೆಯನ್ನು ಬಾಲ್ಯದಿಂದಲೇ ಕೋರಿಕೊಂಡವರಾಗಿ) ತಿಳಿಯದೆ ಇದು ನಿಜವೆಂದು ನಂಬಿ 1993ನೇ ವರ್ಷದಲ್ಲಿ ವನಂ ರಾಘವೇಂದ್ರ ಶರ್ಮ ಅನ್ನುವ ಬೋಧಕನು ನಮಗೆ ಉಪದೇಶಮಾಡಿದ (ಕಿವಿಯಲ್ಲಿ ರಹಸ್ಯವಾಗಿ) ಮಂತ್ರಗಳು ಎರಡನ್ನು 1) ಓಂ ಹಂಸ ಸಹಂಸಾಯ ವಿದ್ಮಹೇ ಪರಮ ಹಂಸಾಯ ಧೀಮಹಿ ತನ್ನೋ ಹಂಸ ಪ್ರಚೋದಯಾತ್ 10 ವರ್ಷಗಳು ಜಪ ಮಾಡಿದ್ದೇವೆ. 2) ನಂತರ 2006ನೇ ವರ್ಷದಲ್ಲಿ ಓಂ ಐಂ ಕ್ಲೀಂ ಸೌಃಕ್ಲೀಂ ಏಂ ಅಮೃತಂ ಸ್ರಾವಯ ಸ್ರಾವಯ ಸ್ವಾಹಾ. (ಇವು ಎರಡೂ ಆತ್ಮ ವಿದ್ಯೆಗೆ ಸಂಬಂಧಿಸಿದ ಮಹಾ ವಿದ್ಯೆಗಳೆಂದು, ಇವು ಸಿದ್ಧಿಸಿದರೇ ಮೋಕ್ಷ ಲಭಿಸುತ್ತದೆಂದು ಬೋಧಕನ ಬೋಧನೆ) ಎರಡನೆ ಮಂತ್ರ (ಮತ್ತು ಮಧ್ಯದಲ್ಲಿ 1996 ರಲ್ಲಿ ಚಂಡೀ ಪಾರಾಯಣ ಹೇಳುವುದು ನಾವು ಮಾಡುತ್ತಾ ಬಂದಿದ್ದೇವೆ.) 6 ತಿಂಗಳ ಕಾಲದಲ್ಲಿ ದೀಕ್ಷೆಯಿಂದ 3 ಲಕ್ಷಗಳು ಮಾಡಿರಿ. ನಿಮ್ಮ ಜನ್ಮಕ್ಕೆ

ಧನ್ಯತೆ ಲಭಿಸುತ್ತದೆಂದು, ಅನುಕೂಲಿಸಿದರೆ 6 ಲಕ್ಷಗಳು ಜೀವನಕಾಲದಲ್ಲಿ ಮಾಡಿರೆಂದು ಹೇಳಿ ನಿಯಮಗಳನ್ನು 3 ಇಟ್ಟಿದ್ದಾರೆ. 1) ಏಕಭುಕ್ತಂ, 2) ಬ್ರಹ್ಮಚರ್ಯಂ 3) ಭೂ ಸಯನಂ ಆಚರಿಸಿರಿ ಎಂದು ಹೇಳಿದ್ದಾರೆ. ನಾವು ಮಾಡಿದ್ದೇವೆ. ಪೂರ್ತಿ ಆದನಂತರ ಸಿದ್ಧಿಸುತ್ತದೆಂದು ಹೋಮವೂ ಸಹ ಮಾಡಿದ್ದಾರೆ. 2006–2007 ಸಂ॥ದಲ್ಲಿ ನಮ್ಮ ಸ್ನೇಹಿತರು, ಬಂಧುಗಳು ಆದ ಕೆಲವು ಜನ ಸಲಹೆಯನ್ನು ಕೊಟ್ಟು ಪ್ರವೇಟ್ ಸಂಸ್ಥೆಗಳಲ್ಲಿ ಅವರು ಸ್ವಲ್ಪ ಹಣ ಬಂಡವಾಳ ಹಾಕಿ ಹಾಕಿದ ಸ್ವಲ್ಪ ಸಮಯದಲ್ಲೇ ಹೆಚ್ಚಿನ ಆದಾಯ ಬರುತ್ತದೆಂದು ಹೇಳಿ ನಮ್ಮನ್ನು ಅದರಲ್ಲಿ ಇಳಿಸಿ ಆ ಕಂಪನೀ ಪರವಾಗಿ ನಮಗೆ "ಮಹಾರಾಷ್ಟ್ರ" ರಾಷ್ಟ್ರದಲ್ಲಿ ಇಡುತ್ತಿರುವ ಬ್ರಾಂಚ್‌ನಲ್ಲಿ ಮೇನೆಜರ್ ಉದ್ಯೋಗ ಕೊಡುತ್ತೇವೆಂದು ನಮ್ಮನ್ನು ನಂಬಿಸಿದ್ದಾರೆ. ನಾವು ನಂಬಿ ಸರ್ವವು ಅದರಲ್ಲಿ ಕಳೆದುಕೊಳ್ಳುವುದು ನಡೆದಿದೆ. ನಮ್ಮ ತಂದೆಯವರು ನಮ್ಮ ಕುಲ ಹಿರಿಯರಾದ್ದರಿಂದ ಅವಮಾನ ಭಾರದಿಂದ ದಿಕ್ಕು ತೋಚದ ಪರಿಸ್ಥಿತಿಯಲ್ಲಿ 2007–2008 ವರ್ಷಗಳಲ್ಲಿ ಪಾಮಿಡಿ ಎಂಬ ಊರಲ್ಲಿ ಸೇರಿಕೊಂಡು ಜೀವನ ಮಾಡುವುದು ಪ್ರಾರಂಭವಾಗಿದೆ. ನಮ್ಮ ಜೀವನದಲ್ಲಿ ಪೂಜೆಗಳು, ಜಪಗಳು ಎಷ್ಟು ವರ್ಷಗಳು ಮಾಡಿದರೂ ಸಂತೃಪ್ತಿ ಇಲ್ಲದೆ ಎಷ್ಟೋಬಾರಿ ಬೋಧಕನನ್ನು ಎಷ್ಟೋ ವರ್ಷಗಳು ಪ್ರಶ್ನಿಸುತ್ತಲೇ ಬರುತ್ತಿದ್ದೇವೆ. ನಮ್ಮ ಪ್ರಶ್ನೆಗಳಿಗೆ ಸಹಿಸಿಕೊಳ್ಳದೆ ಆತನು ಸ್ವಲ್ಪ ಕಾಲ ನಿರೀಕ್ಷಿಸಿರಿ, ನಾವು ನಮಗಿಂತ ದೊಡ್ಡ ಬೋಧಕರನ್ನು ನಿಮಗೆ ತೋರಿಸುತ್ತೇವೆಂದು ಹೇಳುತ್ತಾ ಬಂದಿದ್ದಾರೆ. ನಾವು ವಿಶ್ವಾಸದಿಂದ ಎಷ್ಟೋ ಸೇವೆಗಳು ಸಹ ಮಾಡಿದ್ದೇವೆ. ಆದರೂ ಜೀವನವೆಲ್ಲಾ ಆತ್ಮ ತೃಪ್ತಿ ಇಲ್ಲ, ಸಂತೃಪ್ತಿ ಇಲ್ಲ. ಎಲ್ಲಾ ಅಸಂತೃಪ್ತಿಯೇ ಉಳಿದಿದೆ. "ಇಷ್ಟು ವರ್ಷ ನಿಮಗೆ ಪೂಜೆ ಪುನಸ್ಕಾರಗಳು ಮಾಡಿ ಸರ್ವವೂ ಕಳೆದುಕೊಂಡು ಹೀನಾತಿ ಹೀನವಾಗಿ ಜೀವಿಸುತ್ತಿದ್ದಾರೆನ್ನುವ ಧ್ಯಾಸ ನಮ್ಮ ಮೇಲೆ ಇಲ್ಲವಾ ಎಂದು" ಆ ಆಮ್ಮನನ್ನು ಶ್ರೀ ಲಲಿತ ತ್ರಿಪುರ ಸುಂದರಿ (ಪ್ರಕೃತಿ) ಯನ್ನು ಪ್ರಶ್ನಿಸುತ್ತಲೇ ಬಂದಿದ್ದೇವೆ. ಅಂತಹ ಸಮಯದಲ್ಲೇ ಬೇಸರಗೊಂಡು ಜೀವನದ ಮೇಲೆ ವಿರಕ್ತಿ ಭಾವ ಸ್ವಲ್ಪ ಸ್ವಲ್ಪವಾಗಿ ಬೆಟ್ಟದಷ್ಟಾಗಿ ಯಾವುದೋ ಒಂದು ನಿರ್ಣಯ

ತೆಗೆದುಕೊಳ್ಳೋಣ ಎನ್ನುವ ಸಮಯದಲ್ಲಿ ನಮಗೆ ಕೈಕೆಲಸ ಮಾಡಿಕೊಂಡು ಹೊಟ್ಟೆಪಾಡಿಗಾಗಿ ಮಾಡುವ ಟೈಲರ್ ವೃತ್ತಿಯಲ್ಲಿ ಒಬ್ಬರಿಬ್ಬರಿಂದ ಪರಿಚಯ ಏರ್ಪಟ್ಟು, ಅವರಿಬ್ಬರಿಂದ ನಮ್ಮ ಜೀವನ ನಿಜವಾಗಿ ಮಾರ್ಪಾಟು ಆಗಿದೆ ಯೆಂದು ಒಪ್ಪಿಕೊಳ್ಳುತ್ತಿದ್ದೇವೆ. ಅದು 12–12–2012 ಗಜರಾಂಪಲ್ಲಿ ರಾಮಾಂಜನೇಯುಲು (ಅಡ್ವಕೇಟ್), ಶ್ರೀನಿವಾಸುಲು (ಆಟೋ) ಅವರಿಂದ ಅದ್ಭುತವಾದ, ಮಹೋನ್ನತವಾದ, ಸತ್ಯವಾದ, ಪವಿತ್ರವಾದ, ಮಹಿಮಾನ್ವಿತವಾದ, ಎಷ್ಟು ಹೇಳಿದರೂ ಬಣ್ಣ ಹೋಗದ ವಜ್ರಗಳಂತೆ, ಇನ್ನೂ ಎಷ್ಟೋ ದೊಡ್ಡವಾಗಿ ಹೇಳಿಕೊಳ್ಳುವ ಗ್ರಂಥಗಳು ಲಭಿಸಿವೆ. ಅವುಗಳಲ್ಲಿ ಒಂದನೇ ಗ್ರಂಥವಾಗಿ ನಾವು ಓದಿದ ಮೊದಲನೆ ಗ್ರಂಥ ಅವು 1) ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು, 2) ತಾಯಿ–ತಂದೆ, 3) ಮರಣರಹಸ್ಯ, 4) ಗುರು, 5) ತ್ರೈತಾರಾಧನೆ, 6) ಪ್ರಬೋಧ, 7) ಶ್ರೀ ಕೃಷ್ಣನು ದೇವರಾ! ಭಗವಂತನಾ! ಇದರಲ್ಲಿ ಕೊನೆಯ ಗ್ರಂಥ ನಮ್ಮ ಜೀವನಗಳಿಗೆ ಅರ್ಥ ಹೇಳಿದ ಗ್ರಂಥ. ಮುಖ್ಯವಾಗಿ ನಮ್ಮ ಬಾಲ್ಯದಿಂದಲೇ ನಮಗೆ ಎಷ್ಟೋ ಪ್ರಶ್ನೆಗಳು. ಅವು ಏನೆಂದರೆ! ಯಾರು ನೀನು? ಎಲ್ಲಿಂದ ಬಂದಿದ್ದೀಯ? ಏನು ಮಾಡುತ್ತಿದ್ದೀಯಾ? ಎಲ್ಲಿಗೆ ಹೋಗುತ್ತೀಯ?

ನಂತರ ಯವ್ವನದಲ್ಲಿ ಬಂದಿರುವ ಪ್ರಶ್ನೆಗಳು, ಆತ್ಮ ವಿದ್ಯೆ ಕಲಿತುಕೋ? ಆಧ್ಯಾತ್ಮಿಕವನ್ನು ತಿಳಿದುಕೋ? ನಿಜವಾಗಿ ಭೂಮಿ ಮೇಲೆ ದೆವ್ವಗಳಿವೆಯಾ? ಅಸಲು ದೇವರು ಇದ್ದಾನಾ ಭ್ರಮೆಯಾ? ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು ಗ್ರಂಥದ ಮೊದಲಮಾತು ಪೂರ್ತಿ ಆಗದೇ ನಮ್ಮಲ್ಲಿನ ಚಪಲಚಿತ್ತ, ಅನ್ಯಮನಸ್ಕ, ಅಸಂತೃಪ್ತಿ, ನಿಸ್ಪೃಹ, ಇನ್ನೂ ಎಲ್ಲಾ ತಕ್ಷಣವೇ ಕ್ಷಣದಲ್ಲಿ ಪಕ್ಕಕ್ಕೆ ಹೋಗಿ "ನೀನು ಹುಡುಕುತ್ತಿರುವುದು ಇದೇ" ನಿನಗೆ ಬೇಕಾಗಿರುವುದು ಇದೇ! ಇದು ಸತ್ಯ... ಇದು ಸತ್ಯ... ಎಂದು ನಮ್ಮ ಅಂತರಾಳದಲ್ಲಿಂದ ಆದೇಶಿಸಿದ್ದಾರೆ. ಅದೇ ಆತ್ಮಪ್ರಬೋಧ ಅಂದುಕೊಳ್ಳುತ್ತಿದ್ದೇನೆ. ಆ ನಂತರ ಗ್ರಂಥ ಪೂರ್ತಿ ಆಗಿದೆ. ಅಲೌಕಿಕಾನಂದ, ಅಶ್ರುಗಳ ರೂಪದಲ್ಲಿ 3 ದಿನಗಳು 9 ದಿನಗಳು...

ನಿಲ್ಲಲಿಲ್ಲ. ನಿಲ್ಲಿಸಲಾಗಲಿಲ್ಲ. ತಾಯಿ-ತಂದೆ ಓದಿದ ನಂತರ ಆಗ ಅನಿಸಿತು ಇಷ್ಟು ಸಂ॥ಗಳು ನಾವು ಸೇವೆ ಮಾಡಿರುವುದು ಪ್ರಕೃತಿ ಅಮ್ಮನಿಗೆಂದು, ಆಕೆಯೇ ಪರೀಕ್ಷಿಸಿ ನಮ್ಮನ್ನು ಅಸಲಾದ "ತಂದೆ" ಜಗದ್ಭರ್ತ, ಪರಮಾತ್ಮ ಅಂಶದಲ್ಲಿ ಈ ಭೂಮಂಡಲವನ್ನು ಒಂದೇ ದಾರಿಗೆ ತಂದು ಏಕೇಶ್ವರೋಪಾಸನೆ ಮಾಡುವ ವಿಧದಲ್ಲಿ ಅಲ್ಪರನ್ನು ಜ್ಞಾನಿಗಳನ್ನಾಗಿ ಮಾಡಲು ಬಂದಿರುವ ಭಗವಂತನು, ಗುರುರಾಯನು ಎಂದು ಆತ್ಮ ಪುಳಕಿಸಿದೆ. ಈ ಭೂಮಂಡಲಕ್ಕೆ ನಿಜವಾಗಿ ಗುರು ಬಂದಿದ್ದಾನೆಂದು ನಮ್ಮ ಎರಡು ಜೋಡಿ ಆತ್ಮಗಳು (ನಾವು, ನಮ್ಮ ಹೆಂಡತಿ) ಅಮಿತಾನಂದವನ್ನು ಹೊಂದುತ್ತಾ ಚಿಕ್ಕ ಮಕ್ಕಳಿಗೆ ಒಳ್ಳೆಯ ಬಟ್ಟೆಗಳು, ಸ್ಕೂಲ್‌ನಲ್ಲಿ ಚಾಕ್ಲೆಟ್, ಬಿಸ್ಕೆಟ್ ಕೊಟ್ಟು ಒಳ್ಳೆಯ ಪುಸ್ತಕಗಳು ಕೊಟ್ಟರೆ ಎಷ್ಟು ನೂತನ "ಶ್ರದ್ಧೆ"ಯಿಂದ ಓದಿಕೊಳ್ಳುತ್ತಾರೋ ಅಂತಹ ಶ್ರದ್ಧೆ ನಿಜವಾಗಲೂ ನಮಗೆ ಉಂಟಾಗಿರುವುದಕ್ಕೆ, ಆ ದೇವರ ದೃಷ್ಟಿ ಪ್ರಸಾರ ನಮ್ಮ ಮೇಲೆ ಉಂಟಾಗಿರುವುದಕ್ಕೆ ನಾವು ಈ ಜೀವನಾಂತ್ಯದವರೆಗೂ ಕೃತಜ್ಞರಾಗಿ ಇರುತ್ತೇವೆಂದು ಆತ್ಮ ಪೂರ್ವಕವಾಗಿ ಹೇಳಿಕೊಳ್ಳುತ್ತಿದ್ದೇವೆ.

ನಿಜಕ್ಕೂ ಜೀವಾತ್ಮ ಗುಣಚಕ್ರದಲ್ಲಿ ಸಿಲುಕಿಕೊಂಡು ಇದ್ದಾನೆಂದು ತಿಳಿದು ಆಶ್ಚರ್ಯಕ್ಕೆ ಒಳಗಾಗಿದ್ದೇವೆ. ಬ್ರಹ್ಮ, ಕಾಲ, ಕರ್ಮ ಗುಣಚಕ್ರಗಳ ವಿಶೇಷಗಳು ತಿಳಿಯುವುದು ಮಾನವರಿಗೆ ಎಷ್ಟೋ ಪೂರ್ವಜನ್ಮ ಸುಕೃತವಾಗಿ ನಾವು ಬಹಳ ವಿಶ್ವಾಸಿಸುತ್ತಿದ್ದೇವೆ. ಒಂದು ಕಡೆ ಗ್ರಂಥದಲ್ಲಿ ಮಾನವನ ಜನ್ಮ, ಮರಣ ರಹಸ್ಯಗಳು ತಿಳಿಸುತ್ತಾ, ಮತ್ತೊಂದು ಗ್ರಂಥದಲ್ಲಿ ದೈವವನ್ನು, ದೈವ ಧರ್ಮಗಳನ್ನು, ನಿಜವಾದ ದೈವ ಪೂಜೆಯನ್ನು ತ್ರೈತಾರಾಧನೆಯಿಂದ ಆಚರಣೆಗಳು ತಿಳಿಸುತ್ತಾ ನಮ್ಮಲ್ಲಿನ ಸಂಶಯವನ್ನು ನುಚ್ಚುನೂರು ಮಾಡಿ ನಮ್ಮಂತಹ ಅಲ್ಪರನ್ನು ಜ್ಞಾನಿಗಳನ್ನಾಗಿ ಮಾಡಲು ಧರಣಿಯಲ್ಲಿ ಭಗದಿಂದ ಭಗವಂತನಾಗಿ ಬಂದಿರುವ ಸ್ವಾಮಿಗೆ ಮನಃಪೂರ್ವಕ ವಂದನೆಗಳು ತಿಳಿಸುತ್ತಾ ಶ್ರೀಕೃಷ್ಣನು ದೇವರಾ! ಭಗವಂತನಾ? ಗ್ರಂಥದಲ್ಲಿನ 49ನೇ ಪುಟದಲ್ಲಿ ನಮ್ಮಂತಹವರು ಎಷ್ಟೋ ಮೋಸ ಹೋಗುತ್ತಿದ್ದಾರೆಂದು ಸ್ವಾಮಿಯವರು ಬರೆದಿರುವುದು ಅಕ್ಷರಸಃ ಸತ್ಯ. ಆ

49ನೇ ಪುಟದ ಸಾರಾಂಶ :–

"ಹುಟ್ಟಿದಾಗಿನಿಂದ ತಿಂಡಿಗೋಸ್ಕರ, ಬೆಳೆದಾಗಿನಿಂದ ಬದುಕುವುದಕ್ಕೋಸ್ಕರ ಅಲೆದಾಡುವ ಮನುಷ್ಯರಿಗೆ ಜೀವನದಲ್ಲಿ ಮುಖ್ಯವಾದದ್ದು ದೈವಜ್ಞಾನವೆಂದು ತಿಳಿಯದಂತೆ ಹೋಗಿದೆ. ಒಂದು ವೇಳೆ ಕೆಲವು ಸಾವಿರ ಮಂದಿಯಲ್ಲಿ ಅಪರೂಪವಾಗಿ ಯಾರಿಗಾದರೂ ದೈವಜ್ಞಾನದ ಮೇಲೆ ಆಸಕ್ತಿ ಉಂಟಾದರೂ, ಅವನಿಗೆ ದೈವಜ್ಞಾನ ರೂಪದಲ್ಲಿ ಮಾಯೆ ಜ್ಞಾನ ತಿಳಿಯುತ್ತಿದೆ. ಹಾಗೆ ಮಾಯೆ ಜ್ಞಾನ ಅಂಟಿಕೊಂಡ ಕೆಲವು ಲಕ್ಷ ಮಂದಿಯಲ್ಲಿ ಯಾರಾದರೂ ಅಪರೂಪವಾಗಿ ದೈವಜ್ಞಾನ ಪ್ರತ್ಯಕ್ಷವಾಗಿ ಇದೆಯೆಂದು, ಇಲ್ಲಿಯವರೆಗು ತನಗೆ ತಿಳಿದಿರುವುದು ದೈವಜ್ಞಾನ ಅಲ್ಲವೆಂದು ತಿಳಿಯಬಲ್ಲನು." ಇದು ಸತ್ಯ ಎಂದು ಪದೇ ಪದೇ ತಿಳಿಸಿಕೊಳ್ಳುತ್ತಿದ್ದೇವೆ. ನಾವು "ಎಲ್ಲರಪತಿ" ವೈದ್ಯರ ದೃಷ್ಟಿಯಲ್ಲಿನ ಭವರೋಗಿಗಳಾಗಿರುವುದರಿಂದ ಎಷ್ಟೋ ಆನಂದಿಸುತ್ತಿದ್ದೇವೆ. ಒಬ್ಬ ಇಂದೂವಾಗಿ ಬಹಳ ಸಂತೋಷಿಸುತ್ತಿದ್ದೇವೆ. ದೇವರ ಧರ್ಮಗಳು, ದೇವರ ಮತಗಳಿಗೆ ಅತೀತವೆಂದು ನಮ್ಮ ಪ್ರಗಾಢ ವಿಶ್ವಾಸ ಇದಕ್ಕೆ ನೀವು ಬಲವನ್ನು ಕೈಗೂಡಿಸಿದ್ದೀರಿ. ಮಾನವರಿಗೆ ಎಷ್ಟೋ ಒದಗಿಸುತ್ತಿದ್ದೀರಿ. ನಮಗೆ ನಿಜವಾಗಲೂ ಈ ದೇವರ ಮಾರ್ಗ ಸಿಗದ, ತಿಳಿಯದ ಪರಿಸ್ಥಿತಿ ಸ್ವಲ್ಪ ಕಾಲ ಆಲಸ್ಯ ಆಗಿದ್ದರೆ ಸೂಕ್ಷ್ಮಗಳಾಗಿ ಉಳಿಯುತ್ತಿದ್ದೆವು. ಈಗ ಭಯವಿಲ್ಲ, ಇದಕ್ಕೂ 2 ತಿಂಗಳ ಕೆಳಗಿನವರೆಗು ಮಾನವ ಜನ್ಮ ಏಕೆ, ಮಾನವ ಜನ್ಮ ಇಷ್ಟು ನರಕವಾ ಅನಿಸುತ್ತಿತ್ತು. ಈಗಿನ ಸ್ಥಿತಿಯಲ್ಲಿ ಪ್ರತಿ ದಿನ ಆತ್ಮಾನಂದವನ್ನು ಹೊಂದುತ್ತಿದ್ದೇವೆ. ಬ್ರಹ್ಮ, ಕಾಲ, ಕರ್ಮ ಗುಣಚಕ್ರಗಳು ಹಣೆಯಲ್ಲಿ ಧರಿಸಿ ಆದಿ, ಸೋಮ, ಮಂಗಳ ವಾರಗಳು 3 ಸಮಯಗಳು, ಮೂರು ವಿಧಗಳ ತ್ರೈತಾರಾಧನೆಯಿಂದ ಅನಂತವಾದ ಶಕ್ತಿಯನ್ನು, ಆತ್ಮಶಕ್ತಿಯನ್ನು ಹೊಂದುತ್ತಾ ಪ್ರತಿ ಭಾನುವಾರ ಗುತ್ತಿ ಆದಿಶೇಷಯ್ಯರವರ ಮನೆಯಲ್ಲಿ ಸತ್ಸಂಗದಲ್ಲಿ, ಶಂಕರಯ್ಯರವರ ದಿವ್ಯ ಸಂದೇಶದಿಂದ, ತಿಂಗಳಲ್ಲಿ ಒಂದು ಬಾರಿ ಬರುವ ಪೌರ್ಣಮಿಗೆ ಚಿನ್ನಪೊಡಮಲ ಕ್ಷೇತ್ರದಲ್ಲಿ ಇರುವ ಪ್ರಬೋಧ ಆಶ್ರಮದಲ್ಲಿ ಶ್ರೀ ಕೃಷ್ಣನನ್ನು ದರ್ಶಿಸಿಕೊಂಡು

ಸ್ವಾಮಿ ದಿವ್ಯ ಸಂದೇಶ ಶ್ರವಣ ಕೇಳಿ ಅಂತರದಲ್ಲಿ "ಸ್ವಾರ್ಥವರರಾಗಿ" "ಬಾಹ್ಯದಲ್ಲಿ ನಿಸ್ವಾರ್ಥವರರಾಗಿ" ಪ್ರವರ್ತಿಸುತ್ತಾ, ಆಚರಿಸುತ್ತಾ ಇನ್ನೂ ಮುಂದಕ್ಕೆ ನಮ್ಮನ್ನು ಜ್ಞಾನ ಯೋಗಿಗಳಾಗಿ, ಕರ್ಮ ಯೋಗಿಗಳಾಗಿ, ಬ್ರಹ್ಮ ಯೋಗಿಗಳಾಗಿ ನಡೆಸಬೇಕೆಂದು, ಪರಮಾತ್ಮ ಶಕ್ತಿ ಯಾವುದಾದರೇ ಭೂಮಿಮೇಲೆ ಅವತರಿಸಿದೆಯೋ, ಆ ಗುರುರಾಯರನ್ನು ಕೋರಿಕೊಳ್ಳುತ್ತಾ ಆತನ ದಿವ್ಯದೃಷ್ಟಿ, ಆತನ ನೋಟ ನಮ್ಮ ಮೇಲೆ ಎಲ್ಲವೇಳೆಯಲ್ಲಿ ಎಲ್ಲ ಜನ್ಮಗಳಿಗೂ ಇರಬೇಕೆಂದು ಆತನಲ್ಲಿ ಐಕ್ಯವಾಗುವವರೆಗು ಹಾಗೇ ಮುಂದುವರಿಯಬೇಕೆಂದು ವಿಶ್ವಾಸಿಸುತ್ತಾ ನಿಮ್ಮ ಭಕ್ತ ಪರಮಾಣುಗಳು...

ಇಂತಿ

ಜಿ. ಶೇಖರ್‌ರಾವು,

ಜಿ. ಲಕ್ಷ್ಮಿಬಾಯಿ

**ಕೊನೆಯದಾಗಿ ಚಿಕ್ಕ ವಿನಂತಿ :-**

ನಿಜವಾದ ಸಾಕಾರವನ್ನು ಒಂದು ಬಾರಿ ದರ್ಶಿಸಿ ಅವರ ಪಾದಪದ್ಮಗಳಿಗೆ ನಮಸ್ಕರಿಸಿ ಒಂದು ಫೋಟೋ ತೆಗೆಸಿಕೊಂಡು ಭದ್ರವಾಗಿ ಇಟ್ಟುಕೊಳ್ಳಬೇಕೆಂದು, ಈ.. ನಿಮ್ಮ... ಭಕ್ತ ಪರಮಾಣುಗಳ ಆಸೆಯನ್ನು ಮನ್ನಿಸುತ್ತೀರೆಂದು ತಿಳಿಯುತ್ತಾ ಕರೆಸಿಕೊಳ್ಳುತ್ತೀರೆಂದು ಖಚಿತವಾಗಿ ನಂಬುತ್ತಾ ಮನಃಪೂರ್ವಕವಾಗಿ ನಮಸ್ಕರಿಸಿಕೊಳ್ಳುತ್ತಿದ್ದೇನೆ.

**ಓಂ ಆಚಾರ್ಯ ಪ್ರಬೋಧಾನಂದ ಯೋಗೀಶ್ವರಾಯನಮಃ**

*****

# ಕೊನೆಯ ಮಾತು

ನಾವು ಧರ್ಮಶಾಸ್ತ್ರವನ್ನು ಕುರಿತು ದೇವರು ಹೇಳಿರುವುದೇ ಧರ್ಮಶಾಸ್ತ್ರವೆಂದರೂ ನಂಬದೇ ಕೆಲವರು ಮೋಷೇ ಬರೆದಿರುವುದೇ ಧರ್ಮಶಾಸ್ತ್ರ, ಅದನ್ನು ಕುರಿತೇ ಯೇಸು ಪ್ರಸ್ತಾಪಿಸಿದ್ದಾನೆ ಹೊರತು ನೀವು ಹೇಳಿದಹಾಗೆ ಯೇಸು ಹೇಳಲಿಲ್ಲ ಎನ್ನುವವರು ಇದ್ದಾರೆ. ಮತ್ತೆ ಕೆಲವರು "ಧರ್ಮಶಾಸ್ತ್ರವನ್ನು ಕುರಿತು ನೀವು ಪಕ್ಕ ದಾರಿ ಹಿಡಿಸುತ್ತಿದ್ದೀರ. ವಾಸ್ತವವಾಗಿ ಈಸಾ ಹೇಳಿದ ಇಂಜೀಲ್ ಗ್ರಂಥವೇ ಧರ್ಮಶಾಸ್ತ್ರವೆಂದು" ಅನ್ನುತ್ತಿದ್ದಾರೆ. ಮತ್ತೆ ಕೆಲವರು ಮೂಸಾ ಹೇಳಿದ ತೌರಾತ್ ಗ್ರಂಥವೇ ಧರ್ಮಶಾಸ್ತ್ರವೆಂದು ಕೆಲವರನ್ನುತ್ತಿದ್ದಾರೆ. ಯಾರೇನು ಹೇಳಿದರೂ ಯಾವುದನ್ನು ನಾನು ಕುರುಡಾಗಿ ಖಂಡಿಸುವುದಿಲ್ಲ. ನಾನು ಪ್ರತಿಯೊಂದಕ್ಕೂ ಒಂದು ಶಾಸ್ತ್ರಬದ್ಧತೆ, ಸೂತ್ರಬದ್ಧತೆ ಇರಬೇಕೆಂದು ಹೇಳುತ್ತಿದ್ದೇನೆ. ಸೂತ್ರದ ಪ್ರಕಾರ ಧರ್ಮಗಳು ಇರುವ ಗ್ರಂಥ ಯಾವುದಾದರೂ ಧರ್ಮಶಾಸ್ತ್ರವೇ ಆಗುತ್ತದೆ. ದೇವರ ಧರ್ಮಗಳು ಇರುವ ಗ್ರಂಥಯಾವುದಾದರೂ ಅದು ದೈವ ಗ್ರಂಥವೇ ಆದಹಾಗೇ, ಧರ್ಮಗಳು ಇರುವ ಗ್ರಂಥಯಾವುದಾದರೂ ಧರ್ಮ ಶಾಸ್ತ್ರವೇ ಆಗುತ್ತದೆ. ಆದರೇ ಮೇಲೆ ಹೇಳಿದ ಇಂಜೀಲ್ ಗ್ರಂಥವೂ, ತೌರಾತ್ ಗ್ರಂಥವನ್ನು ಕುರಿತು ನನ್ನ ಉದ್ದೇಶವನ್ನು ತಿಳಿಸುತ್ತಿದ್ದೇನೆ ನೋಡಿರಿ.

ಈ ಗ್ರಂಥಗಳ ಹೆಸರುಗಳು ಖುರ್ಆನ್‌ನಲ್ಲಿ ಮೂರನೆ ಸುರಾದಲ್ಲಿ ಮೂರನೇ ಆಯತ್‌ನಲ್ಲಿ ಇವೆ. 3ನೇ ಸೂರಾ, 3ನೇ ಆಯತ್‌ನಲ್ಲಿ ಹೀಗೆ ಇದೆ. "ಆತನು ಸತ್ಯವಾದ ಈ ದಿವ್ಯ ಗ್ರಂಥವನ್ನು (ಖುರ್ಆನ್‌ನನ್ನು) ಓ ಪ್ರವಕ್ತಾ! ನಿನ್ನ ಮೇಲೆ ಅವತರಿಸುವಂತೆ ಮಾಡಿದ್ದಾನೆ. ಇದು ಪೂರ್ವದಲ್ಲಿ ಅವತರಿಸುವಂತೆ ಮಾಡಿದ ಗ್ರಂಥಗಳಲ್ಲಿನ ವಾಕ್ಯಗಳನ್ನು ಧೃಡಪಡಿಸುತ್ತಿದೆ. ದೇವರು ಪೂರ್ವದಲ್ಲಿ ತೌರಾತ್ ಮತ್ತು ಇಂಜೀಲು ಗ್ರಂಥಗಳನ್ನು ಅವತರಿ ಸುವಂತೆ ಮಾಡಿದ್ದಾನೆ." ಎಂದು ಖುರ್ಆನ್ ಗ್ರಂಥದಲ್ಲಿ ಹೇಳಿದೆ ಅಲ್ಲವೆ! ಖುರ್ಆನ್‌ನಲ್ಲಿ ಜಿಬ್ರಯೇಲ್ ಮಹಮ್ಮದ್ ಪ್ರವಕ್ತರವರಿಗೆ ಹೇಳಿದಾಗ ಪ್ರವಕ್ತರವರು ಎರಡು ಗ್ರಂಥಗಳ ಹೆಸರುಗಳನ್ನು ಕೇಳಿದ್ದಾನೆ. ಜಿಬ್ರಯೇಲ್ ಗ್ರಹ ಹೇಳಿದಾಗ

ಎರಡು ಗ್ರಂಥಗಳು ಪೂರ್ವದಲ್ಲಿ ದೇವರು ಅವತರಿಸುವಂತೆ ಮಾಡಿದ ಗ್ರಂಥಗಳೆಂದು ತಿಳಿದುಹೋಗುತ್ತಿದೆ. ಆದರೆ ಆ ಎರಡು ಗ್ರಂಥಗಳಲ್ಲಿ ಇದು ಇಂಜೀಲ್ ಗ್ರಂಥವೆಂದು, ಇದು ತೌರಾತ್ ಗ್ರಂಥವೆಂದು ಹೇಳುವುದಕ್ಕೆ ಯಾರಿಗೂ ಅವಕಾಶವಿಲ್ಲ. ಏಕೆಂದರೆ ಜಿಬ್ರಯೇಲ್ ಹೇಳಿದ ನಂತರ ಆ ಎರಡು ಗ್ರಂಥಗಳನ್ನು ಇಂತಹವೆಂದು ಗುರುತಿಸಿದವರಾಗಲಿ, ನೋಡಿದವರಾಗಲಿ ಇಲ್ಲ. ಅವು ಇವೆಯೋ ಇಲ್ಲವೋ ಸಹ ತಿಳಿಯದು. ಈ ಎರಡು ಗ್ರಂಥಗಳು ಖುರ್‌ಆನ್‌ಗಿಂತ ಮೊದಲು ಇರುವ ಗ್ರಂಥಗಳು. ಈ ಎರಡು ಗ್ರಂಥಗಳು ದೇವರಿಂದ ಬಂದಿರುವವಾದ್ದರಿಂದ ಅವು ಎರಡೂ ದೈವ ಗ್ರಂಥಗಳೇ. ಆದರೆ ಇಂದಿನ ಪ್ರಜೆಗಳಿಗೆ ಅವುಗಳ ಇರುವಿಕೆ ತಿಳಿಯದಂತೆ ಹೋಗಿದೆ. ಆದರೆ ಕೆಲವರು ನಮಗೆ ಆ ಗ್ರಂಥಗಳು ತಿಳಿದಿವೆಯೆಂದು ಹೇಳಿಕೊಳ್ಳುವುದು ಸಹ ನಡೆಯುತ್ತಿದೆ. ಕೆಲವರು ಇಂಜೀಲ್ ಗ್ರಂಥವೇ ಬೈಬಲ್ ಅನ್ನುತ್ತಿದ್ದಾರೆ. ಈಸಾಗೆ ದೇವರು ಕೊಟ್ಟಿರುವ ಗ್ರಂಥ ಇಂಜೀಲ್ ಎನ್ನುತ್ತಿದ್ದಾರೆ. ಈಸಾ ಎಂದರೆ ಮರಿಯಮ್ಮ ಕುಮಾರನು ಯೇಸು ಎನ್ನುತ್ತಿದ್ದಾರೆ. ಆದರೆ ಯೇಸು ಎಂದಿಗೂ ಇಂಜೀಲ್ ಗ್ರಂಥವನ್ನು ಕುರಿತು ಹೇಳಲಿಲ್ಲ. ಆತನು ಎಂದೂ ಇಂಜೀಲ್ ಗ್ರಂಥವೊಂದರ ಪ್ರಸ್ತಾವನೆ ತರಲಿಲ್ಲ. ಆದ್ದರಿಂದ ಆ ಮಾತನ್ನು ಸತ್ಯವೆನ್ನುವುದಕ್ಕೆ ಅವಕಾಶವಿಲ್ಲ.

ಇಂಜೀಲ್ ಗ್ರಂಥಕ್ಕಿಂತ ಮೊದಲು ತೌರಾತ್ ಗ್ರಂಥದ ಹೆಸರನ್ನು ಜಿಬ್ರಯೇಲ್ ಹೇಳುವುದು ನಡೆದಿದೆ. ಇದನ್ನನುಸರಿಸಿ ಇಂಜೀಲ್ ಗ್ರಂಥಕ್ಕಿಂತ ಮೊದಲನೆಯದು ತೌರಾತ್ ಗ್ರಂಥವೆಂದು ತಿಳಿಯುತ್ತಿದೆ. ತೌರಾತ್ ಮತ್ತು ಇಂಜೀಲ್ ಎರಡು ಗ್ರಂಥಗಳನ್ನು ದೇವರು ಅವತರಿಸುವಂತೆ ಮಾಡಿದ್ದಾನೆ ಎಂದು ಖುರ್‌ಆನ್ ಮೂರನೇ ಸೂರಾ, ಮೂರನೇ ಆಯತ್‌ನಲ್ಲಿ ಇದೆ. ದೇವರು ಅವತರಿಸುವಂತೆ ಮಾಡುವುದು ಎಂದು ಜಿಬ್ರಯೇಲ್ ಹೇಳಿದ್ದಾನೆ ಅಂದರೆ ಅದು ನೂರಕ್ಕೆ ನೂರುಪಾಲು ನಿಜವೇ. ಆದರೆ ದೇವರು ಗ್ರಂಥಗಳನ್ನು ಅವತರಿಸುವಂತೆ ಮಾಡುವುದೂ ಸಹಾ 42ನೇ ಸೂರಾ 51ನೇ ಆಯತ್‌ನಲ್ಲಿ

ಹೇಳಿದಹಾಗೆ ಮೂರು ವಿಧಾನಗಳಿಂದಲೇ ನಡೆಯಬೇಕು. ಆದರೆ ಮೊದಲನೆ ವಿಧಾನ ಆಕಾಶದಿಂದ ಹೇಳುವುದು ಒಂದೇ ಬಾರಿ ನಡೆಯುತ್ತದೆ. ಆದ್ದರಿಂದ ಉಳಿದ ಎರಡು ವಿಧಾನಗಳಿಂದಲೇ, ಯಾವುದೋ ಒಂದು ವಿಧವಾಗಿ ಎರಡು ಗ್ರಂಥಗಳು ಬಂದಿರುತ್ತವೆ. ಇನ್ನೂ ಆಲೋಚಿಸಿದರೆ ಎರಡು ಗ್ರಂಥಗಳು ಕಾಣಿಸದ ಗ್ರಹದಿಂದ ಅಲ್ಲದೆ ಕಾಣಿಸುವ ಮನುಷ್ಯನಿಂದಲೇ ಹೇಳಲಾಗಿರುವವೆಂದು ಸಹ ಅರ್ಥವಾಗುತ್ತಿದೆ. ಏಕೆಂದರೇ! ತೆರೆಯ ಮರೆಯಲ್ಲಿ ಕಾಣಿಸದೇ ಹೇಳಲಾಗಿರುವ ಗ್ರಂಥ ಖುರ್‌ಆನ್. ಖುರ್‌ಆನ್‌ನಲ್ಲಿ ಖುರ್‌ಆನ್ ಗಿಂತ ಮೊದಲು ಬಂದಿರುವ ಗ್ರಂಥಗಳೆಂದು ಹೇಳಲಾಗಿರುವುದರಿಂದ ಹಾಗೆ ಹೇಳಬೇಕಾಗಿ ಬಂದಿದೆ.

ತೌರಾತ್ ಗ್ರಂಥ ಮೂಸಾ ಪ್ರವಕ್ತನಿಂದ ಹೇಳಲಾಗಿದೆಯೆಂದು ಕೆಲವರು ಅನ್ನುತ್ತಿದ್ದಾರೆ. ಆದರೆ ಮೂಸಾ ಎಂದರೆ ಯಾರೋ ಪೂರ್ತಿಯಾಗಿ ಯಾರಿಗೂ ತಿಳಿಯದು. ಮೂಸಾ ಎಂದರೆ ಮೊಷೇ ಪ್ರವಕ್ತ ಎನ್ನುವವರು ಸಹ ಇದ್ದಾರೆ. ಮೊಷೇ ಬರೆದ ಧರ್ಮಶಾಸ್ತ್ರವೊಂದರ ಹೆಸರೇ ತೌರಾತ್ ಗ್ರಂಥವೆಂದು ಅನ್ನುತ್ತಿದ್ದಾರೆ. ಮೊಷೇ ಬರೆದ ಧರ್ಮಶಾಸ್ತ್ರವನ್ನು ಯಾರಾದರೂ ನೋಡಿದೀರಾ ಎಂದು ಪ್ರಶ್ನಿಸಿದರೆ ನೋಡಿದವರು ಯಾರೂ ಇಲ್ಲ. ಕೆಲವರು ಯೆಶಾಯನನ್ನೆ ಮೊಷೇ ಎಂದು ಹೇಳುವುದು ಸಹ ನಡೆಯುತ್ತಿದೆ. ಯೆಶಾಯ ಬರೆದಿರುವುದನ್ನೇ ಧರ್ಮಶಾಸ್ತ್ರವೆಂದು ಕೆಲವರು ಹೇಳುತ್ತಿದ್ದಾರೆ. ಧರ್ಮಶಾಸ್ತ್ರದಲ್ಲಿನ ಲೇಖನಗಳೇ ಯೇಸು ಜೀವನದಲ್ಲಿ ನೆರವೇರಿವೆಯೆಂದು ಧರ್ಮಶಾಸ್ತ್ರವನ್ನು ನೆರವೇರಿಸುವುದಕ್ಕೇ ನಾನು ಬಂದಿದ್ದೇನೆಂದು ಯೇಸು ಹೇಳಿದ್ದಾನೆಂದು ಸಹ ಹೇಳುತ್ತಿದ್ದಾರೆ. ಯೆಶಾಯ ಬರೆದ ಧರ್ಮಶಾಸ್ತ್ರ ವೊಂದರ ವಾಕ್ಯಗಳೇ ಯೇಸು ಜೀವನದಲ್ಲಿ ಅನೇಕಕಡೆ ನಡೆದಹಾಗೆ ನಾಲ್ಕು ಸುವಾರ್ತೆಗಳಲ್ಲಿ ನೋಡಿದ್ದೇವೆ. ಯೋಹಾನ್ ಸುವಾರ್ತೆ 15ನೇ ಅಧ್ಯಾಯದಲ್ಲಿ 25ನೇ ವಾಕ್ಯದಲ್ಲಿ "ನನ್ನನ್ನು ನಿರ್ಹೇತುಕವಾಗಿ ದ್ವೇಷಿಸಿದರು" ಎಂದು ಧರ್ಮಶಾಸ್ತ್ರದಲ್ಲಿ ಬರೆಯಲಾಗಿರುವ ವಾಕ್ಯ ನೆರವೇರುವಹಾಗೆ ಹೀಗೂ ನಡೆದಿದೆ ಎಂದು ಇದೆ. ಉಳಿದ ಅನೇಕ ಕಡೆ

ಯೆಷಯಾ ಬರೆದ ಲೇಖನಗಳು ನೆರವೇರಿದವು ಎಂದು ಸಹ ಬರೆಯುವುದು ನಡೆದಿದೆ. ಇದೆಲ್ಲವೂ ನೋಡಿದರೇ ಮೊಷೇ, ಯೆಶಾಯ ಇಬ್ಬರೂ ಒಬ್ಬರೇನಾ ಎಂದು ಅನುಮಾನ ಬರಬಹುದು. ಇಬ್ಬರೂ ಒಂದೇ ಎನ್ನುವುದಕ್ಕೆ ಯಾವ ಆಧಾರ ಸಹ ಇಲ್ಲ.

ಅಷ್ಟೇ ಅಲ್ಲದೆ ಯೇಸು ಜೀವನದಲ್ಲಿ ನೆರವೇರಿದ ವಾಕ್ಯಗಳನ್ನು ಧರ್ಮಶಾಸ್ತ್ರವೆನ್ನುವುದು ತಪ್ಪೆಂದು, ಅವು ಜ್ಯೋತಿಷ್ಯಶಾಸ್ತ್ರವಾಗುತ್ತದಾಗಲೀ ಧರ್ಮಶಾಸ್ತ್ರ ಅಲ್ಲವೆಂದು ಮೊದಲೇ ನಾವು ಹೇಳಿಕೊಂಡಿದ್ದೇವೆ. ಆದ್ದರಿಂದ ಖುರ್‌ಆನ್‌ನಲ್ಲಿ ಮೂರನೇ ಸೂರಾ, ಮೂರನೇ ಆಯತ್‌ನಲ್ಲಿ ಹೇಳಿದ ತೌರಾತ್, ಇಂಜೀಲ್ ಗ್ರಂಥಗಳ ವಿಷಯಗಳು ಪೂರ್ತಿಯಾಗಿ ಯಾರಿಗೂ ತಿಳಿಯವೆಂದೇ ಹೇಳಬಹುದು. ನಮಗೆ ತಿಳಿದಿವೆ ಎಂದು ಯಾರು ಹೇಗೆ ಮಾತನಾಡಿದರೂ ಅದಕ್ಕೆ ಸರಿಯಾದ ರೀತಿಯಲ್ಲಿ ಆಧಾರಗಳು ಇಲ್ಲ. ಆದ್ದರಿಂದ ಖುರ್‌ಆನ್ ಗಿಂತ ಮೊದಲಿರುವ ಎರಡು ಗ್ರಂಥಗಳು ಯಾವು ಎಂದು ಯೋಚಿಸಿ ನೋಡಿದರೆ, ಸ್ವಲ್ಪ ಸಮಾಚಾರ ತಿಳಿಯುತ್ತಿದೆ. ಅದು ಏನೆಂದರೇ! ಖುರ್‌ಆನ್ ಗಿಂತ ಮೊದಲು ಬಂದಿರುವ ಎರಡು ಗ್ರಂಥಗಳು ಒಂದು ಪ್ರಥಮ ದೈವ ಗ್ರಂಥ, ಎರಡು ದ್ವಿತೀಯ ದೈವ ಗ್ರಂಥವೆಂದು ನಾವು ಈ ಗ್ರಂಥದಲ್ಲಿ ಮೊದಲೇ ಹೇಳಿಕೊಂಡಿದ್ದೇವೆ. ಈ ಎರಡು ಗ್ರಂಥಗಳು ಹೊರತು ದೇವರಿಂದ ಕೊಡಲಾಗಿರುವ ಗ್ರಂಥಗಳು ಪ್ರಪಂಚದಲ್ಲಿ ಮತ್ತೆಲ್ಲೂ ಇಲ್ಲ. ಆದ್ದರಿಂದ ತೌರಾತ್ ಎನ್ನುವುದು ಪ್ರಥಮ ದೈವ ಗ್ರಂಥವೆಂದೂ, ಇಂಜೀಲ್ ಎನ್ನುವುದು ದ್ವಿತೀಯ ದೈವ ಗ್ರಂಥವೆಂದೂ ಹೇಳಬಹುದು. ಖುರ್‌ಆನ್ ಗ್ರಂಥ ಪೂರ್ವದ ಗ್ರಂಥಗಳಾದ ಎರಡು ಗ್ರಂಥಗಳನ್ನು ಧೃಡಪಡಿಸುತ್ತದೆಂದು ಮೂರನೇ ಸೂರಾ, ಮೂರನೇ ಆಯತ್‌ನಲ್ಲಿ ಇರುವ ವಾಕ್ಯದಲ್ಲಿಯೇ ಹೇಳಿದ್ದಾರೆ. ಆದ್ದರಿಂದ ಈ ವಾಕ್ಯ ಎರಡು ಗ್ರಂಥಗಳು ಇಂತಹವೆಂದು ಹೇಳುವುದಕ್ಕೆ ಶಾಸ್ತ್ರಾಧಾರವಾಗಿದೆ. ಇಂಜೀಲ್ ಗ್ರಂಥವೆಂದರೆ ಬೈಬಲ್ ಗ್ರಂಥವೆಂದು ಸ್ವಲ್ಪ ಸೂಚನಪ್ರಾಯವಾಗಿ ಖುರ್‌ಆನ್‌ನಲ್ಲಿ

ಸೂರಾ 57ರಲ್ಲಿ 27ನೇ ವಾಕ್ಯದಲ್ಲಿ ಸ್ವಲ್ಪ ಸಮಾಚಾರ ಇದೆ. ಆದರೆ ತೌರಾತ್ ಗ್ರಂಥವನ್ನು ಕುರಿತು ಯಾರಿಗು ಎಲ್ಲೂ ಆಧಾರವಿಲ್ಲ.

ಖುರ್‌ಆನ್ ಗ್ರಂಥಕ್ಕಿಂತ ಮೊದಲು ದೇವರುಕೊಟ್ಟ ಗ್ರಂಥಗಳು ನಮಗೆ ತಿಳಿದಮಟ್ಟಿಗೆ ಬೈಬಲ್, ಭಗವದ್ಗೀತೆ. ಆದರೆ ಬೈಬಲ್, ಖುರ್‌ಆನ್ ಎರಡು ಗ್ರಂಥಗಳು ಭಗವದ್ಗೀತೆಯನ್ನೇ ಸಮರ್ಥಿಸುತ್ತಾ ಧೃಡೀಕರಿಸುತ್ತಿವೆ. ಇದು ಧರ್ಮಶಾಸ್ತ್ರವೆಂದು ಭಗವದ್ಗೀತೆಯನ್ನು ಕುರಿತು ಎರಡು ಗ್ರಂಥಗಳೂ ಸಾಕ್ಷಿಯಾಗಿ ಧೃಢಪಡಿಸುತ್ತಿವೆ. ಆದ್ದರಿಂದ ಧರ್ಮಶಾಸ್ತ್ರವೆಂದರೆ ಯೆಶಾಯ ಪ್ರವಕ್ತ ಬರೆದಿರುವುದಲ್ಲ. ಹಾಗೇ ಯೆರಮೀಯ ಪ್ರವಕ್ತ ಬರೆದಿರುವುದು ಅಲ್ಲ. ಯೆಶಾಯ ಬರೆದಿರುವುದು ಭವಿಷ್ಯತ್ತನ್ನು ಹೇಳುವ ಶಾಸ್ತ್ರವೇ ಆಗಲೀ, ಧರ್ಮಶಾಸ್ತ್ರವಲ್ಲವೆಂದು ತಿಳಿಯಬೇಕು. ಅಸಲಾದ ಧರ್ಮಶಾಸ್ತ್ರವನ್ನು ಭಗವದ್ಗೀತೆಯೆಂದು ಭಾರತದೇಶ ದಲ್ಲಿ ಅನ್ನಲಾರದೆ, ಇಜ್ರಾಯೇಲ್ ದೇಶದಲ್ಲಿ ಅವರ ಭಾಷೆಯಲ್ಲಿ ತೌರಾತ್ ಗ್ರಂಥವೆಂದು ಹೇಳಿದ್ದಾರೆಂದು ಅಂದುಕೊಳ್ಳಬಹುದು. ಭಗವದ್ಗೀತೆ ಯನ್ನು ತೌರಾತ್‌ನ್ನು ಏಕ ಮಾಡಿ ನೋಡದೇ ಹೋದರೇ ಪ್ರಪಂಚದಲ್ಲಿ ತೌರಾತ್ ಗ್ರಂಥವೊಂದರ ಕುರುಹು ಕಾಣಿಸುವುದಿಲ್ಲ. ಆದ್ದರಿಂದ ಭಗವದ್ಗೀತೆಯೇ ತೌರಾತ್ ಗ್ರಂಥವೆಂದು ಎಲ್ಲರೂ ಗ್ರಹಿಸಬೇಕು.

ಭಗವದ್ಗೀತೆಯಲ್ಲಿನ ವಚನಗಳನ್ನು ನಂತರ ಬಂದಿರುವ ದೂತನಾಗಲಿ, ಗ್ರಂಥವಾಗಲಿ ಹೇಳಿದರೇ ಆಗ ಆ ವಾಕ್ಯಗಳನ್ನು ಪುನಃ ನೆರವೇರಿಸಿದಂತೆ ಆಗುತ್ತದೆ. ನೆರವೇರಿಸುವುದು ಎಂದರೆ ಆ ವಾಕ್ಯಗಳನ್ನು ಪುನಃ ಹೇಳುವುದೆಂದು ಅರ್ಥ. ಖಂಡಿಸುವುದು ಎಂದರೆ ಆ ವಾಕ್ಯಗಳನ್ನು ಹೇಳದೇ ಬಿಟ್ಟುಹಾಕುವುದೆಂದು ಅರ್ಥ. ಖುರ್‌ಆನ್‌ನಲ್ಲಾಗಲೀ, ಬೈಬಲ್‌ನಲ್ಲಾಗಲೀ ಪೂರ್ತಿ ಭಗವದ್ಗೀತೆ ವೊಂದರ ಸಾರಾಂಶ ಇದೆ. ಆದ್ದರಿಂದ ಗೀತೆಯಲ್ಲಿನ ವಾಕ್ಯಗಳನ್ನು ಬೈಬಲ್, ಖುರ್‌ಆನ್ ಎರಡು ಗ್ರಂಥಗಳು ನೆರವೇರಿಸಿದಂತೇ ಹಾಗೆ ಆಗುತ್ತಿದೆ. ಮಾಯೆ ಭಗವದ್ಗೀತೆ ಹೆಸರನ್ನು ಹೇಳದಂತೆ ಮಾಡಿ, ಅದರ ಸ್ಥಾನದಲ್ಲಿ ತೌರಾತ್

ಎಂದು ಹೇಳುವುದರಿಂದ ಗೀತೆಯಿಂದ ನೋಟವನ್ನು ಪಕ್ಕಕ್ಕೆ ತಿರುಗಿಸಿದಂತಾಗಿದೆ. ನಂತರ ಅದು ಯಾವ ಗ್ರಂಥವೋ ಅರ್ಥವಾಗದಂತೆ ಹೋಗಿದೆ. ಮಾಯೆಯನ್ನು ತೆಗೆದುಹಾಕಿ ನೋಡಿದರೆ ಅಸಲಾದ ಧರ್ಮಶಾಸ್ತ್ರ ಗ್ರಂಥಯಾವುದೋ ತಿಳಿಯಬಲ್ಲದು.

ತೌರಾತ್, ಇಂಜೀಲ್ ಎನ್ನುವ ಪೂರ್ವ ಗ್ರಂಥಗಳನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ ಮುಸ್ಲೀಮ್ ಹಿರಿಯರು ತಮ್ಮ ಉದ್ದೇಶವನ್ನು ಈ ವಿಧವಾಗಿ ದಿವ್ಯ ಖುರ್‌ಆನ್ ಸಂದೇಶ ಎನ್ನುವ ಗ್ರಂಥದಲ್ಲಿ ಬರೆದಿದ್ದಾರೆ ನೋಡಿ. "ಇಲ್ಲಿ ಖುರ್‌ಆನ್‌ನಲ್ಲಿ ಹೆಸರಿಸಲಾದ ಇಂಜೀಲ್ ಮತ್ತು ತೌರಾತ್ ಗ್ರಂಥಗಳು ಎಂದರೆ ಈಸಾ ಮತ್ತು ಮೂಸಾಗಳ ಮೇಲೆ ಅವತರಿಸುವಂತೆ ಮಾಡಿದ ದಿವ್ಯ ಗ್ರಂಥಗಳೆಂದು ಅರ್ಥ. ಆ ಅಸಲು ದಿವ್ಯ ಗ್ರಂಥಗಳು ಈಗ ಪ್ರಪಂಚದಲ್ಲಿ ಇಲ್ಲ. ಮೂಸಾ ಮತ್ತು ಈಸಾಗಳ ಮೇಲೆ ಅವತರಿಸುವಂತೆ ಮಾಡಿದ ತೌರಾತ್ ಮತ್ತು ಇಂಜೀಲ್ ಗ್ರಂಥಗಳ ಭಾಷೆ ಗ್ರೀಕು ಅಲ್ಲ. ಅವು ಯಾವ ಭಾಷೆಯಲ್ಲಿನವೋ ತಿಳಿಯದು" ಎಂದಿದ್ದಾರೆ. ಇನ್ನೂ ಕೆಲವರು ಮುಸ್ಲೀಮ್‌ರು ಬೇರೆ ಬೇರೆ ಅಭಿಪ್ರಾಯಗಳನ್ನು ಈ ಎರಡು ಗ್ರಂಥಗಳನ್ನು ಕುರಿತು ತೋರಿಸಿದ್ದಾರೆ. ಯಾರು ಏನು ಹೇಳಿದರೂ ಇವುಗಳನ್ನು ಕುರಿತು ಖಚಿತವಾಗಿ ತಿಳಿಸಿ ಹೇಳಲಿಲ್ಲ. ಅಂತಹದರಲ್ಲಿ ಅವು ಯಾವುವು ಎಂದು ಕಂಡುಕೊಳ್ಳುವುದಕ್ಕೆ ಒಂದು ಆಧಾರ (ಕ್ಲೂ) ಇದೆ. ಅದೇನೆಂದರೇ! ಖುರ್‌ಆನ್ ಮೂರನೇ ಸೂರಾ, ಮೂರನೇ ಆಯತ್‌ನಲ್ಲಿ ತೌರಾತ್, ಇಂಜೀಲ್ ಎನ್ನುವ ಗ್ರಂಥಗಳ ಹೆಸರುಗಳು ಹೇಳಿದಾಗ ಖುರ್‌ಆನ್ ಗ್ರಂಥ ಆ ಗ್ರಂಥಗಳನ್ನು ಧೃಡಪಡಿಸುತ್ತಿದೆ ಎಂದು ಹೇಳುವುದು ಇದೆ. ಇದರ ಆಧಾರದಿಂದ ಖುರ್‌ಆನ್ ಯಾವ ಗ್ರಂಥಗಳನ್ನು ಧೃಡಪಡಿಸುತ್ತದೋ ಅವುಗಳನ್ನು ತೌರಾತ್, ಇಂಜೀಲ್ ಗ್ರಂಥಗಳೆಂದು ಗ್ರಹಿಸಬಲ್ಲೆವು. ಇಲ್ಲಿ ಕೆಲವರಿಗೆ ಒಂದು ಸಂಶಯ ಬಂದು ಧೃಡಪಡಿಸುವುದು ಎಂದರೆ ಏನು? ಹೇಗೆ ಅರ್ಥ ಮಾಡಿಕೊಳ್ಳಬೇಕೆಂದು ಕೇಳಬಹುದು. ಅದಕ್ಕೆ ಸಮಾಧಾನ ಹೀಗೆ ಇದೆ.

ಈ ವಿಷಯ ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳುತ್ತಿದ್ದೇನೆ ಗಮನಿಸಿರಿ. ದೇಶದಲ್ಲಿ ಮುಖ್ಯವಾಗಿ ಮೂರು ರಾಜಕೀಯ ಪಾರ್ಟೀಗಳಿವೆಯೆಂದುಕೊಳ್ಳಿ. ಅದರಲ್ಲಿ ಯಾವುದೋ ಒಂದು ಪಾರ್ಟಿ ಉಳಿದ ಎರಡು ಪಾರ್ಟೀಗಳಿಗಿಂತ, ನೀತಿ, ನಿಜಾಯಿತೀಯಾಗಿ ಇದೆಯೆಂದು ತಿಳಿದಾಗ ಆ ಪಾರ್ಟೀಯನ್ನೇ ನೀನು ಒಪ್ಪಿಕೊಳ್ಳುತ್ತೀಯ, ಅದಕ್ಕೇ ನಿನ್ನ ಮತವನ್ನು ಹಾಕುತ್ತೀಯ. ಅಷ್ಟೇ ಅಲ್ಲದೆ ನೀನು ಯಾವ ಪಾರ್ಟೀಯನ್ನು ಒಪ್ಪಿಕೊಂಡು ಮತವನ್ನು ಹಾಕಬೇಕೆಂದುಕೊಂಡಿದ್ದೀಯೋ ಅದು ಇಂತಹ ಪಾರ್ಟೀ ಎಂದು ಉಳಿದವರಿಗೂ ಸಹ ತಿಳಿಯುವಹಾಗೆ ಆ ಪಾರ್ಟೀ ಬಾವುಟವನ್ನು ಮನೆಗಾಗಲೀ, ವಾಹನಕ್ಕಾಗಲೀ ಇಟ್ಟುಕೊಳ್ಳುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ಆ ಪಾರ್ಟೀ ಟೋಪಿಯನ್ನು ತಲೆಮೇಲೆ ಇಟ್ಟುಕೊಂಡು ನನಗೆ ಇಷ್ಟವಾದ ಪಾರ್ಟೀ ಇದುಯೆಂದು ತಿಳಿಸುತ್ತೇವೆ. ಅದನ್ನು ನೋಡಿದ ಉಳಿದವರೆಲ್ಲರೂ ಈತನು ಮೆಚ್ಚಿದ ಪಾರ್ಟೀ ಇದುಯೆಂದು ತಿಳಿದುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಬಾವುಟ ವನ್ನು, ಟೋಪೀಯನ್ನು ಧರಿಸಿದ ಪಾರ್ಟೀಯನ್ನು ಈತನು ಬಲಪಡಿಸುತ್ತಾನೆಂದು ಅಂದುಕೊಳ್ಳುತ್ತಾರೆ. ಬಲಪಡಿಸುವುದನ್ನು ಧೃಡಪಡಿಸುವುದು ಎಂದಾಗಲೀ, ಧೃಡೀಕರಿಸುವುದು ಎಂದಾಗಲೀ ಹೇಳಬಹುದು. ಅದೇ ವಿಧವಾಗಿ ಮೂರು ಮತ ಗ್ರಂಥಗಳಲ್ಲಿ ಯಾವ ಮತವನ್ನು ಇಷ್ಟಪಡುವವನು ಆ ಮತದಲ್ಲಿದ್ದು, ಆ ಮತವನ್ನು ಕುರಿತೇ ಧೃಢವಾಗಿ ಹೇಳುತ್ತಿರುವನು. ಆದ್ದರಿಂದ ಹಿಂದುವು ಶ್ಲೋಕಗಳನ್ನು ಹೇಳಿದರೆ, ಕ್ರೈಸ್ತವನು ವಾಕ್ಯಗಳನ್ನು ಹೇಳುತ್ತಿರುತ್ತಾನೆ.

ಇಲ್ಲಿ ಅದೇ ವಿಧವಾಗಿ ತೌರಾತ್ ಗ್ರಂಥವನ್ನಾಗಲೀ, ಇಂಜೀಲು ಗ್ರಂಥವನ್ನಾಗಲೀ ಖುರ್‌ಆನ್ ಧೃಡೀಕರಣ ಮಾಡುತ್ತಿದೆ ಎಂದರೇ, ಆ ಗ್ರಂಥಗಳಲ್ಲಿನ ವಾಕ್ಯಗಳಾಗಲಿ ಇಲ್ಲವೆ ಸಮಾಚಾರವಾಗಲಿ ಖುರ್‌ಆನ್ ಗ್ರಂಥದಲ್ಲಿ ಇದ್ದೇ ಇರುತ್ತದೆ. ಒಂದು ಪಾರ್ಟೀಯನ್ನು ಧೃಡೀಕರಿಸಿದಾಗ ಆ ಪಾರ್ಟೀ ಬಣ್ಣವನ್ನು, ಆ ಪಾರ್ಟೀ ಬಾವುಟವನ್ನು, ಟೋಪಿಯನ್ನು ನಮ್ಮಹತ್ತಿರ ತೋರಿಸಿದ

ಹಾಗೆ ಅಥವಾ ಇಟ್ಟುಕೊಂಡಹಾಗೆ ಒಂದು ಗ್ರಂಥವನ್ನು ಮತ್ತೊಂದು ಗ್ರಂಥ ಧೃಡೀಕರಿಸುತ್ತದೆಂದರೆ ಮೊದಲನೆ ಗ್ರಂಥದಲ್ಲಿನ ವಿಷಯಗಳು ಎರಡನೆ ಗ್ರಂಥದಲ್ಲಿ ಇದ್ದೇ ಇರುತ್ತದೆ. ಹಾಗೆ ಇದ್ದಾಗಲೇ ಇಂತಹದನ್ನು ಧೃಡೀಕರಣ ಮಾಡುತ್ತಿದೆ ಯೆಂದು ಹೇಳುವುದಕ್ಕೆ ಅವಕಾಶವಿರುತ್ತದೆ. ಈಗ ತೌರಾತ್ ಮತ್ತು ಇಂಜೀಲು ಗ್ರಂಥಗಳು ಯಾವುವೋ ತಿಳಿಯದಿರುವಾಗ ಖುರ್‌ಆನ್ ಗ್ರಂಥದಲ್ಲಿ ಯಾವ ವಿಷಯಗಳಿವೆಯೋ ಆ ವಿಷಯಗಳನ್ನು ಆಧಾರ ಮಾಡಿಕೊಂಡು ಆ ಎರಡು ಗ್ರಂಥಗಳನ್ನು ಕಂಡುಕೊಳ್ಳಬಹುದು.

ಖುರ್‌ಆನ್ ಗ್ರಂಥ ಪೂರ್ವದಲ್ಲಿ ದೇವರುಕೊಟ್ಟ ತೌರಾತ್, ಇಂಜೀಲು ಗ್ರಂಥಗಳನ್ನು ಧೃಡೀಕರಿಸುತ್ತಿದೆಯೆಂದು ಖುರ್‌ಆನ್ ಗ್ರಂಥದಲ್ಲಿನ ಮೂರನೇ ಸೂರಾ, ಮೂರನೇ ಆಯತ್‌ಆಗಿ ಇರುವುದರಿಂದ ಖುರ್‌ಆನ್‌ನಲ್ಲಿನ ವಿಷಯಗಳು ಎಲ್ಲಿವೆಯೋ ಆ ವಿಷಯಗಳಿರುವ ಗ್ರಂಥಗಳು ತೌರಾತ್, ಇಂಜೀಲು ಗ್ರಂಥಗಳೆಂದು ಹೇಳಬಹುದು. ಸೈಕಲ್ ಗುರುತನ್ನು, ಹರಿಶಿಣ ಟೋಪೀಯನ್ನು ಆಧಾರ ಮಾಡಿಕೊಂಡು ಅವು ಎಲ್ಲಿವೆಯೋ ಅಲ್ಲಿ ತೆಲುಗುದೇಶಂ ಪಾರ್ಟೀ ಇದೆಯೆಂದು ಗುರುತಿಸಿದಹಾಗೆ, ಖುರ್‌ಆನ್‌ನಲ್ಲಿನ ವಿಷಯಗಳನ್ನನುಸರಿಸಿ ಅವು ಇರುವ ತೌರಾತ್, ಇಂಜೀಲು ಗ್ರಂಥಗಳನ್ನು ಸುಲಭವಾಗಿ ಗುರುತಿಸ ಬಹುದು. ಆ ವಿಧವಾಗಿ ಖುರ್‌ಆನ್ ಜ್ಞಾನವನ್ನು ಆಧಾರ ಮಾಡಿಕೊಂಡು ಅನ್ವೇಷಣೆ ಮಾಡಿದರೆ, ಯೇಸು ಹೇಳಿದ ಬೈಬಲ್ ಇಂಜೀಲು ಗ್ರಂಥವೆಂದೂ, ಕೃಷ್ಣನು ಹೇಳಿದ ಭಗವದ್ಗೀತೆ ತೌರಾತ್ ಗ್ರಂಥವೆಂದು ತಿಳಿಯುತ್ತಿದೆ. ಬೈಬಲ್ ಗ್ರಂಥವೂ ಸಹ ಕೊನೆಗೆ ತನಗಿಂತ ಮೊದಲು ಬಂದಿರುವ ಧರ್ಮಶಾಸ್ತ್ರವಾದ ಗೀತೆಯನ್ನು ಸಮರ್ಥಿಸುತ್ತಿದೆ. ಆದ್ದರಿಂದ ಬೈಬಲ್ ಎನ್ನುವ ಇಂಜೀಲು ಗ್ರಂಥವೂ ಮತ್ತು ಖುರ್‌ಆನ್ ಗ್ರಂಥವೂ ಎರಡೂ ಸೇರಿ ತೌರಾತ್ ಎನ್ನುವ ಭಗವದ್ಗೀತೆಯನ್ನು ಸಮರ್ಥಿಸುತ್ತಿವೆಯೆಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿರುವ ವಿಷಯಗಳನ್ನೇ ಇತ್ತ ಬೈಬಲ್, ಅತ್ತ ಖುರ್‌ಆನ್ ಗ್ರಂಥಗಳು ಎರಡೂ ತಮ್ಮಲ್ಲಿ

ಹೊಂದಿರುವುದರಿಂದ, ಕೊನೆಗೆ ಎರಡು ಗ್ರಂಥಗಳು ಭಗವದ್ಗೀತೆಯನ್ನು ಧೃಡೀಕರಿಸುತ್ತಿವೆಯೆಂದು ಹೇಳುವುದೇ ಅಲ್ಲದೆ, ತೌರಾತ್ ಗ್ರಂಥವೆನ್ನುವುದು ಅಗಮ್ಯಗೋಚರವಾಗಿದ್ದರೂ ಕೊನೆಗೆ ಭಗವದ್ಗೀತೆಯೆಂದು ತಿಳಿದುಹೋಗಿದೆ. ಅದು ಅಲ್ಲವೆಂದು ಖಂಡಿಸುವುದಕ್ಕೆ ಅವಕಾಶವಿಲ್ಲದೆ ಉಳಿದ ಎರಡು ಗ್ರಂಥಗಳಲ್ಲಿನ ಜ್ಞಾನ ವಿಷಯಗಳೇ ಸಾಕ್ಷಿಯಾಗಿ ಇವೆ.

ಕೆಲವು ಆಧಾರಗಳ ಪ್ರಕಾರ ತೌರಾತ್, ಇಂಜೀಲು ಅನ್ನುವ ಗ್ರಂಥಗಳನ್ನು ಗುರುತಿಸಿದ್ದೇವೆ. ದೇವರುಕೊಟ್ಟ ಎರಡು ಗ್ರಂಥಗಳು ನಮಗೆ ಹತ್ತಿರವಾಗಿಯೇ ಇರುವಹಾಗೆ ತಿಳಿದುಹೋಗಿದೆ. ಖುರ್‌ಆನ್ ಹೇಳಿ 1400 ವರ್ಷಗಳಾಗಿದೆ. ಆಗಲೇ ಜಿಬ್ರಯೇಲ್ ದೇವರುಕೊಟ್ಟ ಎರಡು ಪೂರ್ವ ಗ್ರಂಥಗಳನ್ನು ಕುರಿತು ಹೇಳಿದ್ದಾನೆ ಎಂದರೆ, ಇರುವ ಅವುಗಳನ್ನೇ ಹೇಳಿರುತ್ತಾನೆ ಅನ್ನುವ ನಂಬಿಕೆಯಿಂದ ನೋಡಿದರೆ, ಖುರ್‌ಆನ್‌ನಲ್ಲಿರುವ ವಾಕ್ಯಗಳನ್ನನುಸರಿಸು ಎರಡು ಗ್ರಂಥಗಳನ್ನು ಗುರುತಿಸಿದ್ದೇವೆ. ಆ ಎರಡರಲ್ಲಿ ತೌರಾತ್ ಎನ್ನುವ ಗ್ರಂಥವೇ ಮುಖ್ಯವಾದದ್ದೆಂದು ಸಹ ಅರ್ಥವಾಗಿದೆ. ಖುರ್‌ಆನ್ ಮತ್ತು ಇಂಜೀಲ್ (ಬೈಬಿಲ್) ಎರಡು ಗ್ರಂಥಗಳು ಕೊನೆಗೆ ತೌರಾತ್ (ಭಗವದ್ಗೀತೆ) ಗ್ರಂಥವನ್ನೇ ಬಲಪಡಿಸುತ್ತಿವೆಯೆಂದು ತಿಳಿದುಹೋಗಿದೆ. ಇದನ್ನನುಸರಿಸಿ ಖುರ್‌ಆನ್ ಬಲಪಡಿಸುತ್ತಿರುವ, ಖುರ್‌ಆನ್‌ಗಿಂತ ಮೊದಲು ಬಂದು ಯಾರೂ ಗುರುತಿಸಲಾರದ ವಿಧವಾಗಿ ಇರುವ, ಎರಡು ಗ್ರಂಥಗಳಲ್ಲಿ ಇಂಜೀಲ್ ಗ್ರಂಥವೂ ಸಹ ತೌರಾತ್ ಗ್ರಂಥವನ್ನೇ ಬಲಪಡಿಸುತ್ತಿದ್ದ ಹಾಗೆ ಮತ್ತಾಯ ಸುವಾರ್ತೆ ಐದನೇ ಅಧ್ಯಾಯದಲ್ಲಿನ 17ನೇ ವಚನವನ್ನನುಸರಿಸಿ ತಿಳಿಯುತ್ತಿದೆ. ಖುರ್‌ಆನ್‌ನಲ್ಲಿ ಮೂರನೇ ಸೂರಾ, ಮೂರನೇ ಅಯತ್‌ನಲ್ಲಿ ಮತ್ತು ಆರನೇ ಸೂರಾ, 92ನೇ ಆಯತ್‌ನಲ್ಲಿ ಖುರ್‌ಆನ್ ನಾನು ಅವತರಿಸುವಂತೆ ಮಾಡಿದ ಗ್ರಂಥವೇ. ಇದು ಎಷ್ಟೋ ಶುಭಪ್ರಧವಾದದ್ದು. ಇದಕ್ಕಿಂತ ಮೊದಲು ಅವತರಿಸುವಂತೆ ಮಾಡಿದ ಗ್ರಂಥಗಳನ್ನು ಧೃಡೀಕರಿಸುತ್ತದೆಂದು ಹೇಳುವುದು ನಡೆದಿದೆ. ಮೊದಲು ಬಂದ ಎರಡು

ಗ್ರಂಥಗಳಲ್ಲಿ ಬೈಬಲ್ (ಇಂಜೀಲ್) ಗ್ರಂಥದಲ್ಲಿ ಅದಕ್ಕಿಂತ ಮೊದಲು ಬಂದಿರುವ ಭಗವದ್ಗೀತೆ (ತೌರಾತ್) ಗ್ರಂಥವನ್ನು ಬಲಪಡಿಸುತ್ತಾ "ಧರ್ಮಶಾಸ್ತ್ರವನ್ನಾದರೂ, ಪ್ರವಕ್ತರ ವಚನಗಳನ್ನಾದರೂ, ತೆಗೆದುಹಾಕುವುದಕ್ಕೆ ಬರಲಿಲ್ಲ, ನಾನು ನೆರವೇರಿಸುವುದಕ್ಕೆ ಬಂದಿದ್ದೇನೆ" ಎಂದು ಯೇಸು ಹೇಳಿದಹಾಗೆ ಇದೆ. ಇದನ್ನನು ಸರಿಸಿ ಬೈಬಲ್ ಗ್ರಂಥವೂ ಸಹ ಭಗವದ್ಗೀತೆಯನ್ನೇ ಬಲಪಡಿಸುತ್ತಿದೆ.

ಮೂರು ಕಾಲಗಳಲ್ಲಿ, ಎರಡು ದೇಶಗಳಲ್ಲಿ ದೇವರು ಕೊಟ್ಟಿರುವ ಮೂರು ಗ್ರಂಥಗಳು ಬಂದಿವೆ. ಮೂರರಲ್ಲಿ ದೇವರ ಧರ್ಮಗಳೇ ಇವೆ. ಮೂರು ಗ್ರಂಥಗಳಲ್ಲಿ ದೇವರ ಜ್ಞಾನವೇ ಇರುವಾಗ, ಮೂರೂ ದೇವರ ಗ್ರಂಥಗಳೇ ಆದಾಗ ಪ್ರಜೆಗಳು ತಿಳಿದುಕೊಳ್ಳುವಸಲುವಾಗಿ ಎರಡು ದೇಶಗಳಲ್ಲಿ, ಮೂರು ಕಾಲಗಳಲ್ಲಿ ಹೇಳಿರುವಾಗ, ಅವುಗಳಿಂದ ಜನರು ದೇವರ ಜ್ಞಾನವನ್ನೇ ತಿಳಿದುಕೊಂಡಂತಾದಾಗ ಮೂರರಲ್ಲಿ ಎರಡು ಗ್ರಂಥಗಳು ಒಂದು ಗ್ರಂಥವನ್ನು ಏಕೆ ಧೃಡೀಕರಿಸಬೇಕಾಗಿ ಬಂದಿದೆ? ದೇವರ ಖುರ್‌ಆನ್ ಗ್ರಂಥ ಅದಕ್ಕಿಂತ ಮೊದಲು ಇರುವ ದೈವ ಗ್ರಂಥಗಳನ್ನು ಏಕೆ ಧೃಡೀಕರಿಸುತ್ತಿವೆ? ಅದೇ ವಿಧವಾಗಿ ಬೈಬಲ್ ಗ್ರಂಥ ಅದಕ್ಕಿಂತ ಮೊದಲು ಬಂದಿರುವ ಭಗವದ್ಗೀತೆಯನ್ನು ಏಕೆ ಸಮರ್ಥಿಸುತ್ತಿದೆ? ಮೂರರಲ್ಲಿ ಒಂದೇ ದೇವರ ಜ್ಞಾನ ಇರುವಾಗ ಎರಡು ಗ್ರಂಥಗಳು ಅವುಗಳಿಗಿಂತ ಮೊದಲು ಬಂದಿರುವ ಗ್ರಂಥವನ್ನು ಧರ್ಮಶಾಸ್ತ್ರವೆಂದು ಹೇಳುತ್ತಾ, ಏಕೆ ಧೃಡೀಕರಿಸಬೇಕಾಗಿದೆಯೆಂಬ ಪ್ರಶ್ನೆ ಬಹಳ ಜನರಿಗೆ ಬರಬಹುದು. ನನಗೂ ಸಹ ಅದೇ ಪ್ರಶ್ನೆ ಬಂದಿದೆ. ಆದರೇ ಉತ್ತರ ಏನು ಬರುತ್ತದೋ ನೋಡೋಣ.

ಖುರ್‌ಆನ್, ಬೈಬಲ್, ಭಗವದ್ಗೀತೆ ಮೂರು ಗ್ರಂಥಗಳು ದೈವ ಗ್ರಂಥಗಳೇಯೆಂದು ಮೊದಲಿನಿಂದ ಹೇಳುತ್ತಲೇ ಬರುತ್ತಿದ್ದೇವೆ. ಮೂರರಲ್ಲಿ ದೇವರ ಜ್ಞಾನ, ದೇವರ ಧರ್ಮಗಳೇ ಇವೆಯೆಂದು ಸಹ ಹೇಳಿದ್ದೇವೆ. ಆದ್ದರಿಂದ ಕೊನೆಯಲ್ಲಿ ಬಂದಿರುವ ಖುರ್‌ಆನ್‌ನನ್ನು ಅಂತಿಮ ದೈವ ಗ್ರಂಥವೆಂದು,

ಮಧ್ಯದಲ್ಲಿ ಬಂದಿರುವ ಬೈಬಲ್‌ನ್ನು ದ್ವಿತೀಯ ದೈವ ಗ್ರಂಥವೆಂದೂ, ಮೊದಲು ಬಂದಿರುವ ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವೆಂದೂ ಹೇಳಿಕೊಂಡಿದ್ದೇವೆ. ಬಂದಿರುವ ಮುಂದೆ ಹಿಂದೆ ಕಾಲಗಳನ್ನನುಸರಿಸಿ ಪ್ರಥಮ, ಅಂತಿಮ ಎಂದು ಹೇಳಿಕೊಂಡಿದ್ದೇವಾಗಲೀ, ಇದರಲ್ಲಿ ಹೆಚ್ಚು ಅದರಲ್ಲಿ ಕಡಿಮೆ ಇದೆಯೆನ್ನುವ ಭಾವದಿಂದ ಹೇಳಲಿಲ್ಲ. ನಾವು ಹೇಳಿಕೊಂಡಷ್ಟರವರೆಗೂ ಇಂತಹ ಗ್ರಂಥವನ್ನು ಹೆಚ್ಚು ಎಂದಾಗಲಿ, ಇಂತಹ ಗ್ರಂಥವನ್ನು ಕಡಿಮೆ ಎಂದಾಗಲಿ ಹೇಳಿಕೊಂಡಿಲ್ಲ. ನಮ್ಮ ದೃಷ್ಠಿಯಲ್ಲಿ ದೇವರು ಕೊಟ್ಟ ಮೂರು ಗ್ರಂಥಗಳು ಸಮಾನವೇ. ಯಾವ ಗ್ರಂಥವನ್ನು ಅನುಸರಿಸಿದರೂ ದೈವಮಾರ್ಗವನ್ನೇ ಅನುಸರಿಸಿದಂತಾಗುತ್ತದೆ. ಒಂದುವೇಳೆ ಯಾರಾದರೂ ಈ ಗ್ರಂಥ ಆ ಗ್ರಂಥಕ್ಕಿಂತ ದೊಡ್ಡದೆಂದು ಅಂದರೆ, ಆತನು ಗ್ರಂಥಗಳನ್ನು ಕುರಿತು ಪೂರ್ತಿಯಾಗಿ ತಿಳಿಯದವನಾಗಿ ಇರುತ್ತಾನೆ. ಮೂರು ಗ್ರಂಥಗಳನ್ನು ಪೂರ್ತಿಯಾಗಿ ನೋಡಿದವನು ಯಾರಾದರೂ ಇದು ದೊಡ್ಡದು, ಇದು ಕಡಿಮೆ ಎಂದು ಹೇಳುವುದಕ್ಕೆ ಅವಕಾಶವಿಲ್ಲದಂತೆ ಮೂರು ಗ್ರಂಥಗಳು ಇವೆಯೆಂದು ಹೇಳಬಹುದು. ಕೆಲವರು ಮೂರರಲ್ಲಿ ಒಂದು ಗ್ರಂಥವನ್ನು ಕುರಿತು ದೊಡ್ಡದಾಗಿ ಹೇಳುತ್ತಾ, ಉಳಿದ ಎರಡು ಗ್ರಂಥಗಳನ್ನು ದೊಡ್ಡದಾಗಿ ಹೇಳಲಿಲ್ಲವೆಂದರೂ ಆತನು ಸ್ವಮತಾಭಿಮಾನಿಯಾಗಿ, ಪರಮತ ದ್ವೇಷಿಯಾಗಿ ಇರುತ್ತಾನೆ. ಅಂಥವರೇ ನಮ್ಮ ಮತ ದೊಡ್ಡದು, ನಮ್ಮ ಮತ ಗ್ರಂಥ ದೊಡ್ಡದು, ನಮ್ಮ ಮತವನ್ನೇ ಅನುಸರಿಸಿರಿ, ನಮ್ಮ ಮತದಲ್ಲಿ ವಿನಃ ನಿಮಗೆ ಸ್ವರ್ಗ ಬರುವುದಿಲ್ಲ ಅನ್ನುತ್ತಿರುವರು.

ಅಂಥವರು ಎಷ್ಟು ದೊಡ್ಡವರಾದರೂ, ಎಷ್ಟೋ ದೊಡ್ಡ ಬೋಧಕ ರಾಗಿದ್ದರೂ, ಅವರಿಗೆ ಮತಸ್ವಾರ್ಥ ಹೊರತು ದೈವಜ್ಞಾನ ಯಾವ ಮಾತ್ರ ಇಲ್ಲವೆಂದು ಹೇಳಬಹುದು. ಎಷ್ಟುದೊಡ್ಡ ಬೋಧಕರಾದರೂ ಅವರಿಗೆ ಸ್ವಲ್ಪವೂ ಸಹ ದೈವ ಜ್ಞಾನ ಇಲ್ಲವೆಂದೇ ಹೇಳುವುದಕ್ಕೆ ಆಧಾರ ಅವರ ಮಾತುಗಳಲ್ಲೇ ಇದೆ. ಎಂದಾದರೆ ನಮ್ಮ ಮತದಲ್ಲೇ ಸ್ವರ್ಗ ಬರುತ್ತದೆ, ಉಳಿದ ಮತಗಳಲ್ಲಿ ನರಕ ಬರುತ್ತದೆ ಅನ್ನುತ್ತಿರುತ್ತಾರೋ ಆಗಲೇ ಇವರಿಗೆ ದೇವರ ಜ್ಞಾನ

ತಿಳಿಯದೆಂದು ಹೇಳಬಹುದು. ಮೂರು ದೈವ ಗ್ರಂಥಗಳು ದೇವರನ್ನು ಸೇರಿಕೊಳ್ಳುವ ಮಾರ್ಗವನ್ನು ಬೋಧಿಸುತ್ತಿವೆ ಹೊರತು, ಸ್ವರ್ಗಕ್ಕೆ ಹೋಗುವ ಮಾರ್ಗವನ್ನು ತೋರಿಸುತ್ತಿಲ್ಲ. ಸ್ವರ್ಗ ನರಕಗಳು ಮನುಷ್ಯರು ಮಾಡಿಕೊಳ್ಳುವ ಪಾಪ ಪುಣ್ಯಗಳನ್ನನುಸರಿಸಿ ಬರುತ್ತವಾಗಲಿ, ದೇವರು ಹೇಳಿದ ಜ್ಞಾನವನ್ನನುಸರಿಸಿ ಬರುವುದಿಲ್ಲ. ದೇವರ ಜ್ಞಾನವನ್ನನುಸರಿಸಿ ಮೋಕ್ಷ ಲಭಿಸಬಲ್ಲದು. ಮೋಕ್ಷವನ್ನೇ ಮುಕ್ತಿ ಎನ್ನುತ್ತಾರೆ. ಮುಕ್ತಿಯನ್ನೇ ಜನ್ಮ ರಾಹಿತ್ಯವೆಂದು ಗ್ರಂಥಗಳಲ್ಲಿ ಹೇಳಲಾಗಿದೆ. ಪುಣ್ಯದಿಂದ ಸುಖಗಳು ಬಂದರೆ ಆ ಸುಖಗಳು ಅನುಭವಿಸುವ ಸ್ಥಳ, ಸುಖಗಳ ನಿಲಯ ಸ್ವರ್ಗ.  ಸುಖಗಳಲ್ಲಿರುವವನಿಗೆ ದೇವರ ಬೆಲೆ ತಿಳಿಯದು, ದೇವರ ಜ್ಞಾನ ತಿಳಿಯದು. ದೇವರೆಂದರೆ ಭಯ ಇರುವುದಿಲ್ಲ. ಅಂಥವರಿಗೆ ಜ್ಞಾನವಿರುತ್ತದೆಂದರೂ, ಅವರು ದೇವರ ಜ್ಞಾನವನ್ನು ಅನುಸರಿಸಿದ್ದಾರೆಂದರೂ ಪೂರ್ತಿ ತಪ್ಪಾಗುತ್ತದೆ. ದೇವರ ಜ್ಞಾನದಿಂದ ಸ್ವರ್ಗ ಬರುತ್ತದೆಂದರೆ ಅದಕ್ಕಿಂತ ಅಜ್ಞಾನಿ ಇರುವುದಿಲ್ಲ. ಆದ್ದರಿಂದ ಅವರ ಮಾತುಗಳನ್ನನುಸರಿಸಿ ಅವರಲ್ಲಿನ ಜ್ಞಾನ ತಿಳಿದುಹೋಗುತ್ತದೆ. ಅಂತಹ ಅಜ್ಞಾನಿಗಳು ಮತಗಳನ್ನು ಕುರಿತು ಹೇಳಿ, ಅವರ ಮತವನ್ನು ಅಭಿವೃದ್ಧಿ ಮಾಡಿಕೊಳ್ಳಬೇಕೆಂದು ನೋಡುತ್ತಿರುತ್ತಾರೆ. ಅಂಥವರ ದೃಷ್ಠಿಯಲ್ಲಿ ಯಾವುದೋ ಒಂದು ಗ್ರಂಥ ದೊಡ್ಡದಾಗಿ ಇದ್ದರೆ ಉಳಿದ ಎರಡು ಗ್ರಂಥಗಳು ಕಡಿಮೆಯಾಗಿ ಇರುತ್ತವೆ. ಅದೂ ತನ್ನ ಮತಕ್ಕೆ ಸಂಬಂಧವಿಲ್ಲದವೆಂದು ಅಂದುಕೊಂಡು ಕಡಿಮೆಯಾಗಿ ಹೇಳುತ್ತಿರುವರು. ಮನುಷ್ಯರಾದವರು ಮೂರು ದೈವಗ್ರಂಥಗಳಲ್ಲಿ ಯಾವ ಒಂದನ್ನೂ ಕಡಿಮೆಯಾಗಿ ಹೇಳುವುದಕ್ಕಾಗಲೀ, ಹೆಚ್ಚಾಗಿ ಹೇಳುವುದಕ್ಕಾಗಲೀ ಅರ್ಹನಲ್ಲ.

ಈಗ ಕೆಲವರು  ಅತೀ ಬುದ್ಧಿವಂತಿಕೆಯಿಂದ ನನ್ನನ್ನು ಒಂದು ಪ್ರಶ್ನೆಯನ್ನು ಕೇಳಬಹುದು. ಅದು ಏನೆಂದರೇ! ಮೂರು ಗ್ರಂಥಗಳೂ ಸಮಾನವೇಯೆಂದು ಒಂದು ಕಡೆ ಹೇಳುತ್ತಾ ನಿನ್ನ ಮತ ಸ್ವಾರ್ಥದಿಂದ, ನಿನ್ನ ಮತಕ್ಕೆ ಸಂಬಂಧಿಸಿದ ಭಗವದ್ಗೀತೆಯನ್ನು ನೀನು ಹೆಚ್ಚಾಗಿ ಹೇಳುತ್ತಿದ್ದೀಯಲ್ಲ! ಎಂದು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರವೇನೆಂದರೆ! ನಾನು ಹಿಂದೂ

ಮತದಲ್ಲಿ ಹುಟ್ಟಿದ ಮಾತು ವಾಸ್ತವವೇ ಆದರೂ, ಹಿಂದೂ ಮತ ಗ್ರಂಥ ಭಗವದ್ಗೀತೆಯೆಂದು ನಾನು ಎಂದಿಗೂ ಅಂದುಕೊಂಡಿಲ್ಲ. ಉಳಿದವರು ಮೂರು ಗ್ರಂಥಗಳನ್ನು ಮೂರು ಮತಗಳಿಗೆ ಸಂಬಂಧವೇರ್ಪಡಿಸಿ ಮಾತನಾಡಿದರೂ, ಮೂರು ಗ್ರಂಥಗಳು ಸರ್ವ ಮಾನವರಿಗೂ ಬೇಕಾಗಿರುವವೇಯೆಂದು, ಯಾವೊಂದು ಗ್ರಂಥವೂ ಯಾವ ಮತವನ್ನು ಕುರಿತು ಹೇಳಲಿಲ್ಲವೆಂದು, ಪ್ರತಿ ಗ್ರಂಥ ಸರ್ವ ಮಾನವರಿಗೂ ಸಂಬಂಧಿಸಿರುವುದೆಂದು, ದೇವರು ಆ ಮೂರು ಗ್ರಂಥಗಳಲ್ಲಿ ಬೋಧಿಸಿದ್ದಾನೆ. ಹಾಗಿರುವಾಗ ಭಗವದ್ಗೀತೆ ಹಿಂದೂ ಮತಕ್ಕೆ ಸಂಬಂಧಿಸಿರುವು ದೆಂದು ಅಂದುಕೊಳ್ಳುವುದು ಪೂರ್ತಿ ಅಜ್ಞಾನವಾಗುತ್ತದೆ. ನಾನು ಉಳಿದ ಎರಡು ಗ್ರಂಥಗಳಿಗಿಂತ ಭಗವದ್ಗೀತೆ ದೊಡ್ಡದೆಂದು ಎಂದಿಗೂ ಹೇಳಲಿಲ್ಲ. ಮೂರೂ ದೈವ ಗ್ರಂಥಗಳೇ ಎಂದು ಹೇಳಿದ್ದೇನೆಂದು ಮರೆಯ ಬಾರದು. ಭಗವದ್ಗೀತೆ, ಬೈಬಲ್, ಖುರ್‌ಆನ್ ಮೂರು ಗ್ರಂಥಗಳಲ್ಲಿ ಭಗವದ್ಗೀತೆ ಯನ್ನು ಉಳಿದ ಎರಡು ಗ್ರಂಥಗಳು ಧೃಡೀಕರಿಸುತ್ತಿವೆಯೆಂದು ದೇವರು ಗ್ರಂಥಗಳಲ್ಲಿ ಹೇಳಿದ ವಾಕ್ಯಗಳನ್ನು ತೋರಿಸುತ್ತಾ ಹೇಳಿದ್ದೇನೆ. ಅಷ್ಟೇ ಆಗಲೀ ನಾನು ಸ್ವತಃವಾಗಿ ಹೇಳಲಿಲ್ಲವಲ್ಲವೆ! ಖುರ್‌ಆನ್‌ನಲ್ಲಿ ಮೂರನೆಯ ಸೂರಾ, 3ನೇ ಆಯತ್ ನಲ್ಲೂ, 6ನೇ ಸೂರಾ, 92ನೇ ಆಯತ್‌ನಲ್ಲೂ ಹೇಳಿದ ವಾಕ್ಯಗಳನ್ನು, ಹಾಗೇ ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 5ನೇ ಅಧ್ಯಾಯದಲ್ಲಿ 17ನೇ ವಾಕ್ಯವನ್ನು ತೋರಿಸಿ ಹೇಳಿದ್ದೇನಾಗಲಿ, ನಾನು ಸ್ವತಃವಾಗಿ ಹೇಳಲಿಲ್ಲ ಅಲ್ಲವೆ! ದೇವರು ತನ್ನ ಗ್ರಂಥಗಳಲ್ಲಿ ಭಗವದ್ಗೀತೆಯನ್ನು ಸಮರ್ಥಿ ಸಿದ್ದಾನೆಂದು ತೋರಿಸಿ ಹೇಳಿದ್ದೇನೆ. ದೇವರಾದರೂ ಹಾಗೆ ಏಕೆ ಹೇಳಿದ್ದಾನೆಂದು ಪ್ರಶ್ನೆ ಬಂದರೆ ಅದಕ್ಕೆ ನಾನಾಗಲೀ, ದೇವರಾಗಲೀ ಒಂದೇ ಉತ್ತರ ಹೇಳುವುದಕ್ಕೆ ಅವಕಾಶವಿದೆ.

ಒಂದೇ ಜಾತಿಯಾಗಿ, ಒಂದೇ ದೇವರ ಸಂತತಿಯಾಗಿ ಹುಟ್ಟಿದ ಮನುಷ್ಯರು ಒಂದೇ ಜ್ಞಾನವನ್ನು ಆಶ್ರಯಿಸಿ, ಒಂದೇ ದೇವರನ್ನು ಆರಾಧಿಸುವುದಕ್ಕೆ ಆ ವಿಧವಾಗಿ ಹೇಳಬೇಕಾಗಿ ಬಂದಿದೆಯೆಂದು ಹೇಳಬಹುದು. ಮೂರು

ಗ್ರಂಥಗಳಿದ್ದರೂ ಮೊದಲು ಹುಟ್ಟಿದ ಗ್ರಂಥವನ್ನೇ ಅನುಸರಿಸುವುದರಿಂದ, ಎಲ್ಲರೂ ಒಂದೇ ಸಮಾಜವಾಗಿ ಇರಬಲ್ಲರೆನ್ನುವ ಉದ್ದೇಶದಿಂದ ದೇವರು ಆ ವಿಧವಾಗಿ ಹೇಳಿದ್ದಾನೆ. ಮೂರು ಗ್ರಂಥಗಳಲ್ಲಿನ ಜ್ಞಾನ ಒಂದೇ ಆಗಿರುವುದರಿಂದ, ಪ್ರಥಮ ದೈವ ಗ್ರಂಥವನ್ನು ಅನುಸರಿಸುವುದರಿಂದ, ಎಲ್ಲರೂ ಒಂದೇ ಗುಂಪಾಗಿ ಒಂದೇ ಉದ್ದೇಶದಿಂದ ಇರುತ್ತಾರೆಂದು, ಹಾಗಲ್ಲದೇ ಹೋದರೇ ಒಬ್ಬೊಬ್ಬರು ಒಂದೊಂದು ಗ್ರಂಥವನ್ನು ದೊಡ್ಡದಾಗಿ ಇಟ್ಟುಕೊಂಡರೆ, ಅವುಗಳಿಂದ ಮತಗಳು ಏರ್ಪಟ್ಟು ಒಂದೇ ಜಾತಿಯಂತಿರುವ ಮಾನವರು ನಾವು ಎತ್ತುಗಳು ನೀವು ಎಮ್ಮೆಗಳು ಎನ್ನುವಹಾಗೆ, ನಾವು ಬೇರೆ ನೀವು ಬೇರೆಯೆಂದು ಜಗಳಮಾಡುವರೆಂದು, ಆ ವಿಧವಾಗಿ ಮೂರರಲ್ಲಿ ಮೊದಲು ಬಂದಿರುವ ತನ್ನ ಗ್ರಂಥವನ್ನೇ ಸಮರ್ಥಿಸಿ, ಎರಡು ಗ್ರಂಥಗಳು ಮೊದಲ ಗ್ರಂಥವನ್ನು ಧೃಢಪಡಿಸುತ್ತಿವೆಯೆಂದು ಹೇಳಿದ್ದಾನೆ. ಹಾಗೆ ಹೇಳುವುದು ಮತಗಳು, ಮತದ್ವೇಷಗಳು ಇಲ್ಲದಂತಿರುವುದಕ್ಕೇ ಎಂದು ತಿಳಿಯಬೇಕು. ಆದರೂ ದೇವರ ಮಾತನ್ನು ಲೆಕ್ಕಿಸದವರು, ಆತನು ಹೇಳಿದಂತೆ ಪ್ರಥಮ ದೈವ ಗ್ರಂಥವನ್ನು ಗುರುತಿಸದೇ, ಒಬ್ಬೊಬ್ಬರು ಒಂದೊಂದು ಗ್ರಂಥವನ್ನು ಆಧಾರ ಮಾಡಿಕೊಂಡು, ಮತಗಳನ್ನು ಸೃಷ್ಠಿಸಿಕೊಂಡು, ವಿನಾಶದ ಕಡೆ ಪ್ರಯಾಣಿಸುತ್ತಿದ್ದಾರೆ. ಈ ದಿನ ಮತಗಳ ಸಮಾಜದಲ್ಲಿ ಇಂದಿಗಾದರೂ ದೇವರು ಹೇಳಿದ ವಾಕ್ಯಗಳ ಪ್ರಕಾರ ಪ್ರಥಮ ದೈವ ಗ್ರಂಥವನ್ನು ಆಶ್ರಯಿಸಿದರೆ ಮತಗಳೂ ಇರುವುದಿಲ್ಲ, ಮತದ್ವೇಷಗಳೂ ಇರುವುದಿಲ್ಲ. ನಿಜವಾದ ದೈವಜ್ಞಾನ ತಿಳಿದು ದೇವರನ್ನು ಸೇರಬಲ್ಲರು, ಸ್ವರ್ಗವನ್ನು ಅಲ್ಲ ದೇವರನ್ನು ಸೇರಬಲ್ಲರೆಂದು ಹೇಳುತ್ತಾ ಮುಗಿಸುತ್ತಿದ್ದೇವೆ.

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಐಕ್ಯೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ

## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ

ಪ್ರಬೋಧ ಸೇವಾ ಸಮಿತಿ

ಬ್ರಹ್ಮ ಚಕ್ರ

ಕಾಲ ಚಕ್ರ

ಕರ್ಮ ಚಕ್ರ

ಗುಣ ಚಕ್ರ

ಬ್ರಹ್ಮ ನಾಡಿ

ತ್ರೈತ ಸಿದ್ಧಾಂತ

## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ

ದ್ರಾವಿಡ ಶ್ರೇಷ್ಠಿ ಸಂಘ

ಮಧ್ಯಾತ್ಮ ವಾರ್ತಕನು

ಜೀವಿಯು ಶ್ರೇಷ್ಠಿ

ದೇವರು ಗುಪ್ತ

## ದ್ರಾವಿಡ ಶ್ರೇಷ್ಠಿ ಸಂಘ (D.S.S)

**(Regd.No.:     /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381
e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ಪ್ರಥಮ ದೈವ ಗ್ರಂಥ ಭಗವದ್ಗೀತೆ

ಪ್ರಮುಖರ ಲೇಖನ

ಸಾಕ್ಷಿ ತೆಲುಗು ನ್ಯೂಸ್ ಪೇಪರ್, 21-01-2014



## ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗು, ವಿಂಧ್ಯಪರ್ವತಗಳಿಗು ಮಧ್ಯದಲ್ಲಿ ಅಂದಿನ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೊ ನಮ್ಮ ದೇಶ ಭೂಪಟದಲ್ಲಿ ನೀನು ನೋಡಿದ್ದೀಯಾ. ಅದು ಬಾಲ ಚಂದ್ರಾಕಾರವಾಗಿ ಇದ್ದಹಾಗೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿದೆ.

ರಾಮಾಯಣ ಹುಟ್ಟಿದ ಬಹಳ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯೆ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಇಷ್ಟೂ ಅಷ್ಟೂ ಅಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವುಗಳೆಲ್ಲವುಕ್ಕಿಂತ ದೊಡ್ಡದಾದ ಭಗವದ್ಗೀತೆ ಅನ್ನುವ ಮಹಾ ಗ್ರಂಥ ಮಹಾಭಾರತದಲ್ಲಿರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದುದಾಗಿದೆ. ಸಾವಿರ ಸಂವತ್ಸರಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ದೊಡ್ಡ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದ ಮಕ್ಕಳು, ಪ್ರಯೋಜನ ಹೊಂದದ ಹಿರಿಯರಂತೂ ಇರುವುದಿಲ್ಲ.

•ನೆಹ್ರೂ ಇಂದಿರಾಗೆ ಬರೆದ ಲೇಖನದಿಂದ

ಎಲ್ಲ ಮತಗಳಿಗೂ ಸಂಬಂಧಪಟ್ಟಿರುವುದು